ಪ್ರತಿಭಾ ಗ್ರಂಥಮಾಲೆ, ವರುಷ ೧೩—ಕಿರಣ ೩.



ಪ್ರೇಮಚಂದರ ಅಮರ ಕಾದಂಬರಿ

# ಪ್ರತಿಜ್ಞೆ

ಅನುವಾದಿಕೆ :
ಶ್ರೀಮತಿ ಬಿ. ಕೆ. ಸುಬ್ಬಲಕ್ಷ್ಮಿ,
ರಾಷ್ಟ್ರಭಾಷಾ-ಪ್ರವೀಣೆ.

ಪ್ರತಿಭಾ ಗ್ರಂಥಮಾಲೆ, ಧಾರವಾಡ.

ನವೆಂಬರ್ ೧೯೫೫

ಬೆಲೆ: ೧—೮—೦

**ಪ್ರತಿಭಾ ಗ್ರಂಥಮಾಲೆ**
ಭಗತಸಿಂಗ ಬೀದಿ,
**ಧಾರವಾಡ.**

---

ಸಂಪಾದಕರು :
**ಭಾಲಚಂದ್ರ ಘಾಣೇಕರ**

---

ಮುದ್ರಕರು ಮತ್ತು ಪ್ರಕಾಶಕರು :
ಭಾಲಚಂದ್ರ ಘಾಣೇಕರ,
ಪ್ರತಿಭಾ ಮುದ್ರಣ,
ಧಾರವಾಡ.

---

ಮಾರಾಟಗಾರರು :
**ಸಮಾಜ ಪುಸ್ತಕಾಲಯ,**
**ಧಾರವಾಡ.**

---

ವಾರ್ಷಿಕ ಚಂದಾ :
ರಜಿಸ್ಟರ್ ಅಂಚೆ ವೆಚ್ಚ ಸೇರಿ
**೭ ರೂಪಾಯಿ**

---

ಈ ಪುಸ್ತಕದ ಬೆಲೆ :
೧—೮—೦

**ಪ್ರತಿಭಾ ಗ್ರಂಥಮಾಲೆಯ**
**ಚಂದಾದಾರರಿಗೆ—**

- ಮಾಲೆಯ ಹಿಂದಿನ ಪ್ರಕಟನೆಗಳು ಮುಕ್ಕಾಲು ಬೆಲೆಗೆ ದೊರೆಯುವವು.
- ಸಮಾಜ ಪುಸ್ತಕಾಲಯದ ಪುಸ್ತಕಗಳನ್ನು ಕೊಳ್ಳುವಲ್ಲಿ ವಿಶೇಷ ಸವಲತ್ತು. ವಿಚಾರಿಸಿರಿ.

# ಮುನ್ನುಡಿ

ದಿ. ಪ್ರೇಮಚಂದರ ಈ ಕಾದಂಬರಿಗೆ ಮುನ್ನುಡಿಯ ಅಗತ್ಯವಿದೆಯೆಂದು ನನಗಂತೂ ತೋರುವದಿಲ್ಲ. ಹಿಂದೀ ಸಾಹಿತ್ಯ ಕ್ಷೇತ್ರದಲ್ಲಿ ಅವರು " ಸಾಹಿತ್ಯ ಸಮ್ರಾಟ್ " ಎಂದು ಖ್ಯಾತನಾಮರಾಗಿದ್ದಾರೆ. ಅವರ ಅನೇಕ ಕಾದಂಬರಿಗಳು ಕನ್ನಡದಲ್ಲಿಯೂ ಬಂದಿವೆ. ಸಮಾಜದಲ್ಲಿಯ ಕುಂದು ಕೊರತೆಗಳನ್ನು ತಮ್ಮ ಕಾದಂಬರಿಯಲ್ಲಿಯ ಪಾತ್ರಗಳ ಮೂಲಕ ಮಾರ್ಮಿಕವಾಗಿ ಎತ್ತಿ ತೋರಿಸಿ ಅವಕ್ಕೆ ಪರಿಹಾರವನ್ನು ಕೂಡ ಸೂಚಿಸುತ್ತ ಓದುಗರಲ್ಲಿ ವಿಚಾರಕ್ರಾಂತಿಯನ್ನೆಬ್ಬಿಸುವ ದಿ. ಪ್ರೇಮಚಂದರ ಲೇಖನ ಕಲೆಯ ವೈಶಿಷ್ಟ್ಯವನ್ನು ಎಲ್ಲರೂ ಮೆಚ್ಚಿಕೊಂಡುದಿದೆ.

ಇನ್ನು ಅನುವಾದಕರ ಬಗೆಗೆ ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ.

ಈ ಸುಂದರ ಅನುವಾದವನ್ನು ಕನ್ನಡಿಗರಿಗೆ ನೀಡಿದ ಶ್ರೀಮತಿ ಬಿ. ಕೆ. ಸುಬ್ಬಲಕ್ಷ್ಮಿ ಅವರು ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯ ಅತ್ಯುಚ್ಚ ಪರೀಕ್ಷೆಯಾದ ಪ್ರವೀಣ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಹಾಸನದಲ್ಲಿ ಹಿಂದೀ ಪ್ರಚಾರಿಕೆಯರಾಗಿ ಕಾರ್ಯ ಮಾಡುತ್ತಿದ್ದರೂ ಕನ್ನಡದಲ್ಲಿಯೂ ಆಗಾಗ್ಗೆ ಮಾಸಪತ್ರಿಕೆಗಳಲ್ಲಿ ಕತೆಗಳನ್ನೂ ಲೇಖನಗಳನ್ನೂ ಬರೆಯುತ್ತಿರುತ್ತಾರೆ. ಇವರ ಕನ್ನಡ ಸಾಹಿತ್ಯಸೇವೆ ಪುಸ್ತಕ ರೂಪದಲ್ಲಿ ಬರುತ್ತಿರುವದು ದಿ. ಪ್ರೇಮಚಂದರ 'ಪ್ರತಿಜ್ಞೆ' ಎಂಬ ಕಾದಂಬರಿಯಿಂದಲೇ ಮೊದಲು. ಇವರು ಇನ್ನೂ ಹೆಚ್ಚಾಗಿ ಕನ್ನಡಕ್ಕೆ ಹಿಂದೀಯಿಂದ ಸೇವೆ ಸಲ್ಲಿಸಲಿ; ಮತ್ತು ಅದೇ ರೀತಿ ಕನ್ನಡದಿಂದ ಹಿಂದೀಗೂ ಸೇವೆ ಸಲ್ಲಿಸಲೆಂದೂ ಇವರಿಂದ ಕನ್ನಡ ಹಾಗು ಹಿಂದೀ ಸಾಹಿತ್ಯ ಸೇವೆಯು ಇತೋಪ್ಯಧಿಕವಾಗಿ ಬೆಳೆಯಲೆಂದೂ ಹಾರೈಸುವೆ.

—ಗುರುನಾಥ ಜೋಶಿ

# ಪ್ರತಿಭಾ ಗ್ರಂಥಮಾಲೆಯ

## ೧೩ನೇ ವರುಷದ ಕಿರಣಗಳು.



## ಬಂದಿವೆ:

೧. **ಜೀವದಾನ** (ಕಾದಂಬರಿ) ೧—೦—೦
ಶ್ರೀ. ನಾರಾಯಣ ಹುಲಿಗಿ, ಎಂ. ಎ.

೨. **ವಿದ್ಯಾ** (ಸಾಮಾಜಿಕ ನಾಟಕ) ೦–೧೨—೦
‘ ಎನ್ಕೆ ’

೩. **ಪ್ರತಿಜ್ಞೆ** (ಪ್ರೇಮಚಂದ-ಕಾದಂಬರಿ) ೧—೮—೦
ಶ್ರೀಮತಿ ಸುಬ್ಬಲಕ್ಷ್ಮಿ, ರಾಷ್ಟ್ರಭಾಷಾಪ್ರವೀಣೆ

೪. **ಮಾವನ ಆಸ್ತಿ** (ಕಾದಂಬರಿ) ೧—೪—೦
ಶ್ರೀ. ಕೆ. ವೀರೇಶ

## ಬರಲಿವೆ:

೫. **ಆಶ್ರಮವಾಸಿ** (ಕಾದಂಬರಿ)
ಶ್ರೀ. ಬಸವರಾಜ ಕಟ್ಟೀಮನಿ

೬. **ಕನಸಿನ ಕನ್ನಡಿ** (ಕಥಾಸಂಕಲನ)
ಶ್ರೀ. ವೆಂ. ಮು. ಜೋಶಿ

೭. **ಬರಡು ಬಾಳು** (ಕಾದಂಬರಿ)
ಶ್ರೀ. ಜೈನೇಂದ್ರಕುಮಾರ

—ಇತ್ಯಾದಿ.

# ಪ್ರತಿಜ್ಞೆ

## ೧

ಕಾಶಿಯ ಆರ್ಯಮಂದಿರದಲ್ಲಿ ಪಂಡಿತ ಅಮರನಾಥನ ಭಾಷಣವಾಗುತ್ತಿತ್ತು. ಶ್ರೋತೃಗಳು ಮಂತ್ರಮುಗ್ಧರಂತೆ ಕುಳಿತು ಕೇಳುತ್ತಿದ್ದರು.

ಪ್ರೊಫೆಸರ್ ದಾನನಾಥನು ಮುಂದೆ ಸರಿದು ತನ್ನ ಮಿತ್ರ ಬಾಬು ಅಮೃತರಾಯನ ಕಿವಿಯಲ್ಲಿ ಹೇಳಿದನು: "ಕಂಠಪಾಠ ಮಾಡಿರುವ ಭಾಷಣ !"

ಅಮೃತರಾಯನು ಭಾಷಣ ಕೇಳುವುದರಲ್ಲಿಯೇ ತಲ್ಲೀನನಾಗಿದ್ದುದರಿಂದ ಯಾವ ಉತ್ತರವನ್ನೂ ಕೊಡಲಿಲ್ಲ.

ದಾನನಾಥನು ಪುನಃ ಹೇಳಿದನು: "ಚೆನ್ನಾಗಿ ಕಂಠಪಾಠ ಮಾಡಿರುವಂತೆ ಕಾಣುತ್ತದೆ. ಇಲ್ಲಿ ಕುಳಿತಿರುವುದರಿಂದ ಯಾವ ಪ್ರಯೋಜನವೂ ಇಲ್ಲ. ಟೆನ್ನಿಸಿನ ಕಾಲವೂ ವ್ಯರ್ಥವಾಗಿ ಕಳೆದುಹೋಗುತ್ತಿದೆ."

ಅಮೃತರಾಯನು ಆಗಲೂ ಯಾವ ಉತ್ತರವನ್ನೂ ಕೊಡಲಿಲ್ಲ. ಕ್ಷಣ ಕಾಲ ಸುಮ್ಮನಿದ್ದು ದಾನನಾಥನು ಪುನಃ ಹೇಳಿದನು— "ಮಿತ್ರ, ನಾನಂತೂ ಹೋಗುತ್ತೇನೆ."

ಅಮೃತರಾಯನು ಅವನ ಕಡೆ ನೋಡದೆಯೇ ಹೇಳಿದನು— ಹೊರಡಿರಿ.

ದಾನನಾಥ:— ಎಷ್ಟು ಹೊತ್ತು ಹೀಗೆಯೇ ಕುಳಿತಿರುವೆ ?

ಅಮೃತರಾಯ :— ನಾನಂತೂ ಭಾಷಣವನ್ನು ಪೂರ್ಣ ಕೇಳಿದ ನಂತರವೇ ಹೋಗುವೆನು.

ದಾನನಾಥ:— ಸರಿ. ನೀನೊಬ್ಬ ಶುದ್ಧ ತಿಳಿಗೇಡಿ. ಅಯ್ಯಾ, ಈ ಭಾಷಣದಲ್ಲಿ ಇರುವ ಸಾರವಾದರೂ ಏನು ? ಕಂಠಪಾಠ ಮಾಡಿರುವುದನ್ನೇ ಹೇಳುತ್ತಿದ್ದಾನೆ.

ಅಮೃತರಾಯ :— ಹಾಗಾದರೆ ತಾವು ಹೋಗಬಹುದಲ್ಲ ! ನಾನೇನು ತಮ್ಮನ್ನು ಅಡ್ಡಿಪಡಿಸುತ್ತಿಲ್ಲ.

ದಾನನಾಥ :— ಅವನಂತೂ ಗಂಟೆಗಟ್ಟಲೆ ಮಾತನಾಡುವನು. ಇದೇನು ಭಾಷಣವೋ ಅಥವಾ ಸೂಳೆಯರ ಕುಣಿತವೋ ?

ಅಮೃತ :— ಹಾಗೆನ್ನಬೇಡ. ನನಗೆ ಕೇಳಲು ಅವಕಾಶವನ್ನು ಕೊಡು. ಏನು ಗಲಭೆ ಮಾಡುತ್ತಿರುವೆ ? ನೀನು ಹೋಗಬೇಕಾಗಿದ್ದರೆ ಹೋಗು. ನಾನಂತೂ ಭಾಷಣವನ್ನು ಪೂರ್ತಿ ಕೇಳಿಕೊಂಡೇ ಬರುವೆನು.

ದಾನ :— ಪಶ್ಚಾತ್ತಾಪ ಪಡುವೆ. ಇಂದು ಪ್ರೇಮಾ ಕೂಡ ಆಟಕ್ಕೆ ಬರುವಳು.

ಅಮೃತ :— ಹಾಗಾದರೆ ನೀನು ನನ್ನ ಪರವಾಗಿ ಅವಳ ಕ್ಷಮೆ ಬೇಡು.

ದಾನ :— ನಿನ್ನ ಪರವಾಗಿ ಅವಳ ಕ್ಷಮೆ ಬೇಡಲು ನನಗೇನು ಹುಚ್ಚು ಹಿಡಿದಿದೆಯೇ ?

ಅಮೃತ :— ಒಳ್ಳೆಯದು, ಕೇಳಬೇಡ. ಯಾವ ರೀತಿಯಿಂದಲಾದರೂ ನೀನು ನನಗೆ ತೊಂದರೆ ಕೊಡದಿದ್ದರೆ ಸಾಕು.

ದಾನನಾಥನು ಇಷ್ಟು ಸುಲಭವಾಗಿ ಬಿಟ್ಟುಹೋಗುವ ಮನುಷ್ಯನಾಗಿರಲಿಲ್ಲ. ಗಡಿಯಾರವನ್ನು ಹೊರಕ್ಕೆ ತೆಗೆದು ನೋಡಿದನು ತನ್ನ ಮಾತಿನ ರೀತಿಯನ್ನು ಸ್ವಲ್ಪ ಬದಲಾಯಿಸಿಕೊಂಡು ಅಮರನಾಥನ ಕಡೆಗೆ ನೋಡಲಾರಂಭಿಸಿದನು. ಅವನ ಲಕ್ಷ್ಯವು ಭಾಷಣದ ಕಡೆಗಿರಲಿಲ್ಲ, ಭಾಷಣಕಾರನ ಗಡ್ಡದ ಕಡೆಗಿತ್ತು. ಅದು ಅಲುಗುವುದನ್ನು ನೋಡಿ ಅವನಿಗೆ ಹಿಡಿಸಲಾರದಷ್ಟು ಆನಂದವಾಯಿಶು. ಮಾತನಾಡಬೇಕೆಂಬ ಇಚ್ಛೆಯಾಯಿತು. ಇಂತಹ ಮನರಂಜಕವಾದ ದೃಶ್ಯವನ್ನು ನೋಡಿ ಅವನು ಹೇಗೆ ತಾನೆ ಸುಮ್ಮನೆ ಕುಳಿತಿದ್ದಾನು ? ಅಮೃತರಾಯನ ಕೈಯನ್ನು ಅದುಮಿ ಹೇಳಿದನು—ಪಂಡಿತರ ಗಡ್ಡವು ಎಷ್ಟು ಚೆನ್ನಾಗಿ ಅಲುಗಾಡುತ್ತಿದೆ ! ಕಿತ್ತು ಎಸೆಯಬೇಕೆನಿಸುತ್ತದೆ.

ಅಮೃತ :— ನೀನೆಂತಹ ಹತಭಾಗ್ಯ ! ಇಂತಹ ಸುಂದರವಾದ ಭಾಷಣದ ರಸಾಸ್ವಾದನೆ ಮಾಡಲಸಮರ್ಥನಾಗಿರುವೆಯಲ್ಲ !

ಅಮರನಾಥನು ಹೇಳಿದನು—"ನಾನು ತಮ್ಮೆದುರಿಗೆ ಭಾಷಣಮಾಡಲು ಬಂದಿಲ್ಲ.

ದಾನ :— ( ಮೆಲ್ಲಗೆ ) ಮತ್ತೇನು, ತಾವು ಕತ್ತಿ ಮೇಯಿಸಲು ಬಂದಿದ್ದೀರೋ?

ಅಮರ :— "ಬಹಳ ಮಾತುಗಳಾದುವು. ಈಗ ಕಾರ್ಯರಂಗಕ್ಕಿಳಿಯುವ ಸಮಯ ಬಂದಿದೆ."

ದಾನ ;— (ಮೆಲ್ಲಗೆ) ನಿಮ್ಮ ನಾಲಿಗೆ ಹತೋಟಿಯಲ್ಲಿದ್ದರೆ ತಾನೆ!

ಅಮರ:— "ಇಲ್ಲಿ ನೆರೆದಿರುವವರಲ್ಲಿ ವಿಧುರರು ಯಾರಾದರೂ ಇದ್ದರೆ, ದಯವಿಟ್ಟು ಅವರೆಲ್ಲರೂ ತಮ್ಮ ತಮ್ಮ ಕೈ ಎತ್ತಲಿ."

ದಾನ:— "ಓಹೋ! ಇಲ್ಲಿ ಕುಳಿತಿರುವವರೆಲ್ಲರೂ ಹಾಗಾದರೆ ವಿಧುರರೇ ತಾನೆ?"

ಅಮರ:— "ವೈಧವ್ಯದ ಸುಳಿಗೆ ಸಿಕ್ಕಿ ತೊಳಲುತ್ತಿರುವ ಅಬಲೆಯರ ಕೈ ಹಿಡಿದು ಅವರನ್ನು ರಕ್ಷಿಸಲು ಸಾಹಸ ಮಾಡುವ ಮಹಾಶಯರು ತಮ್ಮಲ್ಲಿ ಎಷ್ಟು ಮಂದಿ ಇದ್ದೀರಿ? ಅವರು ದಯವಿಟ್ಟು ಎತ್ತಿದ ಕೈಯನ್ನು ಹಾಗೆಯೇ ಇಟ್ಟಿರಲಿ."

"ಅಯ್ಯೊ! ಇದೇನು? ಸುತ್ತಲೂ ಮೇಲೆತ್ತಿದ್ದ ಕೈಗಳಲ್ಲಿ ಒಂದೂ ಕಾಣಿಸುತ್ತಿಲ್ಲ! ನಮ್ಮ ಯುವಕ ಸಮಾಜವು ಇಷ್ಟೊಂದು ಕರ್ತವ್ಯಶೂನ್ಯವಾಗಿಯೂ ಹೇಡಿಯಾಗಿಯೂ ಇದೆಯೆ? ಇಲ್ಲ, ಇಲ್ಲ—ಅಗೋ ನೋಡಿರಿ. ಒಂದು ಕೈ ಮಾತ್ರ ಈಗಲೂ ಎತ್ತಿದಂತೆಯೇ ಇದೆ. ಆ ಏಕಮಾತ್ರ ಹಸ್ತವು ಯುವಕ ಮಂಡಲಿಯ ಗೌರವ ರಕ್ಷಣೆ ಮಾಡುತ್ತಿದೆ." ಎಲ್ಲರ ದೃಷ್ಟಿಯೂ ಆ ಕಡೆಗೇ ತಿರುಗಿತು. ಅರೆ, ಇವನಾದರೋ ಬಾಬು ಅಮೃತರಾಯ!

ದಾನನಾಥನು ಅಮೃತರಾಯನ ಕಿವಿಯಲ್ಲಿ ಹೇಳಿದನು— "ಇದೇನು ಮಾಡುತ್ತಿದ್ದೀಯೆ? ಕೈ ಕೆಳಗೆ ಬಿಡು."

ಅಮೃತರಾಯನು ದೃಢಮನಸ್ಸಿನಿಂದ ಉತ್ತರವಿತ್ತನು— "ಮುಂದಿಟ್ಟ ಹೆಜ್ಜೆಯನ್ನು ಹಿಂದಕ್ಕೆ ತೆಗೆಯಲಾರೆ."

ಭಾಷಣಕಾರನು ಹೇಳಿದನು— "ಇಷ್ಟು ದೊಡ್ಡ ಸಭೆಯಲ್ಲಿ ಒಂದು ಕೈ ಮಾತ್ರ ಎತ್ತಿರುವುದನ್ನು ನೋಡುತ್ತಿದ್ದೇನೆ. ಇಷ್ಟು ದೊಡ್ಡ ಸಭೆಯಲ್ಲಿ ಕೇವಲ ಒಬ್ಬ ವ್ಯಕ್ತಿಯೇ ಕರುಣಾಳುವೆ? ಉಳಿದವರೆಲ್ಲರೂ ಪಾಷಾಣ ಹೃದಯಿಗಳೆ?"

ಅಮೃತರಾಯನು ದಾನನಾಥನ ಕಿವಿಯಲ್ಲಿ ಹೇಳಿದನು— "ನೀನೇಕೆ ಕೈ ಎತ್ತುವುದಿಲ್ಲ ?"

ದಾನ:— "ನನ್ನಲ್ಲಿ ಪರನಿಂದೆಗೆ ಪಾತ್ರನಾಗುವಷ್ಟು ಸಾಹಸವಿಲ್ಲ."

ಅಮರ:— "ಇಷ್ಟು ಹೊತ್ತಿನವರೆಗೂ ಬೇರಾವ ಕೈಯೂ ಮೇಲೆತ್ತಿದಂತೆ ಕಾಣುತ್ತಿಲ್ಲ. ಇದು ತಮ್ಮ ಇಷ್ಟಕ್ಕೆ ಸೇರಿದ್ದು. ನಾನು ಯಾರನ್ನೂ ಬಲವಂತ ಮಾಡುವುದಿಲ್ಲ. ಆದರೆ ನಿಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುವುದಿಷ್ಟೆ. ಭಾಷಣದ ಮುಖ್ಯಾಂಶಗಳನ್ನು ಮಾತ್ರ ಮರೆಯಬೇಡಿರಿ. ಬಾಬು ಅಮೃತರಾಯರನ್ನು ಅವರ ಸಾಹಸಕ್ಕಾಗಿ ಮನಃಪೂರ್ವಕವಾಗಿ ಅಭಿನಂದಿಸುತ್ತೇನೆ."

ಸಭೆ ಮುಗಿಯಿತು. ಜನರು ತಮ್ಮ ತಮ್ಮ ಮನೆಗಳಿಗೆ ಹೊರಟರು. ಪಂಡಿತ ಅಮರನಾಥನೂ ಎಲ್ಲರಿಂದಲೂ ಬೀಳ್ಕೊಂಡನು. ಕೇವಲ ಒಬ್ಬ ವ್ಯಕ್ತಿಯು ತನ್ನ ತಲೆಯನ್ನು ಬಗ್ಗಿಸಿಕೊಂಡು ಸಭಾಭವನದಲ್ಲಿ ಇನ್ನೂ ಕುಳಿತಿದ್ದನು. ಇವನು ಅಮೃತರಾಯನೆಂದು ಹೇಳಬೇಕಾದ್ದಿಲ್ಲ.

ದಾನನಾಥನು ಒಂದು ನಿಮಿಷದ ನಂತರ ಹೊರಗೆ ನಿಂತುಕೊಂಡು ಅವನ ದಾರಿ ನೋಡಿದನು. ಆಗ ಸಭಾಭವನವನ್ನು ಪ್ರವೇಶಿಸಿ ಹೇಳಿದನು— "ಹೊರಡುವೆಯೋ ಅಥವಾ ಇಲ್ಲೇ ಕುಳಿತಿರುವೆಯೋ?"

ಅಮೃತರಾಯನು ಬೆಚ್ಚಿಬಿದ್ದು ನುಡಿದನು— "ಸರಿ, ಸರಿ ನಡೆ, ಹೋಗೋಣ."

ಇಬ್ಬರು ಗೆಳೆಯರೂ ಒಂದು ಜಟಕಾ ಮಾಡಿಕೊಂಡು ಹೊರಟರು. ದಾನನಾಥನಿಗೆ ತುಂಬಾ ಹಸಿವಾಗುತ್ತಿತ್ತು. ಹೇಳಿದನು— "ಇಂದು ನಿನಗೇನಾಯಿತು ?"

ಅಮೃತ:— "ನಿನಗೆ ತಿಳಿಯದುದು ನನಗೆ ತಿಳಿಯಿತು. ಅಷ್ಟೆ."

ದಾನ:— "ಪ್ರೇಮಾ ಕೇಳಿದರೆ ಏನೆನ್ನುವಳು ?"

ಅಮೃತ:— "ಸಂತೋಷಪಡುವಳು. ಮತ್ತೇನಿಲ್ಲದಿದ್ದರೂ ಅವಳು ಸಂತೋಷಪಡಲೇ ಬೇಕು. ತನ್ನ ಸ್ನೇಹಿತರು ಕರ್ತವ್ಯನಿಷ್ಠರಾಗುವುದನ್ನು ನೋಡಿ ಸಂತೋಷಪಡದವರಾರು ?"

ದಾನ:— "ಹೋಗು ಹೋಗಯ್ಯಾ, ನನಗೆಲ್ಲಾ ಗೊತ್ತು. ನೆಪಮಾಡು

ವುದರಿಂದೇನು ಪ್ರಯೋಜನ? ಅವಳು ನಿನ್ನನ್ನು ಎಷ್ಟು ಪ್ರೀತಿಸುತ್ತಾಳೆಂಬುದು ನಿನಗೇ ಗೊತ್ತಿದೆ. ವಿವಾಹವೇನೋ ಆಗಿಲ್ಲ; ಆದರೂ ಅವಳು ನಿನ್ನ ನಿಶ್ಚಿತ ವಧು ಎಂಬುದನ್ನು ಊರಿಗೆ ಊರೇ ಬಲ್ಲುದು. ಯೋಚಿಸಿ ನೋಡು, ನೀನು ಈಗಾಗಲೇ ಅವಳಿಗೆ ಎಷ್ಟು ಸಾರಿ ಪ್ರೇಮಪತ್ರಗಳನ್ನು ಬರೆದಿದ್ದೀಯೆ. ಮೂರು ವರ್ಷಗಳಿಂದ ಅವಳು ನಿನ್ನನ್ನೇ ಪತಿಯೆಂದು ನಂಬಿಕೊಂಡಿದ್ದಾಳೆ. ಅಯ್ಯಾ ಗೆಳೆಯ, ಇಂತಹ ರತ್ನವು ನಿನಗೆ ಪ್ರಪಂಚದಲ್ಲಿ ಮತ್ತೆಲ್ಲಿ ದೊರೆಕುವುದು? ನೀನು ಅವಳನ್ನು ಮದುವೆ ಮಾಡಿಕೊಳ್ಳದಿದ್ದರೆ, ನಿನ್ನ ಜೀವನವೇ ನಷ್ಟವಾಗುವುದು. ಕರ್ತವ್ಯ ದೃಷ್ಟಿಯಿಂದ ನೀನು ಏನು ಬೇಕಾದರೂ ಮಾಡು; ಆದರೆ ಅವಳನ್ನು ನೀನು ಎಂದೆಂದಿಗೂ ಕೈಬಿಡಲಾರೆ."

ಅಮೃತ:— "ಸೋದರ, ಇದೆಲ್ಲವನ್ನೂ ನಾನು ಚೆನ್ನಾಗಿ ಬಲ್ಲೆ. ಆದರೆ ನನ್ನ ಮನಸ್ಸು ಮಾತ್ರ ನನಗೆ ಅವಳನ್ನು ಕೈಹಿಡಿಯುವ ಅಧಿಕಾರವಿಲ್ಲವೆಂದು ಹೇಳುತ್ತಿದೆ. ಪಂಡಿತ ಅಮರನಾಥನ ಮಾತು ನನ್ನ ಮನಸ್ಸಿನಲ್ಲಿ ನಾಟಿಕೊಂಡಿದೆ."

ದಾನನಾಥನು ಅಮರನಾಥನ ಹೆಸರನ್ನು ಕೇಳಿದೊಡನೆಯೇ ತಾತ್ಸಾರದಿಂದ ಹೇಳಿದನು — "ಎಷ್ಟು ಹೇಳಿದರೂ ತೀರದು. ಭಲೆ! ಉರುಹೊಡೆದು ಒಂದು ಭಾಷಣ ಕೊಟ್ಟುಬಿಟ್ಟನು. ನೀನು ಮುಗ್ಧನಾಗಿ ಬಿಟ್ಟೆ. ಆ ಬಡಪಾಯಿ ಸಮಾಜದ ವ್ಯವಸ್ಥೆಯನ್ನು ಸರಿಪಡಿಸುವನೆ? ಮಣ್ಣು! ಎಂತಹ ಒಳ್ಳೆಯ ಸಿದ್ಧಾಂತ! ಮೊದಲಿನ ಪತ್ನಿಯರನ್ನು ಕಳೆದುಕೊಂಡಿರುವವರೆಲ್ಲರೂ ವಿಧವೆಯರನ್ನು ಮದುವೆಯಾಗಬೇಕಂತೆ!"

ಅಮೃತ:— "ಧರ್ಮ ಹೇಳುವುದೂ ಇದೇ!"

ದಾನ:— "ಸಾಕು ಮಾಡು ನಿನ್ನ ಈ ಧರ್ಮವನ್ನು. ನೀನೊಬ್ಬನು ನ್ಯಾಯಮಾರ್ಗದಲ್ಲಿ ನಡೆದ ಮಾತ್ರಕ್ಕೇ ವಿಶ್ವದ ಉದ್ಧಾರವಾಗಲಾರದು. ಒಂಟಿಯಾಗಿ ನೀನು ಏನನ್ನೂ ಮಾಡಲಾರೆ. ನಿನ್ನ ಈ ನಿರ್ಧಾರದಿಂದ ಲೋಕಾಪವಾದಕ್ಕೆ ಗುರಿಯಾಗುವುದಂತೂ ಖಂಡಿತ!"

ಅಮೃತರಾಯನು ದಾನನಾಥನನ್ನು ಸಗರ್ವದೃಷ್ಟಿಯಿಂದ ನೋಡುತ್ತ ಹೇಳಿದನು— "ಮನುಷ್ಯನು ಒಂಟಿಯಾಗಿಯೂ ಅಧಿಕ ಕೆಲಸವನ್ನು ಮಾಡಬಲ್ಲನು. ಏಕಾಂಗಿಯಾಗಿದ್ದ ಮಾನವರೇ ಆದಿಯಿಂದಲೂ ವಿಚಾರಾತ್ಮಕ

ಕ್ರಾಂತಿಯನ್ನೆಬ್ಬಿಸಿದ್ದಾರೆ. ಏಕಾಂಗಿಯಾಗಿದ್ದ ಮಾನವರ ಮಹತ್ಕಾರ್ಯಗಳಿಂದಲೇ ಇತಿಹಾಸವು ತುಂಬಿ ಹೋಗಿದೆ. ಗೌತಮಬುದ್ಧನು ಯಾರು? ಅವನು ಏಕಾಂಗಿಯಾಗಿಯೇ ತನ್ನ ತತ್ವ ಪ್ರಚಾರಕ್ಕಾಗಿ ಹೊರಟಿದ್ದನು ಮತ್ತು ಅವನ ಜೀವನ ಕಾಲದಲ್ಲಿಯೇ ಪ್ರಪಂಚದ ಅರ್ಧ ಭಾಗ ಜನರು ಅವನ ತತ್ವ ಗ್ರಹಣ ಮಾಡಿ ಅವನನ್ನು ಗೌರವಿಸಿದರು. ಏಕಾಂಗಿ ವ್ಯಕ್ತಿಗಳೇ ರಾಜ್ಯಗಳನ್ನು ಸ್ಥಾಪಿಸಿ ಅಭಿವೃದ್ಧಿಪಡಿಸಿಕೊಂಡು ಬಂದಿದ್ದಾರೆ. ರಾಷ್ಟ್ರಗಳೆಲ್ಲಾ ನಾಶವಾಗಿವೆ. ಇಂದು ಅವುಗಳ ಅವಶೇಷವೂ ಗೋಚರವಾಗುತ್ತಿಲ್ಲ. ಆದರೆ ಆ ರಾಜ್ಯಸ್ಥಾಪಕರ ಹೆಸರುಗಳು ಇನ್ನೂ ಜಗತ್ತಿನಲ್ಲಿ ಉಳಿದುಕೊಂಡಿವೆ. ಪ್ಲೇಟೋನ ಹೆಸರು ಅಮರವಾದುದೆಂಬುದನ್ನು ನೀನು ಬಲ್ಲೆ. ಆದರೆ ಅವನು ಯಾವ ದೇಶದ ನಿವಾಸಿಯೆಂಬುದನ್ನು ತಿಳಿದಿರುವವರೆಷ್ಟು ಮಂದಿ ಇದ್ದಾರೆ? ನಾನು ಒಂಟಿಯಾಗಿ ಏನೂ ಮಾಡದಿರಬಹುದು. ಅದು ಪ್ರತ್ಯೇಕವಾದ ವಿಷಯ. ಹಾಗೆ ಹೇಳುವುದಾದರೆ ಸಮೂಹವೂ ಏನೂ ಮಾಡಲಾರದು—ಸಮೂಹವಾದರೋ ಎಂದೂ ಏನನ್ನೂ ಮಾಡಲಾರದು; ಆದರೆ ಮನುಷ್ಯನು ಒಂಟಿಯಾಗಿ ಏನೂ ಮಾಡಲಾರನೆಂಬ ತತ್ವವನ್ನು ನಾನು ಒಪ್ಪುವುದಿಲ್ಲ."

ದಾನನಾಥನು ಸರಳ ಸ್ವಭಾವದ ವ್ಯಕ್ತಿಯಾಗಿದ್ದನು. ಜೀವನದ ನಿಷ್ಕಂಟಕವಾದ ಮಾರ್ಗದಲ್ಲಿ ನಡೆಯುವುದರಿಂದಲೇ ಅವನಿಗೆ ತೃಪ್ತಿಯಾಗುತ್ತಿತ್ತು. ಯಾವುದೇ ಸಿದ್ಧಾಂತ ಅಥವಾ ಆದರ್ಶಕ್ಕಾಗಿ ಕಷ್ಟವನ್ನನುಭವಿಸುವುದನ್ನು ಅವನು ಕಲಿತೇ ಇರಲಿಲ್ಲ. ಅವನು ಕಾಲೇಜೊಂದರಲ್ಲಿ ಅಧ್ಯಾಪಕನಾಗಿದ್ದನು. ಹತ್ತು ಗಂಟೆಗೆ ಕಾಲೇಜಿಗೆ ಹೋಗುತ್ತಿದ್ದನು. ಒಂದು ಗಂಟೆಗೆ ಹಿಂತಿರುಗಿ ಬರುತ್ತಿದ್ದನು. ದಿನದ ಉಳಿದ ಕಾಲವನ್ನೆಲ್ಲಾ ವಿಹಾರ ವಿನೋದಗಳಲ್ಲಿಯೇ ಕಳೆಯುತ್ತಿದ್ದನು.

ಅಮೃತರಾಯನು ತಾತ್ವಿಕ ಪ್ರವೃತ್ತಿಯ ಮನುಷ್ಯನಾಗಿದ್ದನು. ಬಹಳ ಸಂಯಮಿಯೂ ಆಗಿದ್ದನು. ನಿಯಮ ವಿರುದ್ಧವಾದ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಜೀವನವನ್ನು ಸದ್ವಿನಿಯೋಗಪಡಿಸಿಕೊಳ್ಳುವುದು 'ಹೇಗೆಂಬುದನ್ನು ಅವನು ಸಂತತ ಚಿಂತಿಸುತ್ತಿದ್ದನು. ಸಂಕಲ್ಪವನ್ನು ಬಿಡದ ಸ್ಥಿರಚಿತ್ತನಾಗಿದ್ದನು. ಒಂದು ಸಾರಿ ಏನಾದರೂ ನಿಶ್ಚಯ ಮಾಡಿದನೆಂದರೆ ಅದನ್ನು ಪೂರ್ತಿಗೊಳಿಸದೆ ಬಿಡುತ್ತಿರಲಿಲ್ಲ. ಅವನು ವಕೀಲನಾಗಿದ್ದನು. ಆದರೆ

ಈ ಕಸಬು ಅವನಿಗೆ ಪ್ರಿಯವಾಗಿರಲಿಲ್ಲ. ವಾದಿ, ಪ್ರತಿವಾದಿಗಳ ಮಾತುಗಳನ್ನು ಕೇಳುವುದಕ್ಕಿಂತಲೂ ವಿದ್ವಾಂಸರ ಮೂಕವಾಣಿಯನ್ನು ಕೇಳುವುದರಲ್ಲಿಯೇ ಅವನಿಗೆ ತುಂಬಾ ಆನಂದವಾಗುತ್ತಿತ್ತು. ಸುಳ್ಳು ಮೊಕದ್ದಮೆಯನ್ನು ಅವನೆಂದೂ ವಹಿಸಿಕೊಳ್ಳುತ್ತಿರಲಿಲ್ಲ. ಆದರೆ ತಾನು ವಹಿಸಿಕೊಂಡ ಮೊಕದ್ದಮೆಗಳಿಗಾಗಿ ತನ್ನ ಪ್ರಾಣವನ್ನೇ ಪಣವಾಗಿಟ್ಟು ವಾದಿಸುತ್ತಿದ್ದನು. ಸ್ವಾಭಾವಿಕವಾಗಿ ದಯಾಳುವಾಗಿದ್ದನು. ಯಾವ ಕೆಟ್ಟ ಚಟವೂ ಅವನ ಬೆನ್ನು ಹತ್ತಿರಲಿಲ್ಲ. ಧನಾರ್ಜನೆ ಮಾಡಬೇಕೆಂಬ ಪ್ರಬಲ ಇಚ್ಛೆಯೂ ಇರಲಿಲ್ಲ. ಆದ್ದರಿಂದ ಗಿರಾಕಿಗಳು ಕೊಡುವ ಅಲ್ಪ ಸಂಭಾವನೆಯನ್ನೇ ಸಂತೋಷಪೂರ್ವಕವಾಗಿ ಒಪ್ಪಿಕೊಳ್ಳುತ್ತಿದ್ದನು. ಈ ಕಾರಣದಿಂದಲೋ ಏನೋ ಅವನಿಗೆ ಮೊಕದ್ದಮೆಗಳಲ್ಲಿ ಸೋಲಾಗುತ್ತಿದ್ದುದೇ ಅಪರೂಪ. ಅವನು ಕಾಲೇಜಿನಲ್ಲಿ ಓದುತ್ತಿದ್ದಾಗಲೇ ಅವನಿಗೆ ಮೊದಲನೆಯ ಲಗ್ನವಾಗಿತ್ತು. ಒಂದು ಗಂಡು ಮಗುವೂ ಆಗಿತ್ತು. ಆದರೆ ಹೆಂಡತಿ ಮತ್ತು ಮಗು—ಇಬ್ಬರೂ ಪ್ರಸವಕಾಲದಲ್ಲಿಯೇ ಸ್ವರ್ಗಸ್ಥರಾದರು. ಅಮೃತರಾಯನಿಗೆ ತಂಗಿಯಲ್ಲಿ ತುಂಬಾ ಪ್ರೇಮವಿತ್ತು. ನಾನು ಇನ್ನೆಂದಿಗೂ ವಿವಾಹ ಮಾಡಿಕೊಳ್ಳುವುದಿಲ್ಲವೆಂದು ಅವನು ನಿಶ್ಚಯಿಸಿದ್ದನು. ಆದರೆ ತಂಗಿಯ ಮದುವೆಯಾಗಿ, ತಾಯಿ ತಂದೆಯರಿಬ್ಬರೂ ಕೇವಲ ಒಂದೇ ವಾರದಲ್ಲಿ ಕಾಲರಾಕ್ಕೆ ತುತ್ತಾದಾಗ, ಒಂಟಿಯಾದ ಅವನಿಗೆ-ಮನೆಯು ದುಃಖದಾಯಿಯಾಗಿ ಕಂಡಿತು. ಎರಡು ವರ್ಷ ಕಾಲ ದೇಶಸಂಚಾರ ಮಾಡುತ್ತಿದ್ದನು. ಹಿಂತಿರುಗಿ ಬಂದನಂತರ ಹೋಳಿಯ ಹಬ್ಬದ ದಿನ ಅವನ ಮಾವನು ಅವನನ್ನು ಔತಣಕ್ಕೆ ಬರಮಾಡಿಕೊಂಡನು. ಆತನು ಅಳಿಯನ ಶೀಲಸ್ವಭಾವಗಳಿಗಾಗಿ ಮುಗ್ಧನಾಗಿದ್ದನು. ಆತನ ಕಿರಿಯ ಮಗಳು ಪ್ರೇಮಾ ಮದುವೆಯ ವಯಸ್ಸಿಗೆ ಬಂದಿದ್ದಳು. ಅವಳಿಗೆ ಅಮೃತರಾಯನಿಗಿಂತಲೂ ಉತ್ತಮ ವರನು ಬೇರಾವನೂ ಕಾಣಬರಲಿಲ್ಲ. ಪ್ರೇಮಾಳನ್ನು ಪ್ರತ್ಯಕ್ಷ ತೋರಿಸುವುದಕ್ಕಾಗಿಯೇ ಆತನು ಅಮೃತರಾಯನನ್ನು ಬರಮಾಡಿಕೊಂಡಿದ್ದನು.

ಎರಡು ವರ್ಷಗಳ ಹಿಂದೆ ಅಮೃತರಾಯನು ಪ್ರೇಮಾಳನ್ನು ನೋಡಿದ್ದನು. ಆಗ ಅವಳು ಮುಚ್ಚಿದ ಮೊಗ್ಗಿನಂತಿದ್ದಳು. ಈಗ ಅವಳು ಅರಳಿದ ಕುಸುಮವಾಗಿದ್ದಳು. ಅವಳ ಸೌಂದರ್ಯವು ಕಣ್ಣುಗಳನ್ನು ಸೆಳೆಯುತ್ತಿತ್ತು. ಹೃದಯದಲ್ಲಿ ಪ್ರೇಮವು ಅಂಕುರಿಸಿತು. ಮನಸ್ಸಿಗೆ ಬೇಸರವಾದಾಗಲೆಲ್ಲಾ

ಮಾವನ ಮನೆಗೆ ಹೋಗಿ ನಾಲ್ಕಾರು ನಿಮಿಷಗಳ ಕಾಲ ನಕ್ಕು-ನಲಿದು ಬರುತ್ತಿದ್ದನು. ಕೊನೆಗೆ ಒಂದು ದಿನ ಅತ್ತೆಯು ತನ್ನ ಮನಸ್ಸಿನ ಅಭಿಪ್ರಾಯ ತಿಳಿಸಿದಳು. ಅಮೃತರಾಯನಾದರೋ ಪ್ರೇಮಾಳ ರೂಪ ಗುಣಗಳಿಂದ ಮೊದಲಿನಿಂದಲೇ ಮುಗ್ಧನಾಗಿದ್ದನು. ಈಗ ಕುರುಡನಿಗೆ ಕಣ್ಣು ಬಂದಂತಾಯಿತು. ನಿಶ್ಚಿತಾರ್ಥವೂ ಆಯಿತು. ಇದೇ ಲಗ್ನಕಾಲದಲ್ಲಿ ವಿವಾಹವಾಗಲು ಸಿದ್ಧತಿಗಳು ಭರದಿಂದ ಸಾಗಿದ್ದುವು. ಹೀಗಿದ್ದರೂ ಇಂದು ಅಮೃತರಾಯನು ಈ ಪ್ರತಿಜ್ಞೆ ಮಾಡಿದನು.

ದಾನನಾಥನು ಈ ದೀರ್ಘ ಭಾಷಣವನ್ನು ಕೇಳಿ ಹೇಳಿದನು— "ಹಾಗಾದರೆ ನೀನು ನಿಶ್ಚಯ ಮಾಡಿಬಿಟ್ಟೆಯಾ ?"

ಅಮೃತರಾಯನು ತಲೆಯನ್ನಲ್ಲಾಡಿಸುತ್ತಾ ಉತ್ತರಿಸಿದನು— "ಹೌದು, ನಿಶ್ಚಯಿಸಿದೆನು."

ದಾನ:— "ಹಾಗಾದರೆ ಪ್ರೇಮಾ ?"

ಅಮೃತ :— "ಅವಳಿಗೆ ನನಗಿಂತಲೂ ಸುಯೋಗ್ಯ ವರ ದೊರಕುವನು."

ದಾನನಾಥನು ತಿರಸ್ಕಾರ ಭಾವದಿಂದ ಹೇಳಿದನು— "ಎಂತಹ ಮಾತುಗಳನ್ನಾಡುತ್ತಿರುವೆ ! ಪ್ರೇಮವು ಪೇಟೆಯಲ್ಲಿ ಬೆಲೆಕೊಟ್ಟು ಕೊಂಡುಕೊಳ್ಳುವ ವಸ್ತುವೆಂದು ತಿಳಿದಿರುವೆಯೋ ? ಇಷ್ಟವಾದರೆ ಕೊಂಡುಕೊಳ್ಳಬಹುದು ಇಷ್ಟವಿಲ್ಲದಿದ್ದರೆ ಬಿಡಬಹುದು—ಎಂದು ಭಾವಿಸುವುದು ತಪ್ಪು. ಪ್ರೇಮವು ಒಂದು ಸಾರಿ ಅಂಕುರಿಸಿದರೆ ಕಿತ್ತುಹಾಕಲು ಕಷ್ಟವಾದ ಒಂದು ಬೀಜವಿದ್ದಂತೆ. ಕೆಲವು ವೇಳೆಯಾದರೋ ನೀರು, ಬೆಳಕು ಮತ್ತು ವಾಯು ಇಲ್ಲದೆಯೇ ಪ್ರೇಮವು ಜೀವನಪರ್ಯಂತ ಜೀವಿಸಿರಬಲ್ಲುದು. ಪ್ರೇಮಾ ನಿನ್ನ ನಿಶ್ಚಿತವಧು ಮಾತ್ರವೇ ಅಲ್ಲ, ನಿನ್ನ ಪ್ರಣಯಿನಿಯೂ ಆಗಿದ್ದಾಳೆ. ಈ ಸೂಚನೆಯು ಅವಳಿಗೆ ತಿಳಿಯುತ್ತಲೇ ಅವಳ ಹೃದಯವು ಛಿನ್ನಭಿನ್ನವಾಗುವುದು. ಅವಳ ಸ್ಥಿತಿ ಹೇಗಾಗುತ್ತದೆಂಬುದನ್ನು ಹೇಳಲಾರೆ. ನೀನು ಅವಳ ವಿಷಯದಲ್ಲಿ ಅಕ್ಷಮ್ಯ ಅಪರಾಧ ಮಾಡುತ್ತಿರುವೆ."

ಅಮೃತರಾಯನು ಒಂದು ಕ್ಷಣಕಾಲ ವಿಚಾರಮಗ್ನನಾದನು. ತನ್ನ ವಿಷಯವಾಗಿ ಅವನಿಗೆ ಯಾವ ಚಿಂತೆಯೂ ಇರಲಿಲ್ಲ. ಅವನು ತನ್ನ ಹೃದಯ

ವನ್ನೇ ಕರ್ತವ್ಯಕ್ಕಾಗಿ ಬಲಿ ಕೊಡಲು ಸಿದ್ಧನಾಗಿದ್ದನು. ಇದನ್ನು ಈಗಾಗಲೇ ನಿಶ್ಚಯಿಸಿಬಿಟ್ಟಿದ್ದನು. ಇದರಿಂದಾಗುವ ಮನೋವ್ಯಥೆಯನ್ನು ಸಹಿಸುವುದಕ್ಕೂ ಅವನು ಸಿದ್ಧನಾಗಿದ್ದನು. ಆದರೆ ಪ್ರೇಮಾಳ ಮೇಲೆ ಇದರ ಪರಿಣಾಮ ಯಾವ ರೀತಿ ಆಗುವುದೆಂಬುದರಕಡೆಗೆ ಅವನು ಗಮನ ಕೊಟ್ಟಿರಲಿಲ್ಲ. ಪ್ರೇಮಾ ಎಂತಹ ವಿಚಾರಶೀಲಳೆಂಬುದು ಅವನಿಗೆ ಸ್ಪಷ್ಟವಾಗಿ ಗೊತ್ತಿತ್ತು. "ತಾನು ಸತ್ಕಾರ್ಯಕ್ಕಾಗಿ ಮಾಡಿರುವ ಸಾಹಸವನ್ನು ಕೇಳಿ ಅವಳು ತನ್ನನ್ನು ತಿರಸ್ಕರಿಸಲಾರಳು. ಈಗಲೂ ಅವಳು ತನ್ನನ್ನು ಗೌರವಿಸುವಳು" ಎಂಬ ಬಲವಾದ ನಂಬಿಕೆ ಅವನಿಗಿತ್ತು. ಹೇಳಿದನು— "ಅವಳಲ್ಲಿ ನಾನು ತಿಳಿದಿರುವಷ್ಟು ಪ್ರೇಮವಿದ್ದದ್ದೇ ಆದರೆ ಅವಳಿಗೆ ನನ್ನ ಪ್ರತಿಜ್ಞೆಯಿಂದ ದುಃಖವಾಗಕೂಡದು. ಅದನ್ನು ಕೇಳಿ ಅವಳು ಸಂತೋಷಪಡುವಳೆಂಬ ನಂಬಿಕೆ ನನಗಿದೆ."

ದಾನನಾಥನು ಮುಖ ಗಂಟಿಕ್ಕಿಕೊಂಡು ಹೇಳಿದನು— "ನನಗೆ ಮಹತ್ತರವಾದ ಜಯ ಲಭಿಸಿದೆ. ಈ ವಿಷಯವನ್ನು ಕೇಳಿದ ಪ್ರತಿಯೊಬ್ಬನೂ ಪುಷ್ಪ ಮಾಲಿಕೆಯನ್ನು ತೆಗೆದುಕೊಂಡು ನನ್ನ ಕೊರಳಿಗೆ ಹಾಕಲು ಬರುವರು" ಎಂದು ನೀನು ತಿಳಿದಿರಬಹುದು. ಆದರೆ ನೀನು ಸನಾತನ ಆದರ್ಶಗಳನ್ನೆಲ್ಲ ಭಂಗಪಡಿಸುತ್ತಿರುವೆಯೆಂದೇ ನಾನು ತಿಳಿಯುತ್ತೇನೆ. ನೀನು ಕೀರ್ತಿಗಾಗಿ ಬಾಯ್ಬಿಡುತ್ತಿರುವೆ. ಸಮಾಚಾರ ಪತ್ರಗಳಲ್ಲಿ ನಿನ್ನ ಪ್ರಶಂಸೆಯು ಅಚ್ಚಾಗುವುದನ್ನು ನೋಡಲು ಚಡಪಡಿಸುತ್ತೀಯೆ. ಇದನ್ನು ಬಿಟ್ಟರೆ ಇನ್ನೇನೂ ಇಲ್ಲ. ಕೀರ್ತಿಯನ್ನು ಗಳಿಸಲು ನೀನು ಸುಲಭವಾದ ಮಾರ್ಗವನ್ನೇ ಹುಡುಕಿರುವೆ. ಆದರೆ ಸ್ತ್ರೀಯರಿಗೆ ಯಶಸ್ಸು ಗಳಿಸಬೇಕೆಂಬ ಇಷ್ಟು ತೀವ್ರ ಹಸಿವು ಇರಲಾರದು ಪ್ರೇಮಾ ಎಷ್ಟೇ ವಿಚಾರಶೀಲಳಾಗಿರಬಹುದು. ಆದರೆ ತನ್ನ ಹೃದಯವು ಯಾವುದೋ ನಿರರ್ಥಕ ವ್ರತಕ್ಕಾಗಿ ಭಗ್ನವಾಗಲೆಂದು ಅವಳು ಎಂದೂ ಅಪೇಕ್ಷಿಸುವುದಿಲ್ಲ. ಅವಳ ಜೀವನವು ದುಃಖಮಯವಾಗುವುದು."

ಅಮೃತರಾಯನ ಮನೆಯ ಹತ್ತಿರಕ್ಕೆ ಜಟಕಾ ಬಂದಿತು. ಅಮೃತರಾಯನು ಜಟಕಾದಿಂದ ಇಳಿದು ತನ್ನ ಕೊಠಡಿಯ ಕಡೆಗೆ ನಡೆದನು. ಅಮೃತರಾಯನು ಕರೆದರೆ ಹೋಗೋಣವೆಂದು ದಾನನಾಥನು ಸ್ವಲ್ಪ ಹೊತ್ತು ನಿರೀಕ್ಷಣೆಯಲ್ಲಿದ್ದನು. ಆದರೆ ಅಮೃತರಾಯನು ಯಾವಾಗ ತನ್ನ ಕಡೆಗೆ ತಿರುಗಿಯೂ ನೋಡಲಿಲ್ಲವೋ ಆಗ ತನ್ನ ಮಾತಿನಿಂದ ಅಮೃತರಾಯನಿಗೆ ದುಃಖ

ವಾಗಿರಬಹುದೇನೋ ಎಂಬ ಭಯವುಂಟಾಯಿತು. ಕೊಠಡಿಯ ಬಾಗಿಲಿಗೆ ಹೋಗಿ ಹೇಳಿದನು— "ಏನಯ್ಯಾ, ನನ್ನ ಮೇಲೆ ಕೋಪಿಸಿಕೊಂಡೆಯಾ ?"

ಅಮೃತರಾಯನು ಅಶ್ರುಪೂರಿತ ನೇತ್ರಗಳಿಂದ ನೋಡುತ್ತಾ ಹೇಳಿದನು: " ಇಲ್ಲ, ದಾನನಾಥ, ನಿನ್ನ ಮಾತುಗಳಿಂದ ನಾನೆಂದೂ ಕೋಪಿಸಿಕೊಳ್ಳುವುದಿಲ್ಲ. ಇತರರ ಪ್ರಶಂಸೆಯಿಂದಾಗದ ರಸಾನುಭವವು ನಿನ್ನ ಕಟುವಾಕ್ಯಗಳಿಂದಾಗುತ್ತದೆ. ಈಗ ನೀನು ಹೇಳಿರುವುದೆಲ್ಲಾ ಸ್ನೇಹಭಾವದಿಂದಲೆಂಬುದನ್ನು ನಾನು ಬಲ್ಲೆ. ನಾನು ಜನಸ್ತುತಿಗಾಗಿ ಆಶೆಪಡುವವನಲ್ಲವೆಂಬುದನ್ನು ನೀನು ಚೆನ್ನಾಗಿ ತಿಳಿದಿದ್ದಿಯೆ. ನಾನು ಯಾವುದಾದರೊಂದು ಕೆಲಸ ಮಾಡಬೇಕೆಂದಿರುತ್ತೇನೆ."

ದಾನನಾಥನು ಸ್ನೇಹಭಾವದಿಂದ ಅಮೃತರಾಯನ ಕೈಹಿಡಿದುಕೊಂಡು ಹೇಳಿದನು— "ಪುನಃ ಯೋಚಿಸಿ ನೋಡು. ಮುಂದೆ ಪಶ್ಚಾತ್ತಾಪ ಪಡುವಂತಾಗದಿರಲಿ."

ಅಮೃತರಾಯನು ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತ ಹೇಳಿದನು— "ಇಲ್ಲ, ಇಲ್ಲ. ಮುಂದೆ ಪಶ್ಚಾತ್ತಾಪ ಪಡುವಂತಹ ಪ್ರಸಂಗ ನನಗೆ ಬರಲಾರದು ಎಂಬ ಪೂರ್ಣ ವಿಶ್ವಾಸ ನನಗಿದೆ. ಸತ್ಯವಾಗಿ ಹೇಳುವುದಾದರೆ, ಇಂದು ನನಗಾದ ಆನಂದವು ಹಿಂದೆಂದೂ ಆಗಿರಲಿಲ್ಲ. ಅನೇಕ ತಿಂಗಳ ಕಾಲ ಮನಸ್ಸಿನಲ್ಲಿ ನಡೆದ ಸಂಘರ್ಷದ ನಂತರ ಇಂದು ನನಗೆ ಜಯ ದೊರೆತಿದೆ. ನನಗೆ ಜಯ ದೊರೆತಿದೆ. ನನಗೆ ಪ್ರೇಮಾಳಲ್ಲಿ ಎಷ್ಟು ಪ್ರೇಮವಿದೆಯೋ ಅದಕ್ಕಿಂತ ಅನೇಕ ಪಾಲು ಹೆಚ್ಚು ಪ್ರೇಮವು ಅವಳಲ್ಲಿ ನನ್ನ ಒಬ್ಬ ಮಿತ್ರನಿಗಿದೆ. ಅವನು ಎಂದೂ ಆ ಪ್ರೇಮವನ್ನು ಪ್ರಕಟಪಡಿಸಲಿಲ್ಲ. ಆದರೆ ಅವನ ಹೃದಯವನ್ನು ಅವಳ ಪ್ರೇಮಜ್ವಾಲೆಯು ದಹಿಸುತ್ತಿದೆಯೆಂಬುದನ್ನು ನಾನು ಬಲ್ಲೆ. ನಾನು ವಿಧಿಯ ಕ್ರೂರ ಪ್ರಹಾರಗಳೆಷ್ಟನ್ನೋ ಸಹಿಸಿದ್ದೇನೆ. ಇಂತಹ ಮತ್ತೊಂದು ಹೊಡೆತವನ್ನೂ ಸಹಿಸಬಲ್ಲೆ. ಆ ನನ್ನ ಸಖನು ಒಂದು ಪೆಟ್ಟನ್ನೂ ತಿಂದವನಲ್ಲ. ಈ ನಿರಾಶೆಯು ಅವನಿಗೆ ಘಾತಕವಾಗಿ ಪರಿಣಮಿಸಬಹುದು."

ಈ ಮಾತು ಯಾರನ್ನುದ್ದೇಶಿಸಿ ಹೇಳಲ್ಪಟ್ಟಿತೆಂಬುದನ್ನು ದಾನನಾಥನು ಅರಿಯದಿರಲಿಲ್ಲ. ಅಮೃತರಾಯನ ಮೊದಲಿನ ಹೆಂಡತಿ ಜೀವಂತಳಾಗಿದ್ದಾಗಲೇ ದಾನನಾಥನಿಗೆ ಪ್ರೇಮಾಳನ್ನು ಕೊಟ್ಟು ವಿವಾಹ ಮಾಡಬೇಕೆಂಬ

ಮಾತುಕತೆ ನಡೆದಿತ್ತು. ಪ್ರೇಮಾಳ ಅಕ್ಕನು ಸತ್ತ ನಂತರ ಅವಳ ತಂದೆ ಲಾಲಾ ಬದರೀ ಪ್ರಸಾದರು ದಾನನಾಥನ ವಿಷಯವನ್ನೇ ಕೈಬಿಟ್ಟರು. ದಾನನಾಥನು ವಿದ್ಯಾ, ಸಂಪತ್ತು ಮತ್ತು ಗೌರವ—ಈ ಯಾವ ವಿಷಯದಲ್ಲಿಯೂ ಕೂಡ ಅಮೃತರಾಯನಿಗೆ ಸಾಟಿಯಾಗಿರಲಿಲ್ಲ. ಪ್ರೇಮಾಳ ಮನವೂ ಅಮೃತರಾಯನ ಕಡೆಗೇ ಒಲಿದಿದ್ದುದು ಪ್ರಾಮುಖ್ಯವಾದ ವಿಷಯವಾಗಿತ್ತು. ದಾನನಾಥನು ನಿರಾಶೆಗೊಂಡು ಆಜೀವನ ಅವಿವಾಹಿತನಾಗಿರುವೆನೆಂದು ನಿಶ್ಚಯಿಸಿದನು. ಇಬ್ಬರು ಗೆಳೆಯರಲ್ಲಿಯೂ ಈ ಘಟನೆಯಿಂದ ದ್ವೇಷಭಾವನೆಯೇನೂ ಉಂಟಾಗಲಿಲ್ಲ. ದಾನನಾಥನು ಹೊರಗೆ ನೋಡುವುದಕ್ಕೆ ಪ್ರಸನ್ನವದನನಾಗಿಯೇ ಕಾಣುತ್ತಿದ್ದನು. ಆದರೆ ಅವನು ವಾಸ್ತವವಾಗಿ ಪ್ರಾಪಂಚಿಕ ಸುಖಭೋಗಗಳಿಂದ ದೂರನಾಗಿ ವಿರಕ್ತನಂತಾಗಿದ್ದನು. ಅವನ ಜೀವನವು ಆನಂದರಹಿತವಾಗಿತ್ತು. ಅಮೃತರಾಯನಿಗೆ ತನ್ನ ಪ್ರಿಯಮಿತ್ರನ ಆಂತರಿಕ ವ್ಯಥೆಯನ್ನು ನೋಡಿ ನೋಡಿ ದುಃಖವಾಗುತ್ತಿತ್ತು. ಅವನು ತನ್ನ ಮನಸ್ಸನ್ನು ಈ ಪರೀಕ್ಷೆಗಾಗಿ ಅನೇಕ ತಿಂಗಳುಗಳಿಂದ ಸಿದ್ಧಮಾಡಿಕೊಳ್ಳುತ್ತಿದ್ದನು. ಆದರೆ ಪ್ರೇಮಾಳಂತಹ ಅನುಪಮ ಸುಂದರಿಯನ್ನು ಒಮ್ಮೆಲೇ ತ್ಯಜಿಸುವುದು ಅಷ್ಟು ಸುಲಭವಾಗಿರಲಿಲ್ಲ.

ಇಂತಹ ಸ್ಥಿತಿಯಲ್ಲಿ ಅಮೃತರಾಯನ ಈ ಮಾತುಗಳನ್ನು ಕೇಳಿ ದಾನನಾಥನ ಹೃದಯವು ಆಶೆಯಿಂದ ಪುಲಕಿತವಾಯಿತು. ಯಾವ ಆಶೆಯನ್ನು ಅವನು ತನ್ನ ಹೃದಯವನ್ನು ಸೀಳಿ ಹೊರದೂಡಿದ್ದನೋ, ಯಾವುದರ ಅಂತಿಮ ಜ್ಯೋತಿಯೂ ಕೂಡ ಬಹಳ ದಿನಗಳ ಹಿಂದೆಯೇ ನಂದಿ ಹೋಗಿತ್ತೋ ಅದೇ ಆಶೆಯು ಇಂದು ಅವನ ಮರ್ಮಸ್ಥಳವನ್ನು ಚಂಚಲಗೊಳಿಸಿತು. ಇದರ ಜೊತೆಯಲ್ಲಿಯೇ ಅಮೃತರಾಯನ ಅಪೂರ್ವ ತ್ಯಾಗವು ಅವನನ್ನು ಮುಗ್ಧಗೊಳಿಸಿತು. ಅವನು ಗದ್ಗದ ಕಂಠದಿಂದ ನುಡಿದನು— "ಇದಕ್ಕಾಗಿಯೇ ಇಂದು ನೀನು ಪ್ರತಿಜ್ಞೆ ಮಾಡಿದೆಯೋ? ಆ ನಿನ್ನ ಸ್ನೇಹಿತನೇನಾದರೂ ನಿನ್ನ ಈ ಉದಾರತೆಯಿಂದ ಪ್ರಯೋಜನ ಪಡೆದರೆ, ನಾನು ಅವನನ್ನು ನಿನ್ನ ಮಿತ್ರ— ಅಲ್ಲ ಶತ್ರುವೆಂದು ಕರೆಯುವೆನು. ಈ ಪರಿಸ್ಥಿತಿಯಲ್ಲಿ ಪ್ರೇಮಾಳ ವಿವಾಹವು ನಿನ್ನ ಆ ಮಿತ್ರನೊಡನಾಗಬೇಕೆಂಬುದು ಈಗಲೂ ನಿನ್ನ ನಿರ್ಧಾರವೆ?"

ಅಮೃತರಾಯನು ವಿಷಣ್ಣವದನನಾಗಿ ಹೇಳಿದನು— "ಹೌದು, ಈ

ಈ ಸಂಶಯವೇನೋ ಉಂಟಾಗತಕ್ಕದ್ದೇ. ಆದರೆ ನನ್ನ ಗೆಳೆಯನು ಈ ಸದವಕಾಶವನ್ನು ಕಳೆದುಕೊಳ್ಳಲಾರನೆಂದು ನನಗೆ ನಂಬಿಕೆಯಿದೆ. ನಾನು ಅವನನ್ನು ಇಂತಹ ಉತ್ಸಾಹ ಹೀನನೆಂದು ತಿಳಿಯಲಾರೆ.

ದಾನನಾಥನು ತಿರಸ್ಕಾರ ಭಾವನೆಯಿಂದ ಹೇಳಿದನು— "ನೀನು ಅವನನ್ನು ಇಷ್ಟು ನೀಚನೆಂದು ತಿಳಿಯುವುದಾದರೆ ತಿಳಿದುಕೋ. ನಾನು ಇಷ್ಟು ಮಾತ್ರ ಹೇಳಬಲ್ಲೆ, ಅವನು ತನಗಾಗಿ ನಿನ್ನನ್ನು ನಿರಾಶೆಗೊಳಿಸಲಾರನೆಂಬುದನ್ನು ನಾನು ಚೆನ್ನಾಗಿ ಅರಿತಿದ್ದೇನೆ."

ಹೀಗೆ ಹೇಳುತ್ತಾ ದಾನನಾಥನು ಹೊರಗೆ ಹೊರಟು ಬಂದನು. ಮತ್ತು ಅಮೃತರಾಯನು ಬಾಗಿಲಲ್ಲಿ ನಿಂತುಕೊಂಡು, ಅವನನ್ನು ತಡೆಯುವ ಮನಸ್ಸಾದರೂ ಕರೆಯಲಸಮರ್ಥನಾದನು.

## ೨

ಇತ್ತ ಇಬ್ಬರು ಗೆಳೆಯರಲ್ಲಿ ಮಾತುಕತೆಗಳಾಗುತ್ತಿದ್ದವು, ಅತ್ತ ಲಾಲಾ ಬದರೀ ಪ್ರಸಾದರ ಮನೆಯಲ್ಲಿ ಶೋಕ ಆವರಿಸಿಕೊಂಡಿತ್ತು. ಲಾಲಾ ಬದರೀ ಪ್ರಸಾದರು, ಅವರ ಪತ್ನಿ ದೇವಕಿ ಮತ್ತು ಪ್ರೇಮಾ, ಮೂವರೂ ಕುಳಿತುಕೊಂಡು ನಿಶ್ಚಲ ನೇತ್ರಗಳಿಂದ ನೆಲದಕಡೆಗೆ ನೋಡುತ್ತಿದ್ದರು. ಅವರ ಸ್ಥಿತಿಯು ಘೋರಾರಣ್ಯದಲ್ಲಿ ದಾರಿ ತಪ್ಪಿದವರಂತಾಗಿತ್ತು. ಬಹಳ ಹೊತ್ತಿನ ನಂತರ ದೇವಕಿ ಹೇಳಿದಳು— "ನೀವು ಸ್ವಲ್ಪ ಅಮೃತರಾಯರ ಹತ್ತಿರಕ್ಕೆ ಹೋಗಿಬಂದಿದ್ದರೆ ಚೆನ್ನಾಗಿತ್ತು."

ಬದರೀ ಪ್ರಸಾದರು ವಿರೋಧ ಭಾವದಿಂದ ಹೇಳಿದರು— "ಹೋಗಿ ನಾನೇನು ಮಾಡಲಿ?"

ದೇವಕಿ :— "ಹೋಗಿ ಅವರನ್ನು ಸಮಾಧಾನ ಪಡಿಸಿ. ಮತ್ತೇನು ಮಾಡುವಿರಿ? ಅಪ್ಪಾ, ನಮ್ಮ ನೌಕೆಯನ್ನು ಮಧ್ಯ ಪ್ರವಾಹದಲ್ಲೇಕೆ ಮುಳುಗಿಸುತ್ತೀಯೆ? ನೀನು ನಮ್ಮ ಮನೆಯ ಮಗನಂತಿದ್ದೀಯೆ. ನೀನು ಇಂತಹ

ಕೆಲಸ ಮಾಡುವೆಯೆಂದು ನಾವು ಕನಸಿನಲ್ಲಿಯೂ ಯೋಚಿಸಿರಲಿಲ್ಲ—ಎಂದು ಅವರಿಗೆ ಹೇಳಿ. ಆಗ ಅವರು ಏನು ಹೇಳುತ್ತಾರೋ ನೋಡೋಣ."

ಬದರೀ :— "ಈಗ ನಾನು ಅವನ ಬಳಿಗೆ ಹೋಗಲಾರೆ."

ದೇವಕಿ :— "ಏಕೆ ಹೋಗುವುದಿಲ್ಲ ? ಹೋದರೆ ಆಗುವ ತೊಂದರೆ ಏನು ?"

ಬದರೀ:— "ಈಗ ನಿನಗೆ ನಾನು ಏನು ತಿಳಿಸಲಿ ? ಅವನ ವಿಚಾರವು ನನಗೆ ತಿಳಿದಾಗಿನಿಂದ, ನಾನು ಅವನ ಬಳಿಗೆ ಹೋಗುವುದು ಅನುಚಿತ ಮಾತ್ರವೇ ಅಲ್ಲ, ಅಪಮಾನಕರವೂ ಆಗಿದೆ. ಹಿಂದೂ ಮುಸಲ್ಮಾನರಲ್ಲಿನ ಧಾರ್ಮಿಕ ವಿಚಾರಗಳಲ್ಲಿನ ಮತಭೇದವನ್ನು ಬಿಟ್ಟರೆ ಉಳಿದ ಯಾವ ವ್ಯತ್ಯಾಸವೂ ಕಂಡುಬರುವುದಿಲ್ಲ. ಉಚ್ಚ ವಿಚಾರಗಳೇ ಮನುಷ್ಯನ ಸರ್ವಸ್ವ. ಅಮೃತರಾಯನು ವಿಧವಾ ವಿವಾಹವನ್ನು ಸ್ವಾಗತಿಸುತ್ತಾನೆ. ಇದರಿಂದ ದೇಶೋದ್ಧಾರವಾಗಬಹುದೆಂದು ಅವನು ತಿಳಿದಿರಬಹುದು. ಇದರಿಂದ ನಮ್ಮ ಸಮಾಜವು ಹಾಳಾಗುವುದು; ನಾವು ಈಗಿರುವುದಕ್ಕಿಂತ ಹೆಚ್ಚಿನ ಅಧೋಗತಿಗೆ ಇಳಿಯುವೆವು; ಹಿಂದೂ ಜಾತಿಯ ಉಳಿದಿರುವ ಚಿನ್ಹೆಗಳೂ ಕೂಡ ಅಳಿದು ಹೋಗುವುವು. ಅವನ ಈ ಪ್ರತಿಜ್ಞೆಯು ಅವನನ್ನು ನಮ್ಮ ಸಮಾಜದಿಂದ ಬಹಿಷ್ಕರಿಸಿದೆ. ಈಗ ಅವನಿಗೂ ನಮಗೂ ಯಾವ ಸಂಬಂಧವೂ ಇಲ್ಲ."

ದೇವಕಿಯು ಈ ವಿಪತ್ತಿನ ಮಹತ್ವವನ್ನು ತಿಳಿಯಲಾರದವಳಾದಳು. ಹೇಳಿದಳು— "ಇದು ಯಾವ ಮಹಾ ದೊಡ್ಡ ವಿಷಯ ? ಇಂದು ನಮ್ಮ ಕಮಲಾಪ್ರಸಾದನೇನಾದರೂ ಮುಸಲ್ಮಾನನಾದರೆ ಅವನ ಸಂಬಂಧವನ್ನೇ ನಾವು ತೊಡೆದು ಹಾಕುತ್ತೇವೆಯೆ ? ನಮಗೆ ಸಾಧ್ಯವಾದ ಮಟ್ಟಿಗೂ ಅವನಿಗೆ ತಕ್ಕ ತಿಳುವಳಿಕೆ ಕೊಟ್ಟು ಅವನನ್ನು ಸನ್ಮಾರ್ಗಕ್ಕೆ ತರುವ ಉಪಾಯ ಮಾಡುವುದಿಲ್ಲವೇ ?"

ದೇವಕಿಯ ಈ ತರ್ಕದಿಂದ ಬದರೀ ಪ್ರಸಾದರು ಸ್ವಲ್ಪ ಮೆತ್ತಗಾದರು. ಆದರೂ ತಮ್ಮ ನಿರ್ಧಾರವನ್ನು ಬಿಟ್ಟುಬಿಡಲು ಸಿದ್ಧರಾಗಲಿಲ್ಲ. ಹೇಳಿದರು— "ನೋಡು, ನಾನೇನೊ ಈಗ ಖಂಡಿತ ಅಮೃತರಾಯನ ಬಳಿಗೆ ಹೋಗುವದಿಲ್ಲ. ನಮ್ಮ ಬುದ್ಧಿವಾದದಿಂದ ಅವನು ದಾರಿಗೆ ಬರುವನೆಂಬ ನಂಬಿಕೆ ನಿನಗಿರದಿದ್ದರೆ, ಅವನನ್ನೇ ಇಲ್ಲಿಗೆ ಬರಮಾಡಿಕೋ ಅಥವಾ ನೀನೇ ಅವನ

ಹತ್ತಿರಕ್ಕೆ ಹೋಗು. ಆದರೆ ನನ್ನನ್ನು ಮಾತ್ರ ಅವನ ಬಳಿಗೆ ಹೋಗಲು ಒತ್ತಾಯ ಮಾಡಬೇಡ. ಪ್ರಾಯಶಃ ನಾನು ಅವನನ್ನು ನೋಡಿ ಕೋಪ ದಿಂದ ಹುಚ್ಚನಾಗಬಹುದು. ಈಗಲೂ ನನ್ನನ್ನು ಹೋಗಲು ಹೇಳು ವೆಯೋ ? ”

ದೇವಕಿ:— “ಇಲ್ಲ, ಕ್ಷಮಿಸಿರಿ. ಈ ರೀತಿಯಾಗಿ ಹೋಗುವುದಕ್ಕಿಂ ತಲೂ ಹೋಗದಿರುವುದೇ ಲೇಸು. ನಾನೇ ನಾಳೆ ಅವನನ್ನು ಇಲ್ಲಿಗೆ ಕರೆಸು ವೆನು. ”

ಬದರೀ:— “ನೀನು ಅವನನ್ನು ಇಲ್ಲಿಗೆ ಕರೆಸಿಕೊಳ್ಳುವುದರಲ್ಲಿ ನನ್ನ ಅಡ್ಡಿಯಿಲ್ಲ. ಆದರೆ ನೀನು ಅವನ ಕೈಕಾಲು ಕಟ್ಟಿಕೊಂಡು ಅಂಗಲಾಚಿ ಬೇಡಿಕೊಳ್ಳುವುದು ನನಗೆ ಸುತರಾಂ ಇಷ್ಟವಿಲ್ಲ. ಅವನು ನಮ್ಮಿಂದ ಒಂದು ಅಂಗುಲ ಹಿಮ್ಮೆಟ್ಟಿದರೆ ನಾವು ಅವನಿಂದ ಒಂದು ಗಜ ದೂರ ಹಿಂದಕ್ಕೆ ಸರಿ ಯೋಣ. ಪ್ರೇಮಾಳನ್ನು ನಾನು ಅವನ ಕೊರಳಿಗೆ ಕಟ್ಟಲು ಇಷ್ಟಪಡುವು ದಿಲ್ಲ. ಅವಳಿಗೆ ವರಗಳ ಕೊರತೆಯೇನೂ ಇಲ್ಲ.”

ದೇವಕಿ:— “ನೀವು ಇಷ್ಟಪಟ್ಟ ವರನನ್ನು ಮೆಚ್ಚಿ ಮದುವೆಯಾಗುವ ಹುಡುಗಿ ಪ್ರೇಮಾ ಅಲ್ಲ. ಸ್ವಲ್ಪ ಹೋಗಿ ಅವಳ ಸ್ಥಿತಿಯನ್ನು ನೋಡಿ. ಆಗ ನಿಮಗೆ ತಿಳಿಯುತ್ತೆ. ಈ ವರ್ತಮಾನವು ತಿಳಿದಾಗಿನಿಂದ ಅವಳು ನಿರ್ಜೀವ ವಸ್ತುವಿನಂತಾಗಿದ್ದಾಳೆ. ಒಬ್ಬಳೇ ಮಹಡಿಯ ಮೇಲೆ ಬಿದ್ದುಕೊಂಡು ಅಳು ತ್ತಿದ್ದಾಳೆ.”

ಬದರೀ:— “ಅಲ್ಲವೇ, ನಾಲ್ಕಾರು ದಿನಗಳಲ್ಲಿ ಎಲ್ಲವೂ ಸರಿ ಹೋಗು ವುದು. ”

ದೇವಕಿ:— “ಯಾರು? ಅವಳೇ ಸರಿ ಹೋಗುವವಳು ? ನನಗನಿಸು ತ್ತದೆ, ಅವಳು ಅತ್ತೂ ಅತ್ತೂ ಇದೇ ಶೋಕದಲ್ಲಿಯೇ ಪ್ರಾಣ ಬಿಡುವಳು. ನೀವು ಇನ್ನೂ ಅವಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿಲ್ಲ.”

ಬದರೀ ಪ್ರಸಾದರು ಗೊಣಗುಟ್ಟುತ್ತಲೇ ನುಡಿದರು— “ ಅವಳು ಅತ್ತು ಸತ್ತರೆ ಸಾಯಲಿ; ಆದರೆ ನಾನು ಮಾತ್ರ ಅಮೃತರಾಯನನ್ನು ಬಿನ್ನವಿ ಸಲು ಹೋಗುವುದಿಲ್ಲ. ಯಾವ ವ್ಯಕ್ತಿಯು ವಿಧವಾ ವಿವಾಹದಂತಹ ಹೇಯ ಕಾರ್ಯಕ್ಕೆ ಕೈಹಾಕುತ್ತಾನೆಯೋ, ಅಂತಹವನೊಡನೆ ನಾನು ಯಾವ ಸಂಬಂಧ

ವನ್ನೂ ಇಟ್ಟುಕೊಳ್ಳಲಾರೆನು."

ಬದರೀ ಪ್ರಸಾದರು ಹೊರಗೆ ಹೊರಟು ಹೋದರು. ದೇವಕಿ ಬಹಳ ಇಕ್ಕಟ್ಟಿಗೆ ಸಿಕ್ಕಿದಳು. ಗಂಡನ ಸ್ವಭಾವವು ಅವಳಿಗೆ ಚೆನ್ನಾಗಿ ಪರಿಚಯವಿತ್ತು. ಆದರೆ ಅವರನ್ನು ಇಷ್ಟು ವಿಚಾರಶೂನ್ಯರೆಂದು ತಿಳಿದಿರಲಿಲ್ಲ. ಬುದ್ಧಿ ಹೇಳುವುದರಿಂದ ಅಮೃತರಾಯನು ಒಪ್ಪಿಕೊಳ್ಳುವನೆಂಬ ಆಶೆ ಅವಳಿಗಿತ್ತು. ಆದರೆ ಅವನ ಹತ್ತಿರ ಹೋಗುವುದೆಂತು? ವ್ಯರ್ಥವಾಗಿ ಗಂಡನೊಡನೆ ಮನಸ್ತಾಪ ಮಾಡಿಕೊಳ್ಳಬೇಕಾಗುವುದು!

ಏಕಾಏಕಿ ಮೇಲಿನಿಂದ ಪ್ರೇಮಾ ಕೆಳಗಿಳಿದು ಬಂದು ಮಂಚದ ಹತ್ತಿರ ನಿಂತುಕೊಂಡಳು. ಅವಳ ಕಣ್ಣುಗಳು ಕೆಂಪಾಗಿದ್ದುವು.

ದೇವಕಿಯು ಹೇಳಿದಳು— "ಮಗೂ, ಅಳಬೇಡ. ನಾಳೆ ನಾನು ಅವನನ್ನು ಕರೆಸುವೆನು. ನನ್ನ ಮಾತನ್ನು ಅವನು ತಿರಸ್ಕರಿಸಲಾರನು."

ಪ್ರೇಮಾ ಬಿಕ್ಕಿ ಬಿಕ್ಕಿ ಅಳುತ್ತಾ ಹೇಳಿದಳು— " ಇಲ್ಲ, ಅಮ್ಮ, ನಿನ್ನ ಕಾಲಿಗೆರಗುವೆನು. ನೀನು ಅವರ ಸಂಗಡ ಏನೂ ಹೇಳಬೇಡ. ಅವರು ನಮ್ಮ ಸೋದರಿಯರ ಹಿತಕ್ಕಾಗಿಯೇ ಈ ಪ್ರತಿಜ್ಞೆ ಮಾಡಿದ್ದಾರೆ. ನಮ್ಮಲ್ಲಿ ಇಂತಹ ಸಾಹಸಿಗಳಾದ ಪುರುಷರೆಷ್ಟು ಮಂದಿ ಇದ್ದಾರೆ? ನಾನು ಈ ಶುಭಕಾರ್ಯದಲ್ಲಿ ಬಾಧಕಳಾಗಲಾರೆನು."

ದೇವಕಿಯು ಚಕಿತ ದೃಷ್ಟಿಯಿಂದ ಪ್ರೇಮಾಳ ಕಡೆ ನೋಡಿದಳು. ಪ್ರೇಮಾ ಹೇಳಿದ್ದು ಅವಳ ಮನಸ್ಸಿಗೆ ಹಿಡಿಸಲಿಲ್ಲ.

ಪ್ರೇಮಾ ಪುನಃ ಹೇಳಿದಳು— "ಇಂತಹ ಸುಶಿಕ್ಷಿತ ಪುರುಷರು ಈ ಕೆಲಸ ಮಾಡದಿದ್ದರೆ ಮತ್ತಾರು ಮಾಡುವರು? ಇಂತಹವರೇ ಸಾಹಸದಿಂದ ಮುನ್ನುಗ್ಗಿ ಕೆಲಸ ಮಾಡದಿದ್ದರೆ, ಅಭಾಗಿನಿಯರಾದ ಸೋದರಿಯರ ರಕ್ಷಣೆ ಮಾಡುವವರಾರು?"

ದೇವಕಿ ಹೇಳಿದಳು— "ಮಗೂ, ನಿನ್ನ ಗತಿ ಮುಂದೇನಾಗಬಹುದೆಂಬುದನ್ನರಿತಿರುವೆಯಾ?"

ಪ್ರೇಮಾ ಗಂಭೀರ ಭಾವದಿಂದ ಹೇಳಿದಳು— "ಅಮ್ಮ, ನಾನು ಸತ್ಯವಾಗಿ ಹೇಳುತ್ತಿದ್ದೇನೆ. ಈ ವಿಷಯದಲ್ಲಿ ನನಗೆ ಖಂಡಿತ ದುಃಖವಿಲ್ಲ. ನಾನೂ ಕೂಡ ಈ ಕೆಲಸದಲ್ಲಿ ಅವರಿಗೆ ಸಹಾಯಕಳಾಗುವೆನು. ನನ್ನ ರಕ್ಷಣೆಯ

ಭಾರವನ್ನು ನೀವು ಹೊತ್ತಿರುವ ತನಕ, ನನಗೆ ಯಾವ ವಿಷಯಕ್ಕೂ ಕೊರತೆಯಿಲ್ಲ. ನೀವುಗಳು ನನಗಾಗಿ ಸ್ವಲ್ಪವೂ ಚಿಂತಿಸಬೇಡಿ. ನಾನು ಆಜೀವ ಕುಮಾರಿಯಾಗಿಯೇ ಇದ್ದುಕೊಂಡು ಸಂತೋಷದಿಂದ ಕೆಲಸ ಮಾಡುತ್ತೇನೆ. "

ದೇವಕಿಯು ಕಣ್ಣೀರಿಡುತ್ತಾ ಹೇಳಿದಳು— " ತಾಯಿ, ತಂದೆಯರು ಯಾರಿಗೆ ತಾನೇ ಶಾಶ್ವತ! ಕಣ್ಣುಮುಂದೆ ಆಗುವ ಕೆಲಸವೇ ಚೆನ್ನಾಗಿರುತ್ತೆ. ಹೊಟ್ಟೆ ಬಟ್ಟೆಗೆ ಗತಿಯಿಲ್ಲದ ಮನೆಯ ಬಾಲೆಯೂ ಸಹ ಅವಿವಾಹಿತಳಾಗಿರಲಾರಳು. ಭಿಕ್ಷೆ ಬೇಡಿಯಾದರೂ ಜನರು ಕನ್ಯಾ ವಿವಾಹವನ್ನು ಮಾಡುತ್ತಾರೆ. ಯಾವುದಾದರೂ ಮೊಹಲ್ಲೆಯ ಕನ್ಯೆ ಯಾವಳಾದರೂ ಅನಾಥಳಾದರೆ, ಜನರು ಚಂದಾ ಎತ್ತಿಯಾದರೂ ಅವಳ ಲಗ್ನ ಮಾಡುತ್ತಾರೆ. ನಮ್ಮ ಮನೆಯಲ್ಲಿ ಯಾವ ವಿಷಯಕ್ಕೆ ತಾನೇ ಕೊರತೆಯಿದೆ? ನಾನು ನಿನಗೆ ಬೇರೆ ವರನನ್ನು ಹುಡುಕುವೆನು. ಇವನು ನಮ್ಮ ಪರಿಚಿತ ಹಾಗೂ ಸಭ್ಯನಾಗಿದ್ದನು, ಅಷ್ಟೆ ಇಲ್ಲವಾದಲ್ಲಿ ನಮ್ಮಲ್ಲಿ ವರಗಳಿಗೇನೂ ಕೊರತೆಯಿಲ್ಲ. ನಾನು ನಾಳೆಯೇ ವರಾನ್ವೇಷಣಕ್ಕಾಗಿ ನಿಮ್ಮ ತಂದೆಯುವರನ್ನು ಕಳುಹಿಸುವೆನು."

ಪ್ರೇಮಾಳ ಹೃದಯ ಕಂಪಿಸಿತು. ಮೂರು ವರ್ಷಗಳಿಂದ ಅವಳು ಅಮೃತರಾಯನನ್ನು ತನ್ನ ಮನೋಮಂದಿರದಲ್ಲಿ ಸ್ಥಾಪಿಸಿ ಆರಾಧಿಸುತ್ತಿದ್ದಳು. ಆ ಮೂರ್ತಿಯನ್ನು ಅವಳ ಹೃದಯ ಮಂದಿರದಿಂದ ಇಂದು ಯಾರು ತಾನೇ ಕಿತ್ತೆಸೆಯ ಬಲ್ಲರು? ಹೃದಯದಲ್ಲಿ ಸ್ಥಾಪಿಸಿಕೊಂಡಿರುವ ಆ ಮೂರ್ತಿಯನ್ನು ಬಿಟ್ಟು ಅನ್ಯರಿಗೆ ಅಲ್ಲಿ ಸ್ಥಾನ ಕೊಡಬಲ್ಲಳೆ? ಹಾಗಾದರೆ ಅದು ವಿವಾಹವೋ ಅಥವಾ ವಿವಾಹದ ಸೋಗೋ? ಅಂತಹ ಜೀವನದ ಕಲ್ಪನೆಯೂ ಕೂಡ ಎಷ್ಟು ಭಯಂಕರ! ಎಷ್ಟು ರೋಮಾಂಚಕಾರಿ!

ಪ್ರೇಮಾ ನೆಲವನ್ನೇ ನೋಡುತ್ತಾ ಹೇಳಿದಳು— "ಇಲ್ಲಮ್ಮ, ನನಗೋಸ್ಕರ ನೀವು ವ್ಯಸನ ಪಡಬೇಡಿ. ನಾನು ಕುಮಾರಿಯಾಗಿರಲು ನಿಶ್ಚಯಿಸಿದ್ದೇನೆ. "

ಬಾಬು ಕಮಲಾ ಪ್ರಸಾದನು ಬರುವ ಗಡಿಬಿಡಿ ಕೇಳಿಸಿತು. ಅವನು ಸಿನಿಮಾ ಭಕ್ತ. ಅವನು ಸಿನೆಮಾಕ್ಕೆ ಹೋಗದ ದಿನವೇ ಇರಲಿಲ್ಲ. ಸೇವಕರ ಮೇಲೆ ಅವನದು ಕಠೋರ ಶಾಸನ. ಹೊರಗಿನಿಂದ ಮನೆಗೆ ಬಂದೊಡನೆ

ಯಾವನಾದರೂ ಸೇವಕನನ್ನು ತರಾಟೆಗೆ ತೆಗೆದುಕೊಳ್ಳುವುದು ಅವನ ವಿಶೇಷ ಗುಣವಾಗಿತ್ತು. ಅವನ ಬೂಟುಗಳ ಶಬ್ದವು ಕೇಳಬರುತ್ತಲೇ ಸೇವಕರಲ್ಲಿ ಕೋಲಾಹಲ ಉಂಟಾಗುತ್ತಿತ್ತು.

ಕಮಲಾಪ್ರಸಾದನು ಬಂದೊಡನೆಯೇ ಸೇವಕನನ್ನು ಕೇಳಿದನು— " ಬರ್ಫ ತಂದೆಯಾ ?"

ಆಳು ಮೆಲುದನಿಯಿಂದ ಹೇಳಿದನು— " ಇನ್ನೂ ಇಲ್ಲ, ಮಹಾ ಸ್ವಾಮಿ."

ಕಮಲಾಪ್ರಸಾದನು ಗರ್ಜಿಸುತ್ತಾ ಹೇಳಿದನು— " ಬರ್ಫ ( ಮಂಜು ಗೆಡ್ಡೆ ) ತಂದೆಯೋ ಇಲ್ಲವೋ ಜೋರಾಗಿ ಬಗಳು. ಮಾತನಾಡಲು ಉಸಿರಿಲ್ಲವೇನೋ ?"

ಈಗಲಂತೂ ಸೇವಕನ ಬಾಯೇ ಮುಚ್ಚಿಹೋಯ್ತು. ಕಮಲಾಪ್ರಸಾದನು ಅವನ ಎರಡು ಕಿವಿಗಳನ್ನೂ ಹಿಂಡುತ್ತಾ ಹೇಳಿದನು— "ನಾನು ಕೇಳುತ್ತಿರುವುದು—ಬರ್ಫ ತಂದೆಯೋ ಇಲ್ಲವೋ ಎಂದು. ಇಲ್ಲಾ ತಾನೆ ?"

ಈಗ ಮಾತನಾಡದಿದ್ದರೆ ತನ್ನ ಕಿವಿ ಕಿತ್ತು ಹೋಗುವುದು ಖಂಡಿತವೆಂದು ತಿಳಿದು ಆಳು ಮೆಲ್ಲಗೆ ಹೇಳಿದನು— "ಇಲ್ಲ, ಸ್ವಾಮಿ."

ಕಮಲಾ:— "ಯಾಕೆ ತರಲಿಲ್ಲ ?"

ಸೇವಕ:— "ಹಣವಿರಲಿಲ್ಲ."

ಕಮಲಾ:— "ಯಾಕಿರಲಿಲ್ಲ ? ಮನೆಯಲ್ಲಿ ಕೇಳಿದೆಯೋ ?"

ಸೇವಕ:— "ಹೌದು ಮಹಾಸ್ವಾಮಿ, ಯಾರೂ ಕಿವಿಗೊಡಲಿಲ್ಲ."

ಕಮಲಾ:— "ಸುಳ್ಳು ಹೇಳುತ್ತೀಯೋ. ನಾನು ಹೋಗಿ ವಿಚಾರಿಸುತ್ತೇನೆ. ನೀನು ಕೇಳಿಲ್ಲ ಅಂತ ಗೊತ್ತಾದರೆ, ನಿನ್ನ ಚರ್ಮ ಸುಲಿದು ಬಿಡುತ್ತೇನೆ, ರ್‍ಯಾಸ್ಕಲ್ !"

ಕಮಲಾಪ್ರಸಾದನು ಬಟ್ಟೆಯನ್ನು ಬದಲಾಯಿಸದೆಯೇ ಕೋಪದಿಂದ ಒಳಹೊಕ್ಕು ತಾಯಿಯನ್ನು ಕೇಳಿದನು— "ಏನಮ್ಮ, ಆಳು ಸಿದ್ದ ಬರ್ಫ ತರಲು ನಿನ್ನನ್ನು ಹಣ ಕೇಳಿದನೆ ?"

ದೇವಕಿ ಅವನ ಕಡೆ ನೋಡದೆಯೇ ಹೇಳಿದಳು— "ಬಂದಿರಬಹುದು, ಜ್ಞಾಪಕವಿಲ್ಲ. ಅಮೃತರಾಯ ನಿನಗೆ ಸಿಕ್ಕಿದ್ದನೆ ?"

ಕಮಲಾ:— ಇಲ್ಲ, ಅವನು ಸಿಕ್ಕಿರಲಿಲ್ಲ. ಅವನ ಮನೆ ಕಡೆಯೇನೋ ಹೋಗಿದ್ದೆ. ಆದರೆ ಅವನು ಯಾವುದೋ ಸಭೆಗೆ ಹೋಗಿದ್ದಾನೆಂದು ತಿಳಿದಿದ್ದ ರಿಂದ ನಾನು ಸಿನಿಮಾಕ್ಕೆ ಹೊರಟು ಹೋದೆನು. ಅವನಿಗೇನೋ ಸಭಾ—ಸಂಸ್ಥೆಗಳ ರೋಗ ಅಂಟಿಕೊಂಡಿದೆ. ನನಗೆ ಇದೆಲ್ಲಾ ವ್ಯರ್ಥವೆನಿಸುತ್ತೆ. ಇದ ರಿಂದ ಯಾವ ಪ್ರಯೋಜನವೂ ಇಲ್ಲ. ಭಾಷಣ ಕೇಳದೆಯೇ ಮನುಷ್ಯ ಬದುಕಿರಬಲ್ಲ ಮತ್ತು ಭಾಷಣಕಾರರಿಲ್ಲದಿದ್ದರೇನು ಭೂಮಿಯು ರಸಾತಳಕ್ಕೆ ಇಳಿಯಲಾರದು. ಎಲ್ಲಿ ನೋಡಿದರೂ ಭಾಷಣಕಾರರೇ ದೃಷ್ಟಿಗೋಚರವಾಗು ತ್ತಾರೆ. ಮಳೆಗಾಲದ ಕಪ್ಪೆಗಳು ವಟಗುಟ್ಟುವಂತೆ ಏನಾದರೂ ಬಡಬಡಿಸುತ್ತಿ ರುತ್ತಾರೆ. ತಮ್ಮ ಸಮಯವನ್ನು ನಷ್ಟ ಮಾಡಿಕೊಳ್ಳುವರು, ಇತರರನ್ನೂ ಆಶ್ಚರ್ಯಗೊಳಿಸುವರು. ಒಟ್ಟಿನಲ್ಲಿ ಹೇಳುವುದಾದರೆ, ಎಲ್ಲರೂ ಮೂರ್ಖರೆ !"

ದೇವಕಿ:— "ಅಮೃತರಾಯನಾದರೋ ಇಂದು ತನ್ನ ಜೀವನ ನೌಕೆ ಯನ್ನೇ ಮುಳುಗಿಸಿ ಬಿಟ್ಟಿದ್ದಾನೆ. ಈಗ ಯಾವಳೋ ವಿಧವೆಯನ್ನು ಮದುವೆ ಯಾಗುವೆನೆಂದು ಪ್ರತಿಜ್ಞೆ ಮಾಡಿದ್ದಾನೆ."

ಕಮಲಾಪ್ರಸಾದನು ಗಹಗಹಿಸಿ ನಕ್ಕು ಹೇಳಿದನು— "ಈ ಸಭೆಗೆ ಹೋಗುವವರು ಮಾಡುವುದಿನ್ನೇನು ? ಸಭೆಗಳಿಗೆ ಹೋಗುವವರಿಗೆ ತಿಳಿಯು ವುದಿಷ್ಟೆ. ಅಮೃತ ಈಗ ಯಾವಳೋ ಒಬ್ಬ ವಿಧವೆಯನ್ನು ಮದುವೆಯಾಗು ತ್ತಾನೆ. ಸರಿ, ನಾನೂ ಮದುವೆಗೆ ಹೋಗುವೆನು. ಬೇರೆಯವರು ಹೋಗಲಿ ಅಥವಾ ಬಿಡಲಿ. ಈ ಹೊಸ ರೀತಿಯ ವಿವಾಹ ಹೇಗಾಗುತ್ತೆ ಎಂಬುದನ್ನು ನಾನೂ ಸ್ವಲ್ಪ ನೋಡುವೆನು. ಪ್ರಾಯಶಃ ಅಲ್ಲಿಯೂ ಭಾಷಣಗಳ ಮೇಲೆ ಭಾಷಣಗಳು ನಡೆಯಬಹುದು. ಈ ಜನಗಳಿಗೆ ಮಾಡಲು ಕೆಲಸವೇನಿದೆ ? ಎಲ್ಲಾ ಮೂರ್ಖಶಿಖಾಮಣಿಗಳೇ ! ಒಬ್ಬರಿಗಾದರೂ ಬುದ್ಧಿಯಿಲ್ಲ !"

ದೇವಕಿ:— "ನೀನು ಸ್ವಲ್ಪ ಅವನ ಹತ್ತಿರ ಹೋಗಿ ಬಂದಿದ್ದರೆ ಚೆನ್ನಾ ಗಿತ್ತು."

ಕಮಲಾ:— "ಈ ಸಮಯದಲ್ಲಿ ನನ್ನನ್ನು ಚಕ್ರವರ್ತಿಯೇ ಕರೆದರೂ ನಾನು ಹೋಗುವುದಿಲ್ಲ. ಇರಲಿ, ಎಂದಾದರೂ ಒಂದು ದಿನ ಹೋಗಿ ಕ್ಷೇಮ ಸಮಾಚಾರ ವಿಚಾರಿಸಿಕೊಂಡು ಬರುವೆನು. ಆದರೆ ಅವನಿಗೇನೋ ಹುಚ್ಚು ಹಿಡಿದಿದೆ. ಇವನಲ್ಲಿ ಸ್ವಲ್ಪ ತಿಳುವಳಿಕೆಯಿದೆಯೆಂದು ನಾನು ತಿಳಿದಿದ್ದೆ. ಆದರೆ

ಹೆಚ್ಚಾಗಿ ಓದಿದ್ದರಿಂದ ಬಂದ ಲಾಭವೇನು, ಹೇಳು. ನಾನು ಓದು ಬಿಟ್ಟಿದ್ದೇ ಒಳ್ಳೆಯದಾಯಿತು. ಹೆಚ್ಚು ಓದಿದರೆ ಬುದ್ಧಿ ಭ್ರಷ್ಟವಾಗುತ್ತದೆ; ದೃಷ್ಟಿಯೇ ಮಂಕಾದರೆ ಬುದ್ಧಿ ಹೇಗೆ ಸ್ಥಿರವಾಗಿರಬಲ್ಲದು ? ಈ ಸ್ಥಿತಿಯಲ್ಲಿ ವಿಧವೆಯೇ ಅವನಿಗೆ ತಕ್ಕ ವಧುವೆಂದು ಕಂಡುಬಂದರೆ ಆಶ್ಚರ್ಯವೇನು ? ನಮ್ಮ ಅಡಿಗೆಯವಳೆಲ್ಲಿ ? ನಿಮ್ಮಗಳ ಭಾಗ್ಯೋದಯವಾಗಿದೆಯೆಂದು ಆವಳಿಗೆ ಹೇಳಿಬಿಡು. ನಾಳೆಯೇ ಸಂದೇಶ ಕಳುಹಿಸಲಿ. ಯಾರೂ ಹೋಗದಿದ್ದರೆ ನಾನೇ ಹೋಗಲು ಸಿದ್ಧನಿರುವೆನು. ಬಹಳ ಮರುಖಾ ಆಗಿರುತ್ತೆ. ಎಲ್ಲಿ ಅಡಿಗೆಯವಳು ? ಈಗ ವಿಧವೆಯರ ಅದೃಷ್ಟ ಖುಲಾಯಿಸಿದೆ. ನಮ್ಮ ಸಂಬಂಧದ ವಿಧವೆಯೇ ಆಗಿರಬೇಕೆಂಬ ಬಂಧನವೂ ಇಲ್ಲ; ಯಾರು ಬೇಕಾದರೂ ಆಗಬಹುದು.”

ದೇವಕಿ:— “ನಾನೇನೋ ಇದನ್ನರಿಯೆ. ಹಾಗಾದರೆ ಅವನು ಇಷ್ಟು ಹಾಳಾಗುತ್ತಾನೆಯೆ ?”

ಕಮಲಾ:— “ಈ ಸಭೆಯವರು ಮಾಡದಿರುವ ಕೆಲಸವೇ ಇಲ್ಲ. ಈ ಸಭೆಯವರಿಗೆ ಕುಳಿತೆಡೆಯೇ ಹೊಳೆಯುವ ವಿಷಯಗಳೆಂದರೆ ಬುಡವಿಲ್ಲದ ವಿಚಾರಗಳು. ಒಂದು ದಿನ ಪಂಜಾಬಿನಿಂದ ಒಬ್ಬ ಹರಟೆಮಲ್ಲ ಬಂದಿದ್ದ. ಜಾತಿ-ಗೀತಿಯೆಲ್ಲಾ ಬಿಟ್ಟುಬಿಡಿ. ಇದರಿಂದ ಒಡಕು ಹುಟ್ಟುತ್ತದೆಂದು ಹೇಳಿಬಿಟ್ಟನು. ಹೀಗೆಯೇ ಇನ್ನೊಬ್ಬ ಮೂರ್ಖ ಹೇಳಿ ಹೋದ—ಚಮ್ಮಾರರು, ಭಂಗಿಗಳನ್ನು ಸೋದರರಂತೆ ತಿಳಿಯಿರಿ. ಅವರಲ್ಲಿ ಯಾವ ವಿಧವಾದ ಭೇದವನ್ನು ಎಣಿಸಬೇಡಿ. ಸರಿ, ಎಲ್ಲರೂ ಕುಳಿತಲ್ಲಿಯೇ ಯಾವುದಾದರೊಂದು ಹೊಸ ವಿಚಾರಾನ್ವೇಷಣೆಯಲ್ಲಿ ತಲ್ಲೀನರಾಗಿರುತ್ತಾರೆ. ಮುದುಕ ಗಾಂಧಿಗೆ ಇನ್ನೇನೂ ತೋಚಲಿಲ್ಲ, ಸ್ವರಾಜ್ಯದ ಜಯಭೇರಿ ಬಾರಿಸಿಬಿಟ್ಟನು. ಎಲ್ಲರೂ ತಿಳಿಗೇಡಿಗಳೇ ಸರಿ !”

ಇಷ್ಟರಲ್ಲಿಯೇ ಒಬ್ಬ ಯುವತಿಯು ಅಂಗಳಕ್ಕೆ ಬಂದಳು. ಆದರೆ ಕಮಲಾಪ್ರಸಾದನನ್ನು ನೋಡುತ್ತಲೆ ಲಜ್ಜೆಯಿಂದ ಬಾಗಿಲಲ್ಲಿಯೇ ನಿಂತಳು. ದೇವಕಿಯು ಮಗನಿಗೆ ಹೇಳಿದಳು— “ನೀನು ಸ್ವಲ್ಪ ರೂಮಿಗೆ ಹೋಗು. ಪೂರ್ಣಾ ಬಾಗಿಲಲ್ಲಿಯೇ ನಿಂತಿದ್ದಾಳೆ.”

ಪೂರ್ಣಾಳನ್ನು ನೋಡುತ್ತಲೇ ಪ್ರೇಮಾ ಓಡಿಹೋಗಿ ಅವಳನ್ನು ಅಪ್ಪಿಕೊಂಡಳು. ನೆರೆಮನೆಯಲ್ಲಿಯೇ ಪಂಡಿತ ವಸಂತಕುಮಾರನೆಂಬ ಸದ್ಗೃಹಸ್ಥ

ನೊಬ್ಬನಿದ್ದನು. ' ಅವನು ಆಫೀಸೊಂದರಲ್ಲಿ ಗುಮಾಸ್ತನಾಗಿದ್ದನು. ಪೂರ್ಣಾ ಅವನ ಧರ್ಮಪತ್ನಿ; ಬಹಳ ಸುಂದರಿ ಮತ್ತು ಸುಶೀಲಳು. ಮನೆಯಲ್ಲಿ ಬೇರೆ ಯವರಾರೂ ಇರಲಿಲ್ಲ. ವಸಂತನು ಊಟ ಮಾಡಿಕೊಂಡು ಹತ್ತು ಗಂಟೆಗೆ ಆಫೀಸಿಗೆ ಹೋದನಂತರ ಇವಳು ಇಲ್ಲಿಗೆ ಬರುತ್ತಿದ್ದಳು. ಸಾಯಂಕಾಲದ ವರೆಗೂ ಇಬ್ಬರು ಗೆಳತಿಯರೂ ನಗುತ್ತಾ ಹರಟುತ್ತಾ ಕಾಲ ಕಳೆಯುತ್ತಿದ್ದರು. ಪ್ರೇಮಾಗೆ ಪೂರ್ಣಾಳಲ್ಲಿ ಅಗಾಧ ಪ್ರೇಮವಿತ್ತು. ಎಂದಾದರೂ ಪೂರ್ಣಾ ಇವಳ ಮನೆಗೆ ಬರದಿದ್ದರೆ, ಪ್ರೇಮಾ ತಾನೇ ಅವಳ ಮನೆಗೆ ಹೋಗುತ್ತಿದ್ದಳು. ಇಂದು ವಸಂತಕುಮಾರನು ಎಲ್ಲಿಯೋ ಔತಣಕ್ಕೆ ಹೋಗಿದ್ದನು. ಪೂರ್ಣಾಳ ಮನಸ್ಸಿಗೆ ತುಂಬಾ ಬೇಸರವಾಯಿತು. ಮನಸ್ಸು ತಡೆಯದೆ ಇಲ್ಲಿಗೆ ಹೊರಟು ಬಂದಳು. ಪ್ರೇಮಾ ಅವಳ ಕೈ ಹಿಡಿದುಕೊಂಡು ಮೇಲೆ ತನ್ನ ಕೊಠಡಿಗೆ ಕರೆದುಕೊಂಡು ಹೋದಳು.

ಪೂರ್ಣಾ ಮೇಲ್ಮುಸುಕನ್ನು ಗೂಟಕ್ಕೆ ನೇತು ಹಾಕುತ್ತಾ ಹೇಳಿದಳು— "ನಿಮ್ಮ ಅಣ್ಣ ಅಂಗಳದಲ್ಲಿಯೇ ನಿಂತಿದ್ದರು. ನಾನು ಬುರಖಾ ಇಲ್ಲದೆಯೇ ಬರುತ್ತಿದ್ದೆ. ನನ್ನ ಮೇಲೆ ಅವರ ದೃಷ್ಟಿ ಬಿದ್ದಿರಬಹುದು."

ಪ್ರೇಮಾ:— "ಅಣ್ಣನಿಗೆ ಯಾವ ಕಡೆಗೂ ನೋಡುವ ಅಭ್ಯಾಸವಿಲ್ಲ. ಇದೊಂದೇ ಅವನಲ್ಲಿರುವ ದೊಡ್ಡ ಗುಣ. ನಿನ್ನ ಯಜಮಾನರು ಎಲ್ಲಿಯಾ ದರೂ ಹೋಗಿದ್ದಾರೋ?"

ಪೂರ್ಣಾ:— "ಹೌದು, ಇಂದು ಒಂದು ಔತಣಕ್ಕೆ ಹೋಗಿದ್ದಾರೆ."

ಪ್ರೇಮಾ:— "ಸಭೆಗೆ ಹೋಗಿಲ್ಲವೇನು? ಈ ದಿನ ಭಾರಿ ಸಭೆ ಸೇರಿ ದೆಯಂತೆ."

ಪೂರ್ಣಾ:— "ಅವರಿಗೆ ಯಾವ ಸಭೆ, ಸಮಾಜಗಳಿಗೂ ಹೋಗುವ ಅಭ್ಯಾಸವಿಲ್ಲ. ಭಗವಂತನೇ ಪ್ರಪಂಚವನ್ನು ಸೃಷ್ಟಿಸಿದ್ದಾನೆ. ಅವನು ತನ್ನ ಇಚ್ಛಾನುಸಾರವಾಗಿ ಪ್ರತಿಯೊಂದು ವಿಷಯವನ್ನೂ ವ್ಯವಸ್ಥಿತ ರೀತಿಯಲ್ಲಿ ನಡೆ ಸಿಕೊಂಡು ಹೋಗುತ್ತಾನೆ. ನಾನು ಅವನ ಕೆಲಸವನ್ನು ಸುಧಾರಿಸುವ ಸಾಹಸವನ್ನು ಮಾಡಲಾರೆ" ಎಂದು ಹೇಳುತ್ತಾರೆ.

ಪ್ರೇಮಾ:— "ಇಂದಿನ ಸಭೆ ನೋಡಲರ್ಹವಾಗಿತ್ತು. ನೀನು ಬರುವು ದಾಗಿದ್ದರೆ ನಾನೂ ಕೂಡ ಹೋಗುತ್ತಿದ್ದೆ. ಸಮಾಜ ಸುಧಾರಣೆಯ ವಿಷಯು

ವಾಗಿ ಮಹನೀಯರೊಬ್ಬರ ಒಂದು ಉತ್ತಮ ಭಾಷಣವಾಯಿತು."

ಪೂರ್ಣಾ:— "ಸ್ತ್ರೀಸುಧಾರಣೆಯ ರಾಗವನ್ನಾಲಾಪಿಸಿರಬಹುದು."

ಪ್ರೇಮಾ:— "ಹಾಗಾದರೆ ಸ್ತ್ರೀ ಸುಧಾರಣೆಯ ಆವಶ್ಯಕತೆಯಿಲ್ಲವೆ ?"

ಪೂರ್ಣಾ:— "ಮೊದಲು ಪುರುಷರು ತಮ್ಮ ಸ್ಥಿತಿಯನ್ನು ಸುಧಾರಿಸಿಕೊಳ್ಳಲಿ, ನಂತರ ಸ್ತ್ರೀಯರ ಸುಧಾರಣೆಗೆ ಕೈಹಾಕಲಿ. ಅವರ ಸ್ಥಿತಿಯು ಸುಧಾರಿಸಿದರೆ ಸ್ತ್ರೀಯರು ತಮ್ಮನ್ನು ತಾವೇ ಸುಧಾರಿಸಿಕೊಳ್ಳುವರು. ದುಷ್ಕೃತ್ಯಗಳಿಗೆಲ್ಲ ಪುರುಷರೇ ಮೂಲ !"

ಪ್ರೇಮಾ ನಕ್ಕು ಹೇಳಿದಳು— "ಅಕ್ಕ ಹಾಗಲ್ಲ. ಸಮಾಜದಲ್ಲಿ ಸ್ತ್ರೀ-ಪುರುಷರೀರ್ವರೂ ಇದ್ದಾರೆ. ಉಭಯತರ ಉನ್ನತಿಯಾಗುವ ತನಕ ಜೀವನ ಸುಖಮಯವಾಗಲಾರದು. ಪುರುಷನು ವಿದ್ಯಾವಂತನಾದರೆ ಸ್ತ್ರೀ ವಿದ್ಯಾವತಿಯಾದಂತಾಯಿತೆ ? ಗಂಡಸರಾದರೋ ವಿಶೇಷವಾಗಿ ಸರಳವಾದ ಉಡುಪನ್ನೇ ಧರಿಸುತ್ತಾರೆ. ಆದರೆ ಹೆಂಗಸರೇಕೆ ಆಭರಣಗಳಿಗಾಗಿ ಪ್ರಾಣ ಬಿಡುತ್ತಾರೆ " ಪುರುಷರಲ್ಲಿ ಎಷ್ಟೋ ಮಂದಿ ಬ್ರಹ್ಮಚಾರಿಗಳಾಗಿಯೇ ಇರುತ್ತಾರೆ. ಸ್ತ್ರೀಯರಿಗೇಕೆ ಅವಿವಾಹಿತ ಜೀವನವು ವ್ಯರ್ಥವಾಗಿ ಕಾಣಬೇಕು ? ನೀನೇ ಹೇಳು. ಅವಿವಾಹಿತ ಜೀವನದಲ್ಲಿರುವ ಸುಖವು ವಿವಾಹಿತ ಜೀವನದಲ್ಲಿ ಇಲ್ಲವೆಂದೇ ನನ್ನ ಭಾವನೆ."

ಪೂರ್ಣಾ ಮೆಲ್ಲಗೆ ಪ್ರೇಮಾಳನ್ನು ಚಿವುಟಿ ಹೇಳಿದಳು— " ಬಿಡು ಸೋದರಿ. ನೀನು ಎಂತಹ ಮಾತುಗಳನ್ನಾಡುತ್ತಿರುವೆ ? ಬಾಬು ಅಮೃತರಾಯರು ನಿನ್ನ ಈ ಮಾತು ಕೇಳಿದರೆ ನಿನಗೆ ತಕ್ಕ ಶಾಸ್ತಿ ಮಾಡದೆ ಇರರು. ಇವಳು ನಿಮ್ಮನ್ನು ಮದುವೆ ಮಾಡಿಕೊಳ್ಳುವುದಿಲ್ಲ. ನೀವು ಬೇರೆ ಎಲ್ಲಿಯಾದರೂ ನೋಡಿಕೊಳ್ಳಿಯೆಂದು ನಾನು ಇಂದು ಅವರಿಗೆ ಪತ್ರ ಬರೆಯುವೆನು."

ಪ್ರೇಮಾ ಅಮೃತರಾಯನ ಪ್ರತಿಜ್ಞೆಯ ವಿಷಯ ಪೂರ್ಣಾಗೆ ಹೇಳಲಿಲ್ಲ. ಇದರಿಂದ ಪೂರ್ಣಾಳ ದೃಷ್ಟಿಯಲ್ಲಿ ಅಮೃತರಾಯನ ಗೌರವವು ಬಹಳ ಕಡಿಮೆಯಾಗುವುದೆಂದು ಅವಳು ತಿಳಿದಿದ್ದಳು. ಹೇಳಿದಳು— "ಅವರೇ ವಿವಾಹ ಮಾಡಿಕೊಳ್ಳಲು ಸಿದ್ಧರಿಲ್ಲ."

ಪೂರ್ಣಾ:— "ಸುಳ್ಳನ್ನೇಕೆ ಹೇಳುವೆ, ಪ್ರೇಮಾ ?"

ಪ್ರೇಮಾ:— "ಇಲ್ಲ ಅಕ್ಕ, ಸುಳ್ಳಲ್ಲ. ಮದುವೆ ಮಾಡಿಕೊಳ್ಳಲು ಅವರಿಗೆ ಇಷ್ಟವಿಲ್ಲ. ಪ್ರಾಯಶಃ ಮೊದಲಿನಿಂದಲೂ ಅವರಿಗೆ ಆ ಆಶೆ ಇರಲಿಲ್ಲ. ಅಕ್ಕನ ಮರಣಾನಂತರ ಅವರು ಸ್ವಲ್ಪ ವಿರಕ್ತರಂತಾಗಿದ್ದರು. ತಂದೆಯವರು ಬಹಳ ಬಲವಂತ ಮಾಡಿದ್ದರಿಂದ ನನ್ನಲ್ಲಿ ಕನಿಕರಗೊಂಡು ಮದುವೆಗೆ ಒಪ್ಪಿದ್ದರು. ಆದರೆ ಈಗ ಅವರ ಅಭಿಪ್ರಾಯವು ಪರಿವರ್ತನಗೊಂಡಿದೆ. ಯಾವಾಗ ಯಾವನಾದರೂ ವ್ಯಕ್ತಿ ಸ್ವತಃ ಸಾಂಸಾರಿಕ ಕಷ್ಟಪರಂಪರೆಗಳಿಗೆ ಸಿಕ್ಕದೆ ಜನ ಸೇವಾಕಾಂಕ್ಷಿಯಾಗಿರುತ್ತಾನೋ ಅಂತಹವನ ಮಾರ್ಗದಲ್ಲಿ ಯಾರೂ ಕಂಟಕ ಪ್ರಾಯರಾಗಬಾರದೆಂದು ನನ್ನ ಅಭಿಪ್ರಾಯ. ಪೂರ್ಣಾ, ನಾನು ನಿನ್ನೊಡನೆ ಸತ್ಯವನ್ನೇ ಹೇಳುತ್ತಿದ್ದೇನೆ. ನನಗೆ ಅವರ ಈ ನಿರ್ಧಾರದಿಂದ ಯಾವ ವಿಧವಾದ ದುಃಖವೂ ಇಲ್ಲ. ಅವರ ಸಮ್ಮುಖದಲ್ಲಿಯೇ ನಾನೂ ಸಾಧ್ಯವಾದಷ್ಟು ಸೇವಾಕಾರ್ಯವನ್ನು ಮಾಡಬೇಕೆಂದಿರುವೆನು"

ಪೂರ್ಣಾಳ ಆಶ್ಚರ್ಯವು ಹೆಚ್ಚುತ್ತಲೇ ಹೋಯಿತು. ಹೇಳಿದಳು— "ಈದಿನ ನಾಲ್ಕು ಗಂಟೆಯ ವರೆಗೂ ನೀನಿಂತಹ ಮಾತುಗಳನ್ನಾಡುತ್ತಿರಲಿಲ್ಲ; ಇದಕ್ಕಿದ್ದಂತೆಯೇ ಈ ಪರಿವರ್ತನೆ ಹೇಗಾಯಿತು? ಅವರು ಯಾರೊಡನೆಯಾದರೂ ಏನಾದರೂ ಹೇಳಿದ್ದಾರೆಯೆ?"

ಪ್ರೇಮಾ:— "ಇತರರಿಗೆ ಹೇಳದೆಯೂ ಕೂಡ ಮನುಷ್ಯನು ತನ್ನ ಇಷ್ಟವನ್ನು ಸೂಚಿಸಬಲ್ಲನು."

ಪೂರ್ಣಾ:— "ನಾನು ಒಂದು ಪತ್ರ ಮುಖೇನ ಅವರ ಅಭಿಪ್ರಾಯವನ್ನು ತಿಳಿಯುವೆನು."

ಪ್ರೇಮಾ:— "ಹಾಗೆ ಮಾಡಬೇಡ ಪೂರ್ಣಾ, ನಾನು ನಿನ್ನ ಕಾಲಿಗೆರಗುತ್ತೇನೆ. ನೀನು ಅವರಿಗೆ ಖಂಡಿತ ಪತ್ರ ಬರೆಯಬೇಡ. ನಾನು ಯಾರ ಶುಭ ಕಾರ್ಯದಲ್ಲಿಯೂ ವಿಘ್ನವನ್ನುಂಟು ಮಾಡಲಾರೆನು. ನನ್ನಿಂದ ಅವರಿಗೆ ಯಾವ ವಿಧವಾದ ಸಹಾಯವಾಗದಿದ್ದರೂ ಚಿಂತೆಯಿಲ್ಲ, ಆದರೆ ಅವರ ಮಾರ್ಗದಲ್ಲಿ ಕಂಟಕಸ್ವರೂಪಳಾಗಲಾರೆನು."

ಪೂರ್ಣಾ:— "ಪ್ರೇಮಾ, ನಾನು ಹೇಳುವುದನ್ನು ಕೇಳು. ಆಯುಷ್ಯವನ್ನೆಲ್ಲಾ ದುಃಖದಲ್ಲಿಯೇ ಕಳೆಯಬೇಕಾಗುವುದು."

ಪ್ರೇಮಾ:— "ಮನುಷ್ಯನು ಸಹಿಸದಿರುವ ದುಃಖವಾವುದೂ ಇಲ್ಲ. ಅವರ ನಿರ್ಧಾರದಿಂದ ನನಗೆ ದುಃಖವಾಗಲಾರದು, ಸಂತೋಷವಾಗುವುದೆಂಬುದು ಅವರಿಗೆ ಗೊತ್ತಿದೆ. ಇಲ್ಲವಾದಲ್ಲಿ ಅವರು ಎಂದಿಗೂ ಇಂತಹ ನಿರ್ಧಾರ ಮಾಡುತ್ತಿರಲಿಲ್ಲ. ಇಂತಹ ಮಹಾನುಭಾವನ ಉತ್ಸಾಹವನ್ನು ಹೆಚ್ಚಿಸುವುದು ನನ್ನ ಧರ್ಮವೆಂದು ತಿಳಿದಿದ್ದೇನೆ. ಅವರನ್ನು ಗೃಹಸ್ಥ ಜೀವನದ ಕಷ್ಟಪರಂಪರೆಗಳಿಗೆ ಸಿಕ್ಕಿಸಲು ನಾನು ಇಷ್ಟಪಡುವುದಿಲ್ಲ."

ಪೂರ್ಣಾ ಬೇಸರದಿಂದ ಹೇಳಿದಳು—"ಪ್ರೇಮಾ, ನಿನ್ನ ಈ ಮಾಯೆಯು ನನಗೆ ಅರ್ಥವಾಗುವುದಿಲ್ಲ. ನನ್ನನ್ನು ಕ್ಷಮಿಸು. ಇದರಿಂದ ನಿನಗೆ ದುಃಖವಾಗುವುದಿಲ್ಲವೆಂಬುದನ್ನು ನಾನು ಒಪ್ಪುವುದಿಲ್ಲ."

ಪ್ರೇಮಾ:— "ಹಾಗಾದರೆ ಅವರಿಗೂ ದುಃಖವಾಗಬಹುದು."

ಪೂರ್ಣಾ:— " ಪುರುಷರ ಹೃದಯವು ಕಲ್ಲಿನಂತೆ ಕಠೋರವಾಗಿರುತ್ತದೆ. "

ಪ್ರೇಮಾ:— "ಹಾಗಾದರೆ ನಾನೂ ಕೂಡ ನನ್ನ ಹೃದಯವನ್ನು ಕಲ್ಲು ಮಾಡಿಕೊಳ್ಳುತ್ತೇನೆ."

ಪೂರ್ಣಾ:— "ಒಳ್ಳೆಯದು, ಹಾಗೆಯೇ ಮಾಡಿಕೊ. ಈ ವಿಷಯವಾಗಿ ಈಗ ನಾನೇನೂ ಹೇಳುವುದಿಲ್ಲ. ಎಲ್ಲಿ, ಹಾರ್ಮೋನಿಯಂ ಆದರೂ ತೆಗೆದುಕೊಂಡು ಬಾ, ನಿನಗೆ ಒಂದು ಹಾಡು ಹೇಳುವೆನು."

ಪ್ರೇಮಾ ಹಾರ್ಮೋನಿಯಂ ಬಾರಿಸಲಾರಂಭಿಸಿದಳು ಮತ್ತು ಪೂರ್ಣಾ ತನ್ಮಯತೆಯಿಂದ ಹಾಡತೊಡಗಿದಳು.

## ೩

ಹೋಳಿ ಹಬ್ಬ ಬಂದಿತು. ಇದು ಪಂಡಿತ ವಸಂತಕುಮಾರನಿಗೆ ಭಂಗಿ ಕುಡಿಯುವ ದಿನ. ಕೆಲವು ತಿಂಗಳ ಹಿಂದಿನಿಂದಲೇ ಭಂಗಿ ಸೊಪ್ಪನ್ನು ತರಿಸಿಟ್ಟಿದ್ದನು. ತನ್ನ ಗೆಳೆಯರಿಗೆಲ್ಲಾ ಭಂಗಿ ಕುಡಿಯಲು ಆಹ್ವಾನವಿತ್ತಿದ್ದನು ಆ

ದಿನ ಎದ್ದ ಕೂಡಲೆ ಬೆಳಿಗ್ಗೆ ಅವರು ಮೊದಲು ಮಾಡಿದ ಕೆಲಸವೆಂದರೆ ಭಂಗಿಯನ್ನು ತೊಳೆದದ್ದು. ಮೊಹಲ್ಲೆಯ ನಾಲ್ಕಾರು ಉಂಡಾಡಿಗಳು ಸೇರಿಕೊಂಡರು. ಭಂಗಿ ಸೊಪ್ಪನ್ನು ಚೆನ್ನಾಗಿ ತೊಳೆದರು. ಕೆಲವರು ಮಸಾಲೆ ಸಾಮಗ್ರಿಗಳನ್ನು ಅರೆದರು. ಕೆಲವರು ಬಾದಾಮಿ ಸುಲಿದರು. ಇಬ್ಬರು ಹಾಲು ತರಲು ಹೋದರು. ಕೆಲವರು ಅರೆಯುವ ಕಲ್ಲು ತೊಳೆದರು. ಸಾಧಾರಣವಾಗಿ ಒಂದು ಗುಂಪೇ ಸೇರಿತು.

ಇಷ್ಟರಲ್ಲಿಯೇ ಬಾಬು ಕಮಲಾಪ್ರಸಾದನು ಬಂದನು. ಈ ಗುಂಪನ್ನು ನೋಡಿ ಹೇಳಿದನು— "ಏನೇನು ನಡೆಯುತ್ತಿದೆ? ಇದರಲ್ಲಿ ನನ್ನ ಪಾಲೂ ಇದೆಯಷ್ಟೆ ?"

ವಸಂತಕುಮಾರನು ಮುಂದೆ ಬಂದು ಸ್ವಾಗತಿಸುತ್ತಾ ಹೇಳಿದನು— "ಅಗತ್ಯವಾಗಿಯೂ, ಸಿಹಿಯಾಗಿರುವುದು ಬೇಕೋ ಅಥವಾ ಉಪ್ಪಾಗಿರುವುದೋ ?"

ಕಮಲಾ:— "ಸಿಹಿ ಕುಡಿಸಪ್ಪಾ, ಉಪ್ಪಾಗಿರುವುದು ಯಾರಿಗೆ ಬೇಕು ? ಆದರೆ ಮಿತ್ರ, ಕೇಸರಿ ಮತ್ತು ಸುಗಂಧ ದ್ರವ್ಯಗಳನ್ನು ಹೆಚ್ಚಾಗಿ ಹಾಕಿರಬೇಕು. ಯಾರನ್ನಾದರೂ ಕಳುಹಿಸು, ನಮ್ಮ ಮನೆಗೆ ಹೋಗಿ ತರಲಿ. ಯಾವನಾದರೂ ಆಳನ್ನು ಈಗಲೇ ಕಳುಹಿಸು, ನಮ್ಮ ಮನೆ ಒಳಕ್ಕೆ ಹೋಗಿ ಪ್ರೇಮಾಳನ್ನು ಕೇಳಿ ತೆಗೆದುಕೊಂಡು ಬರಲಿ. ಎಲ್ಲಿಯಾದರೂ ನನ್ನ ಧರ್ಮಪತ್ನಿಯ ಹತ್ತಿರ ಹೋದಾನು; ಹೋದರೆ ಬೈಯಿಸಿಕೊಳ್ಳದೆ ಬರಲಾರನು. ಹಬ್ಬ ಹರಿದಿನಗಳಲ್ಲಿ ಕೋಪಗೊಳ್ಳುವುದು ಅವಳ ಸ್ವಭಾವವಾಗಿ ಬಿಟ್ಟಿದೆ. ವಸಂತಕುಮಾರ್, ಧರ್ಮಪತ್ನಿಯರನ್ನು ಪ್ರಸನ್ನಗೊಳಿಸುವ ಯಾವುದಾದರೂ ಔಷಧ ಗೊತ್ತಿದ್ದರೆ ನನಗೆ ತಿಳಿಸಲಾರೆಯಾ ? ನನಗಂತೂ ಸಾಕಾಗಿ ಹೋಗಿದೆ."

ವಸಂತಕುಮಾರನು ನಸುನಗುತ್ತಾ ಹೇಳಿದನು— "ನಮ್ಮ ಮನೆಗೆ ಈ ರೋಗ ಅಂಟಿಲ್ಲ."

ಕಮಲಾ:— "ಹಾಗಾದರೆ ನೀನು ಬಹಳ ಭಾಗ್ಯಶಾಲಿಯಪ್ಪಾ ! ಪೂರ್ಣಾ ನಿನ್ನೊಡನೆ ಎಂದೂ ಕೋಪಿಸಿಕೊಳ್ಳುವುದಿಲ್ಲವೆ ?"

ವಸಂತ:— "ಎಂದಿಗೂ ಇಲ್ಲ."

ಕಮಲಾ:— ಎಂದಾದರೂ ಯಾವ ವಿಷಯದಲ್ಲಾದರೂ ಹಟ ಮಾಡು ವುದಿಲ್ಲವೆ ?"

ವಸಂತ:— "ಎಂದಿಗೂ ಇಲ್ಲ."

ಕಮಲಾ:— "ಗೆಳೆಯಾ, ನಿಜವಾಗಿಯೂ ಅದೃಷ್ಟಶಾಲಿ ನೀನು. ನನ್ನ ಬಾಳೆಲ್ಲವೂ ಸೆರೆಮನೆಯ ಬದುಕಿನಂತಾಗಿದೆ. ಕ್ಷಣಕಾಲ ಹೊರಬಿದ್ದು ಬಂದರೆ, ವಿಚಾರಣೆಗೆ ಪ್ರಾರಂಭ! ನಿತ್ಯ ಸಿನಿಮಾಕ್ಕೆ ಹೋಗುತ್ತೇನೆ. ಬಂದ ಮೇಲೆ ಗಂಟೆಗಟ್ಟಲೆ ಸಮಾಧಾನಪಡಿಸಬೇಕಾಗುತ್ತದೆ."

ವಸಂತ:— "ಹಾಗಾದರೆ ಸಿನೇಮಾಕ್ಕೆ ಹೋಗಲೇಬೇಡ."

ಕಮಲಾ:— "ಭಲೆ! ಭಲೆ! ನೀನೂ ಚೆನ್ನಾಗಿ ಹೇಳಿದೆ! ದೇವರಾಣೆ ಯಾಗಿಯೂ ನೀನು ಹೇಳಿದ್ದು ನಿಜ ! ಜಗಳವಾದರೂ ಸರಿ, ಅವಳು ಬೇಡ ವೆಂದ ದಿನ ನಾನು ಹೋಗದಿರಲು ಸಾಧ್ಯವೆ? ಸರಿ, ನಾಳೆ ನಾನು ಮನೆ ಬಿಟ್ಟು ಹೊರಡುವುದೇ ಇಲ್ಲ. ಆಗ ಏನು ಹೇಳುವಳೋ ನೋಡುವೆನು. ನೋಡಿದೆಯಾ ನಿನ್ನ ಆಳು ಇನ್ನೂ ಕೇಸರಿ ತೆಗೆದುಕೊಂಡು ಬರಲೇ ಇಲ್ಲ. ಅವಳಿಗೆ ಈ ವಿಷಯವೆಲ್ಲೋ . ತಿಳಿದಿರಬಹುದು. ಪ್ರೇಮಾಗೆ ಕೊಡಬೇಡ ವೆಂದು ಹೇಳಿರಬಹುದು. ನೋಡು, ವಸಂತ, ಈಗಂತೂ ನನ್ನಿಂದ ಸುಮ್ಮ ನಿರಲು ಸಾಧ್ಯವಿಲ್ಲ. ಇಂದು ಯಾರಾದರೂ ನನಗೆ ವಿರುದ್ಧವಾಗಿ ನುಡಿದರೆ ಒಳಿತಾಗದು. ನಾನು ಈಗಲೇ ಹೋಗಿ ಎಲ್ಲಾ ಸಾಮುಗ್ರಿಗಳನ್ನೂ ಕಳುಹಿ ಸುತ್ತೇನೆ. ಆದರೆ ನಾನು ಬರುವ ತನಕ ನೀನು ಮಾಡಿಸಬೇಡ. ಇಲ್ಲಿ ಈ ಕಲೆಯಲ್ಲಿ ಕುಶಲರಾದವರಿಗೇನೂ ಕಡಿಮೆಯಿಲ್ಲ. ಇದು ವಂಶಪಾರಂಪರ್ಯ ವಾಗಿ ಬಂದಿರುವ ವಿಷಯ. ಅಣ್ಣಾ ಒಂದು ತೊಲ ಭಂಗಿ ಕುಡಿಯುತ್ತಾರೆ. ಅವರ ಆಯುಷ್ಯದಲ್ಲಿ ಭಂಗಿ ಕುಡಿಯದ ದಿನವೇ ಇಲ್ಲ. ಆದರೂ ಅವರಿಗೆ ಅಮಲೇರಿದುದನ್ನು ಕಂಡೇ ಇಲ್ಲ !"

ಹೀಗೆ ಹೇಳುತ್ತಾ ಕಮಲಾಪ್ರಸಾದನು ಕೋಪದಿಂದ ಮನೆಗೆ ಹೊರಟು ಹೋದನು. ಯಾವುದೋ ಕೆಲಸಕ್ಕಾಗಿ ವಸಂತಕುಮಾರನು ಒಳಗೆ ಹೋಗಿ ನೋಡಿದನು. ಪೂರ್ಣಾ ಮಂಗಳ ದ್ರವ್ಯವನ್ನು ಅರೆಯುತ್ತಿದ್ದಳು. ವಸಂತ ಕುಮಾರನ ಲಗ್ನವಾದ ಮೇಲೆ ಬಂದಿರುವ ಹೋಳಿ ಹಬ್ಬದಲ್ಲಿ ಇದು ಎರಡನೆ ಯದು. ಪಾಪ ಮೊದಲಿನ ಹೋಳಿಯಲ್ಲಿ ವಸಂತಕುಮಾರನು ರಿಕ್ತಹಸ್ತನಾಗಿ

ದ್ದನು. ಪೂರ್ಣಾಳ ಮನರಂಜನೆ ಮಾಡಲು ಸಾಧ್ಯವಾಗಿರಲಿಲ್ಲ. ಆದರೆ ಈ ಸಾರಿ ಅವನು ಪೂರ್ಣಾಳ ಮನಸ್ಸನ್ನು ಸಂತೋಷಪಡಿಸಲು ಅನೇಕ ಏರ್ಪಾಟುಗಳನ್ನು ಮಾಡಿದ್ದನು. ಕಷ್ಟಪಟ್ಟು ಕೆಲಸ ಮಾಡಿ ನೂರಐವತ್ತಕ್ಕೂ ಹೆಚ್ಚು ರೂಪಾಯಿಗಳನ್ನು ಸಂಪಾದಿಸಿದ್ದನು. ಪೂರ್ಣಾಗೆ ಒಳ್ಳೆಯ ಸೀರೆಯನ್ನು ತಂದಿದ್ದನು. ಒಂದೆರಡು ಚಿಕ್ಕ ಚಿಕ್ಕ ಆಭರಣಗಳನ್ನೂ ಮಾಡಿಸಿದ್ದನು. ಇಂದು ಆ ಸೀರೆಯನ್ನುಟ್ಟುಕೊಂಡ ಪೂರ್ಣಾ ಅವನಿಗೆ ಅಪ್ಸರೆಯಂತೆ ಕಾಣುತ್ತಿದ್ದಳು. ಅವಳ ಸಮೀಪಕ್ಕೆ ಹೋಗಿ ಹೇಳಿದನು— "ಪೂರ್ಣಾ, ಇಂದು ನಿನ್ನನ್ನು ನನ್ನ ಹೃದಯದಲ್ಲಿ ಸೇರಿಸಿಕೊಳ್ಳಬೇಕು ಅನಿಸುತ್ತೆ."

ಪೂರ್ಣಾ ಮಂಗಳ ದ್ರವ್ಯವನ್ನು ಒಂದು ಬಟ್ಟಲಿಗೆ ಹಾಕುತ್ತಾ ಹೇಳಿದಳು— "ಇಲ್ಲಿ ನೋಡಿ, ನಾನು ಮೊದಲಿನಿಂದ ನಿಮ್ಮ ದಾರಿ ಕಾಯುತ್ತಿದ್ದೇನೆ."

ವಸಂತ:— "ಸ್ವಲ್ಪ ಸ್ನಾನ ಮುಗಿಸಿಕೊಂಡು ಬಂದು ಬಿಡುತ್ತೇನೆ. ಕಮಲಾಪ್ರಸಾದನು ಹತ್ತು ಗಂಟೆಗೆ ಮುಂಚೆ ಬರಲಾರನು."

ಪೂರ್ಣಾ:— "ಮೊದಲು ಸ್ವಲ್ಪ ಇಲ್ಲಿ ಬಂದು ಕುಳಿತುಕೊಳ್ಳಿರಿ. ಮಂಗಳ ದ್ರವ್ಯವನ್ನು ಹಚ್ಚುವೆನು. ನಂತರ ಸ್ನಾನಕ್ಕೆ ಹೋಗಿರಿ."

ವಸಂತ:— "ಬೇಡ, ಬೇಡ, ಇರಲಿ ಬಿಡು. ನನಗೆ ಮಂಗಳ ದ್ರವ್ಯವನ್ನು ಲೇಪಿಸಿಕೊಳ್ಳುವುದು ಇಷ್ಟವಿಲ್ಲ. ನನ್ನ ಪಂಚೆ ಕೊಟ್ಟುಬಿಡು."

ಪೂರ್ಣಾ;— "ಛೇಷ್ ! ಮಂಗಳ ದ್ರವ್ಯವನ್ನು ಏಕೆ ತಿಕ್ಕಿಸಿಕೊಳ್ಳುವುದಿಲ್ಲ? ಇಂದಿನ ಪದ್ಧತಿಯೇ ಹೀಗಲ್ಲವೆ? ಸುಮ್ಮನೆ ಬಂದು ಕುಳಿತುಕೊಳ್ಳಿರಿ."

ವಸಂತ:— "ಬಹಳ ಸೆಕೆಯಾಗುತ್ತಿದೆ. ನನ್ನಿಂದ ಖಂಡಿತ ಸಾಧ್ಯವಿಲ್ಲ."

ಪೂರ್ಣಾ ಚಂಗನೆ ಹಾರಿ ಅವನ ಕೈ ಹಿಡಿದುಕೊಂಡಳು. ಸುಗಂಧ ದ್ರವ್ಯವನ್ನು ಅವನ ಮೈಗೆ ಲೇಪಿಸುತ್ತಾ ಹೇಳಿದಳು— "ಒಳ್ಳೆಯ ಮಾತಿನಿಂದ ಹೇಳಿದರೆ ನೀವೆಲ್ಲಿ ಕೇಳುತ್ತಿದ್ದಿರಿ; ಈಗ ನೀವಾಗಿಯೇ ಕುಳಿತುಕೊಳ್ಳುವಿರಿ."

ವಸಂತನು ಸಂಕೋಚದಿಂದ ಹೇಳಿದನು— "ತ್ವರೆ ಮಾಡು, ಬಿಸಿಲೇರುತ್ತಿದೆ."

ಪೂರ್ಣಾ:— "ಈಗೇಕೆ ಗಂಗಾಸ್ನಾನಕ್ಕೆ ಹೋಗುತ್ತೀರಿ? ಇಲ್ಲೇ ಸ್ನಾನ ಮಾಡಿದರಾಯಿತು."

ವಸಂತ:— "ಇಲ್ಲ, ಈ ದಿನ ಗಂಗಾತೀರ ಬಹಳ ಆನಂದಕರವಾಗಿರುವುದು."

ಪೂರ್ಣಾ:— "ಸರಿ, ಹಾಗಾದರೆ ಬೇಗ ಮನೆಗೆ ಬಂದು ಬಿಡಿ; ಬಹಳ ಹೊತ್ತು ಈಜುತ್ತಲೇ ಇರಬೇಡಿ. ನೀವು ಸ್ನಾನ ಮಾಡುವಾಗ ಬಹಳ ದೂರ ಹೋಗುವಿರಿ. ಈ ದಿನ ಮಾತ್ರ ಹಾಗೆ ಮಾಡಬೇಡಿ."

ವಸಂತನು ಅಂಗರಾಗ (ತೈಲ) ವನ್ನು ತಿಕ್ಕಿಸಿಕೊಂಡು ಸ್ನಾನ ಮಾಡಲು ಹೋದನು. ಸ್ನಾನಘಟ್ಟದಿಂದ ಸ್ವಲ್ಪ ದೂರ ಹೋಗಿ ಸ್ನಾನ ಮಾಡುವುದು ಅವನ ವಾಡಿಕೆ. ಒಳ್ಳೆಯ ಈಜುಗಾರ. ಎಷ್ಟೋ ಸಾರಿ ನಗರದ ಈಜುಗಾರರನ್ನು ಸೋಲಿಸಿದ್ದನು. ಮನೆಯಿಂದ ಹೊರಡುವಾಗ ಈ ದಿನ ಈಜುವುದಿಲ್ಲವೆಂದು ಮಾತು ಕೊಟ್ಟು ಹೊರಟಿದ್ದನು. ಆದರೆ ಮಂದಗತಿಯಿಂದ ಚಲಿಸುತ್ತಿದ್ದ ವಾಯುವನ್ನು ನೋಡಿ ಅವನಿಗೆ ಈಜಬೇಕೆಂಬ ಆಶೆಯಾಯಿತು. ತಕ್ಷಣ ನದಿಗೆ ಧುಮುಕಿ ಸ್ವೇಚ್ಛೆಯಾಗಿ ಈಜಲಾರಂಭಿಸಿದನು. ಅಷ್ಟರಲ್ಲಿಯೇ ಅವನಿಗೆ ನದಿಯ ಮಧ್ಯೆ ಯಾವುದೋ ಒಂದು ಕೆಂಪು ವಸ್ತು ಕಾಣಿಸಿತು. ಮನಸ್ಸಿಟ್ಟು ನೋಡುವಲ್ಲಿ ಅವು ಕಮಲಗಳೆಂದು ಗೊತ್ತಾಯಿತು. ಸೂರ್ಯನ ಕಿರಣಗಳಿಂದ ಕಂಗೊಳಿಸುತ್ತಿದ್ದ ಆ ಪುಷ್ಪಗಳು ವಸಂತಕುಮಾರನ ಮನಸ್ಸನ್ನು ಆಕರ್ಷಿಸಿದುವು. ಇವು ಸಿಕ್ಕಿದರೆ, ಈ ದಿನ ಪೂರ್ಣಾಳ ತಲೆಗೆ ದಂಡೆ ಮಾಡಿ ಮುಡಿಸುವೆನೆಂದು ಯೋಚಿಸಿದನು. ಅವಳಿಗಾಗುವ ಸಂತೋಷವನ್ನು ಊಹಿಸಿ ಮನದಲ್ಲಿಯೇ ಹಿಗ್ಗಿದನು. ಗಟ್ಟಿಮುಟ್ಟಾದ ಆಳು; ನದಿಯ ಮಧ್ಯದವರೆಗೆ ಈಜಿಕೊಂಡು ಹೋಗುವುದು ಅವನಿಗೇನೂ ಕಷ್ಟವಾಗಿರಲಿಲ್ಲ. ಹೂವನ್ನು ತರಬಲ್ಲೆನೆಂಬ ದೃಢನಂಬಿಕೆ ಅವನಿಗಿತ್ತು. ಯೌವ್ವನದಲ್ಲಿ ಒಂದು ಬಗೆಯ ಉನ್ಮಾದವಿರುತ್ತದೆ. ತಾನು ಈಜಿಕೊಂಡು ಮುಂದೆ ಹೋದಂತೆಲ್ಲಾ ಹೂವು ಕೂಡ ಮುಂದೆ ಹೋಗುವುದೆಂಬುದನ್ನು ಅವನು ಗಮನಿಸಲಿಲ್ಲ. ಹೂವುಗಳ ಕಡೆ ಸಾಗಿದನು. ಸುಮಾರು ಕಾಲು ಗಂಟೆಯಲ್ಲಿ ನದಿಯ ಮಧ್ಯಕ್ಕೆ

ಬಂದಿದ್ದನು.

ಆದರೆ ಅಲ್ಲಿಗೆ ಹೋಗಿ ನೋಡುವಲ್ಲಿ ಹೂಗಳು ಮೊದಲಿನಷ್ಟೇ ದೂರದಲ್ಲಿದ್ದುವು. ಈಗ ಅವನಿಗೆ ಸ್ವಲ್ಪ ಆಯಾಸ ತೋರಿತು. ಆದರೆ ಮಧ್ಯೆ ಕ್ಷಣಕಾಲ ಕುಳಿತು ವಿಶ್ರಮಿಸಿಕೊಳ್ಳಲು ಯಾವ ಮಳಲು ದಿನ್ನೆಯೂ ಇರಲಿಲ್ಲ. ಈಜುತ್ತಲೇ ಮುಂದೆ ಮುಂದೆ ಹೋದನು. ಸ್ವಲ್ಪ ಕಾಲ ಕೈಗಳನ್ನೂ, ಮತ್ತೆ ಸ್ವಲ್ಪ ಹೊತ್ತು ಕಾಲುಗಳನ್ನೂ ಬಡಿಯುತ್ತಾ ಹೇಗೋ ಕೊನೆಗೆ ಹೂಗಳ ಸಮೀಪಕ್ಕೆ ಹೋಗಿ ಸೇರಿದನು. ಆದರೆ ಅಷ್ಟು ಹೊತ್ತಿಗೆ ಅವನ ಅಂಗಾಂಗಗಳೆಲ್ಲಾ ಶಿಥಿಲವಾಗಿದ್ದುವು. ಹೂವುಗಳನ್ನು ತೆಗೆದುಕೊಳ್ಳಲು ಕೈ ಎತ್ತುವುದಕ್ಕೂ ಅವನಿಗೆ ಶಕ್ತಿಯಿರಲಿಲ್ಲ. ಕೊನೆಗೆ ಅವುಗಳನ್ನು ಹಲ್ಲುಗಳಿಂದ ಕಚ್ಚಿಕೊಂಡು ಹಿಂತಿರುಗಿದನು. ಆದರೆ ಅವನು ಅಲ್ಲಿಂದ ದಡದ ಕಡೆಗೆ ನೋಡಿದಾಗ, ತಾನು ಸಾವಿರ ಮೈಲಿಗಳ ದೂರದಲ್ಲಿರುವೆನೋ ಎನಿಸಿತು. ದೇಹವು ಅತ್ಯಂತ ಬಳಲಿತ್ತು ಮತ್ತು ಪ್ರವಾಹವು ಅವನಿಗೆ ಪ್ರತಿಕೂಲವಾಗಿತ್ತು. ಅವನು ಧೈರ್ಯಗುಂದಿದನು. ಕೈಕಾಲುಗಳು ಜೋಲು ಬಿದ್ದವು. ಅಕ್ಕಪಕ್ಕದಲ್ಲಿ ಅವನಿರೆ ದೋಣಿ ಅಥವಾ ಹರಿಗೋಲು—ಯಾವುದೂ ಕಾಣಿಸಲಿಲ್ಲ. ಅಲ್ಲದೆ ಅವನ ಕೂಗು ದಡಕ್ಕೆ ಕೇಳಿಸುತ್ತಿರಲಿಲ್ಲ. ಇಲ್ಲಿಯೇ ಜಲಸಮಾಧಿಯಾಗುವೆನೆಂದು ತಿಳಿದನು. ಕ್ಷಣಕಾಲ ಪೂರ್ಣಾಳ ನೆನಪು ಬಂತು. ಅಯ್ಯೋ! ಅವಳು ತನ್ನ ದಾರಿ ಕಾಯುತ್ತಿರಬಹುದು. ಅವನ ಜೀವನಲೀಲೆಯೇ ಸಮಾಪ್ತಿಗೊಂಡಿತೆಂಬುದನ್ನು ಅವಳೇನು ಬಲ್ಲಳು? ವಸಂತಕುಮಾರನು ಮತ್ತೊಮ್ಮೆ ಕೈಕಾಲುಗಳನ್ನು ಬಡಿದನು; ಆದರೆ ಅವು ಅಲುಗಲಿಲ್ಲ. ಅವನ ಕಣ್ಣುಗಳಿಂದ ಧಾರಾಕಾರವಾಗಿ ಕಂಬನಿಗಳುರುಳಿದವು. ದಡದಲ್ಲಿದ್ದವರು ಅವನು ಮುಳುಗುತ್ತಿರುವುದನ್ನು ನೋಡಿದರು. ನಾಲ್ಕಾರು ಜನರು ಅವನನ್ನು ರಕ್ಷಿಸಲು ನೀರಿಗೆ ಧುಮುಕಿದರು. ಆದರೆ ಕ್ಷಣಮಾತ್ರದಲ್ಲಿಯೇ ವಸಂತಕುಮಾರನು ಅಲೆಗಳೊಡನೆ ಸೇರಿಹೋದನು. ಕಮಲಗಳು ಮಾತ್ರ ನೀರಿನ ಮೇಲೆ ತೇಲುತ್ತಿದ್ದವು. ಅವನ ಜೀವನ ಲೀಲೆಯು ಸಮಾಪ್ತಿಗೊಂಡ ಮೇಲೆ ಅವನ ಅತೃಪ್ತ ಅಭಿಲಾಷೆಯು ತನ್ನ ರಕ್ತರಂಜಿತ ಕಾಂತಿಯನ್ನು ತೋರಿಸುತ್ತಿದೆಯೋ ಎಂಬಂತೆ ಆ ಕಮಲಗಳು ಕಾಣುತ್ತಿದ್ದುವು.

ಬದರೀ ಪ್ರಸಾದರ ಸಜ್ಜನತೆಯು ಎಲ್ಲರಿಗೂ ಗೊತ್ತಿತ್ತು. ಆದರೆ ಅವರನ್ನು ವಂಚಿಸಿ ಅವರಿಂದ ಹಣ ಸಹಾಯ ಪಡೆಯಲು ಯಾರಿಗೂ ಸಾಧ್ಯವಿರಲಿಲ್ಲ. ಆದರೆ ಆವರು ಧಾರ್ಮಿಕ ವಿಷಯಗಳಲ್ಲಿ ಬಹಳ ಉದಾರಿಗಳು. ಸ್ವಾರ್ಥಿಗಳನ್ನು ಕಂಡರೆ ಅವರಿಗೆ ಆಗುತ್ತಿರಲಿಲ್ಲ. ಆದರೆ ದೀನ ದಲಿತರಿಗೆ ಸಹಾಯ ಮಾಡಲು ಎಂದೂ ಹಿಂದೆಗೆಯುತ್ತಿರಲಿಲ್ಲ. ಪೂರ್ಣಾ ಆದರೊ ಅವರ ನೆರೆಯವಳು ಹಾಗೂ ಬ್ರಾಹ್ಮಣಿಯಾಗಿದ್ದಳು. ಮೇಲಾಗಿ ಅವರ ಮಗಳ ಗೆಳತಿಯೂ ಹೌದು. ಇಂಥಾದ್ದರಲ್ಲಿ ಅವರೇಕೆ ಅವಳಿಗೆ ಸಹಾಯ ಮಾಡಬಾರದು? ಪೂರ್ಣಾಳಲ್ಲಿ ಕಡಿಮೆ ಬೆಲೆಯ ನಾಲ್ಕಾರು ಒಡವೆಗಳನ್ನು ಬಿಟ್ಟರೆ ಮತ್ತೇನೂ ಇರಲಿಲ್ಲ. ಷೋಡಶಿಯ ದಿನ ಅವಳು ತನ್ನ ಎಲ್ಲಾ ಆಭರಣಗಳನ್ನು ತಂದು ಲಾಲಾಜಿಯವರ ಮುಂದಿಟ್ಟು ಕಂಬನಿಗರೆಯುತ್ತಾ ನುಡಿದಳು-- "ಈಗ ನಾನು ಇವುಗಳನ್ನು ಇಟ್ಟುಕೊಂಡು ಏನು ಮಾಡಲಿ?"

ಬದರೀ ಪ್ರಸಾದರು ಕರುಣ ಕೋಮಲ ಧ್ವನಿಯಲ್ಲಿ ಹೇಳಿದರು— "ಮಗು, ನಾನು ಇವುಗಳನ್ನು ಇಟ್ಟುಕೊಂಡು ಏನು ಮಾಡಲಿ? ಧರ್ಮ ಅಥವಾ ಪುಣ್ಯ ಎಂದು ತಿಳಿದು ಈ ಕೆಲಸವನ್ನು ಮಾಡುತ್ತಿದ್ದೇನೆಂದು ನೀನು ತಿಳಿಯಬೇಡ. ಇದು ನನ್ನ ಕರ್ತವ್ಯ. ಈ ಒಡವೆಗಳು ನಿನ್ನಲ್ಲಿಯೇ ಇರಲಿ. ಒಂದಿಲ್ಲ ಒಂದು ದಿನ ಇವು ನಿನಗೆ ಬೇಕಾಗಬಹುದು. ನಾನು ಜೀವಂತನಾಗಿರುವ ತನಕ ನಿನ್ನನ್ನು ನನ್ನ ಮಗಳಂತೆ ನೋಡಿಕೊಳ್ಳುವೆನು. ನಿನಗೆ ಯಾವ ವಿಧವಾದ ಕಷ್ಟವೂ ಆಗಲಾರದು."

ಷೋಡಶಿ ಕರ್ಮವು ಬಹಳ ವೈಭವದಿಂದ ನಡೆಯಿತು. ನೂರಾರು ಜನ ಬ್ರಾಹ್ಮಣರಿಗೆ ಭೂರಿ ಭೋಜನವಾಯಿತು. ದಾನದಕ್ಷಿಣೆಗಳಲ್ಲಿಯೂ ಕೊರತೆಯಾಗಲಿಲ್ಲ.

ರಾತ್ರಿ ಹನ್ನೆರಡು ಗಂಟೆ. ಲಾಲಾ ಬದರೀಪ್ರಸಾದರು ಬ್ರಾಹ್ಮಣರಿಗೆಲ್ಲಾ ಭೋಜನ ಮಾಡಿಸಿ ಮನೆಗೆ ಬಂದರು. ಪ್ರೇಮಾ ಅವರ ಕೊಠಡಿಯಲ್ಲಿ ನಿಂತಿರುವುದನ್ನು ನೋಡಿದರು. ಹೇಳಿದರು— "ಮಗು, ಇಲ್ಲೇಕೆ ನಿಂತಿರುವೆ? ಬಹಳ ಹೊತ್ತಾಗಿದೆ, ಹೋಗಿ ಮಲಗು."

ಪ್ರೇಮಾ:— "ನೀವು ಇನ್ನೂ ಊಟ ಮಾಡಲಿಲ್ಲ."

ಬದರೀ:— "ರಾತ್ರಿ ಬಹಳ ಹೊತ್ತಾದ ಮೇಲೆ ನಾನು ಊಟ ಮಾಡುವುದಿಲ್ಲ. ತುಂಬಾ ಆಯಾಸವೂ ಆಗಿದೆ. ಮಲಗಿದ ತಕ್ಷಣ ನಿದ್ದೆ ಬರುವುದು."

ಹೀಗೆ ಹೇಳುತ್ತಾ ಅವರು ಮಂಚದ ಮೇಲೆ ಕುಳಿತರು. ಕ್ಷಣಕಾಲ ಸುಮ್ಮನಿದ್ದು ಹೇಳಿದರು— "ಮಗೂ, ಪೂರ್ಣಾಳ ತೌರುಮನೆಯವರು ಯಾರೂ ಇಲ್ಲವೇ ? ಅವಳಿಗೆ ದುಃಖವಾಗಬಹುದೆಂದು ನಾನು ಅವಳನ್ನು ಕೇಳಲಿಲ್ಲ."

ಪ್ರೇಮಾ:— "ಅವಳ ತೌರುಮನೆಯಲ್ಲಿ ಯಾರಿದ್ದಾರೆ? ತಂದೆ ತಾಯಿ ಮೊದಲೇ ಸತ್ತು ಹೋಗಿದ್ದರು. ಅವರ ಸೋದರಮಾವನೇ ಲಗ್ನ ಮಾಡಿದನು. ಮದುವೆಯಾದ ಮೇಲೆ ಈ ಕಡೆ ಯಾರೂ ಇಣಿಕಿಯೂ ನೋಡಿಲ್ಲ. ಅತ್ತೆಯ ಮನೆಯಲ್ಲಿ ಸಂಬಂಧಿಕರಾರೂ ಇಲ್ಲ. ವಸಂತನೇ ಅವಳ ಸರ್ವಸ್ವವಾಗಿದ್ದನು."

ಬದರೀಪ್ರಸಾದರು ಹೊದಿಕೆಯನ್ನು ಸರಿಪಡಿಸುತ್ತಾ ಹೇಳಿದರು— "ಪೂರ್ಣಾಳನ್ನು ನಮ್ಮ ಮನೆಯಲ್ಲಿಯೇ ಇಟ್ಟುಕೊಂಡರೆ ತಪ್ಪೇನು ? ಒಂಟಿಯಾಗಿ ಅವಳು ಹೇಗೆ ಇರುವಳು—ಎಂದು ನಾನು ಯೋಚಿಸುತ್ತಿದ್ದೇನೆ."

ಪ್ರೇಮಾ:— "ಹಾಗಾದರೆ ತುಂಬಾ ಸಂತೋಷ. ಆದರೆ ಅಮ್ಮ ಒಪ್ಪಬೇಕಲ್ಲ."

ಬದರೀ:— "ಯಾಕೆ ಒಪ್ಪುವುದಿಲ್ಲ ? ಪೂರ್ಣಾ ಒಪ್ಪುವಳು ತಾನೆ ?"

ಪ್ರೇಮಾ:— "ಕೇಳಿ ನೋಡುವೆನು. ಅವಳು ಒಪ್ಪದಿರಲಾರಳೆಂದು ನನಗೆನಿಸುವುದು."

ಬದರೀ:— "ಅವಳು ತನ್ನ ಮನೆಯಲ್ಲಿಯೇ ಇದ್ದರೆ ಹತ್ತಿಪ್ಪತ್ತು ರೂಪಾಯಿಗಳಲ್ಲಿ ಅವಳ ಜೀವನ ನಡೆಯುವುದೆ ?"

ಪ್ರೇಮಾ ಒದ್ದೆಯಾದ ಕಣ್ಣುಗಳಿಂದ ತಂದೆಯನ್ನು ನೋಡುತ್ತಾ ಹೇಳಿದಳು— "ಬಹಳ ಸುಖವಾಗಿ ನಡೆಯುವುದು. ವಸಂತಕುಮಾರನಿಗೆ ತಿಂಗಳಿಗೆ ಐವತ್ತು ರೂಪಾಯಿ ವೇತನ ಸಿಕ್ಕುತ್ತಿತ್ತು."

ಬದರೀಪ್ರಸಾದರು ವ್ಯಾಕುಲತೆಯಿಂದ ನುಡಿದರು— "ನನಗೆ ಇಪ್ಪತ್ತು, ಇಪ್ಪತ್ತೈದು ಮೂವ್ವತ್ತು—ಎಲ್ಲಾ ಒಂದೇ. ಆದರೆ ನನ್ನ ಜೀವನ ಏನು ಶಾಶ್ವತ ? ನಾನು ಸತ್ತೆನೆಂದರೆ, ಕಮಲಾ ಒಂದು ಕಿಲುಬು ಕಾಸನ್ನೂ ಕೊಡ ಲಾರ. ಆದ್ದರಿಂದ ಅವಳಿಗೆ ಯಾವುದಾದರೊಂದು ಶಾಶ್ವತ ಮಾರ್ಗವನ್ನು ಕಲ್ಪಿಸಬೇಕೆಂದಿದ್ದೇನೆ. ಈಗ ನನ್ನ ಕೈಯಲ್ಲಿ ನಗದು ಹಣವಿಲ್ಲ. ಇದ್ದಿದ್ದರೆ ನಾಲ್ಕು ಸಾವಿರ ರೂಪಾಯಿಗಳನ್ನು ಅವಳ ಹೆಸರಿನಲ್ಲಿ ಬ್ಯಾಂಕಿನಲ್ಲಿಡುತ್ತಿದ್ದೆ. ಅದರ ಬಡ್ಡಿಯಿಂದ ಅವಳ ಜೀವನ ನಡೆದು ಹೋಗುತ್ತಿತ್ತು. ಅಸಲಿನಿಂದ ಅವಳಿಗೇನೂ ಕೊಡಕೂಡದೆಂದು ನಿರ್ಬಂಧಪಡಿಸುತ್ತಿದ್ದೆ."

ಆ ಸಮಯಕ್ಕೆ ಸರಿಯಾಗಿ ಕಮಲಾಪ್ರಸಾದನು ಕಣ್ಣುಜ್ಜಿಕೊಳ್ಳುತ್ತಾ ಬಂದು ತಂದೆಗೆ ಹೇಳಿದನು— "ಅಣ್ಣಾ, ನೀನಿನ್ನೂ ಮಲಗಿಲ್ಲವೆ ? ಬಹಳ ಸೆಕೆಯಾಗುತ್ತಿದೆ. ಬೀಸಣಿಗೆ ತರಲೆ ? ರಾತ್ರಿ ಬಹಳ ವೇಳೆಯಾಯಿತು."

ಬದರೀ:— "ಇಲ್ಲ, ಶಕೆಯೇನೂ ಇಲ್ಲ. ಪ್ರೇಮಾಳೊಡನೆ ಏನೋ ಮಾತನಾಡುತ್ತಿದ್ದೆ. ನಿನ್ನನ್ನೂ ಸಲಹೆ ಕೇಳಬೇಕೆಂದಿದ್ದೆ. ನೀನು ಬಂದುದು ಒಳ್ಳೆಯದೇ ಆಯಿತು. ಪೂರ್ಣಾಳನ್ನು ನಮ್ಮ ಮನೆಗೇ ಕರೆ ತಂದರೆ ತೊಂದರೆ ಯೇನು ? ಎಂದು ಯೋಚಿಸುತ್ತಿದ್ದೆ."

ಕಮಲಾಪ್ರಸಾದನು ಕಣ್ಣರಳಿಸುತ್ತಾ ಹೇಳಿದನು— "ಇಲ್ಲಿಗೆ ! ಅಮ್ಮ ಎಂದೆಂದಿಗೂ ಒಪ್ಪುವುದಿಲ್ಲ."

ಬದರೀ:— "ನಿಮ್ಮ ಅಮ್ಮನ ವಿಷಯ ಹಾಗಿರಲಿ, ಇದರಿಂದ ನಿನ ಗೇನೂ ತೊಂದರೆಯಿಲ್ಲ ತಾನೆ ? ನಾನು ನಿನ್ನನ್ನು ಈ ವಿಷಯವಾಗಿ ಕೇಳ ಬೇಕೆಂದಿದ್ದೆ."

ಕಮಲಾಪ್ರಸಾದನು ದೃಢಪೂರ್ವಕವಾಗಿ ಹೇಳಿದನು— "ನಾನು ಈ ವಿಷಯವಾಗಿ ಯಾವ ಸಲಹೆಯನ್ನೂ ಕೊಡುವುದಿಲ್ಲ. ಪ್ರಪಂಚದಲ್ಲಿ ಎಲ್ಲಾ ರೀತಿಯ ಜನರೂ ಇದ್ದಾರೆ. ಯಾರು ಏನು ತಿಳಿದುಕೊಳ್ಳುವರೋ ನಾನರಿಯೆ. ಅಣ್ಣಾ, ನೀನು ಈ ವಿಷಯವನ್ನು ಚೆನ್ನಾಗಿ ಯೋಚಿಸು."

ಬದರೀ:— "ಅವಳ ಜೀವನ ನಿರ್ವಾಹಕ್ಕಾಗಿ ಏನಾದರೊಂದು ಏರ್ಪಾಡು ಮಾಡಲೇ ಬೇಕು."

ಕಮಲಾ:— "ಅದಕ್ಕೆ ನಾವೇನು ಮಾಡಬಲ್ಲೆವು ?"

ಬದರೀ:— "ಮತ್ತಾರು ಮಾಡುವರು ?"

ಕಮಲಾ:— "ನಗರದಲ್ಲಿರುವವರು ನಾವೇ ಅಲ್ಲ; ಬೇಕಾದಷ್ಟು ಐಶ್ವರ್ಯವಂತರಿದ್ದಾರೆ. ನಮ್ಮ ಯೋಗ್ಯತೆಗೆ ತಕ್ಕಂತೆ ನಾವೂ ಕೈಲಾದಷ್ಟು ಸಹಾಯ ಮಾಡೋಣ."

ಬದರೀಪ್ರಸಾದರು ಮಗನನ್ನು ಓರೆಗಣ್ಣಿನಿಂದ ನೋಡುತ್ತ ಹೇಳಿದರು— "ಹಾಗಾದರೆ ಚಂದಾಪಟ್ಟಿಯನ್ನೇಕೆ ತಯಾರಿಸಬಾರದು ? ಚೆನ್ನಾಯ್ತು, ಹೋಗು. ಅಲೆದಲೆದು ನಿಧಿ ಕೂಡಿಸು."

ಕಮಲಾ:— "ಚಂದಾ ಎತ್ತಲು ನಾನೇಕೆ ಹೋಗಬೇಕು ?"

ಬದರೀ:— "ಹಾಗಾದರೆ ಮಾಡುವವರಾರು ?"

ಕಮಲಾಪ್ರಸಾದನು ಇದಕ್ಕೆ ಯಾವ ಉತ್ತರವನ್ನೂ ಕೊಡಲಿಲ್ಲ. ಸ್ವಲ್ಪ ಹೊತ್ತಿನ ನಂತರ ಹೇಳಿದನು— "ಅಣ್ಣಾ, ಹಾಗಾದರೆ ನೀನಾವ ನಿರ್ಣಯ ಮಾಡಿದ್ದೀಯೆ ?"

ಬದರೀ:— "ನಾನೇನು ನಿಶ್ಚಯ ಮಾಡುವುದು ! ನನ್ನ ನಿರ್ಣಯಕ್ಕೆ ಬೆಲೆ ಕೊಡುವವರಾರು ? ನಿನ್ನ ನಿರ್ಣಯವೇ ನನ್ನ ನಿರ್ಣಯ. ನಾನು ಇಂದೇನಾದರೂ ಏರ್ಪಾಡು ಮಾಡುವುದು; ನಾಳೆ ನಾನು ಕಣ್ಮುಚ್ಚಿದ ಮೇಲೆ ನೀನು ಅದನ್ನು ತಲೆ ಕೆಳಕು ಮಾಡಿದರೆ ಸುಮ್ಮನೆ ಕೆಟ್ಟ ಹೆಸರು ಹೊರಬೇಕಾಗುವುದು."

ಕಮಲಾಪ್ರಸಾದನು ದುಃಖಿತನಾಗಿ ಹೇಳಿದನು— "ಅಣ್ಣಾ, ನೀನು ನನ್ನನ್ನು ಇಷ್ಟು ನೀಚನೆಂದು ತಿಳಿದಿರುವೆ. ನನಗೆ ಇದು ಗೊತ್ತಿರಲಿಲ್ಲ."

ಬದರೀಪ್ರಸಾದರು ಮಗನನ್ನು ಬಹಳ ಪ್ರೀತಿಸುತ್ತಿದ್ದರು. ಮಗನ ಮನಸ್ಸಿಗೆ ನೋವಾಯಿತೆಂದು ತಿಳಿದ ಕೂಡಲೆ ಮಾತು ಬದಲಿಸಿ ಹೇಳಿದರು— "ಎಲ್ಲಾದರೂ ಉಂಟೆ ? ನಾನು ನಿನ್ನನ್ನು ನೀಚನೆಂದು ತಿಳಿಯುವೆನೆ ? ನಾವು ಇಂದು ಮಾಡಬಹುದಾದ ನಿರ್ಣಯವನ್ನು ಪರಿಸ್ಥಿತಿಯ ಏರು-ಪೇರಿಗೆ ಸಿಕ್ಕಿ ನಾಳೆ ಮಾಡಲಾಗದೆ ಹೋಗಬಹುದು."

ಕಮಲಾ:— "ದೇವರು ನನ್ನನ್ನು ಈ ವಿಪತ್ತಿಗೆ ಸಿಕ್ಕಿಸದಿರಲಿ ! ಈ ವಿಷಯವಾಗಿ ನಾನು ಹೇಳುವುದಿಷ್ಟೆ. ನೀನು ಮಾಡುವ ಕೆಲಸಕ್ಕೆ ಕಮಲಾ

ಪ್ರಸಾದನು ಎಂದಿಗೂ ಅಡ್ಡ ಬರಲಾರನು. ನೀನು ಮನೆಯ ಯಜಮಾನ; ನೀನೇ ಈ ಸಂಪತ್ತನ್ನು ಗಳಿಸಿದ್ದೀಯೆ. ಇದರ ಮೇಲೆ ನಿನ್ನ ಪೂರ್ಣ ಅಧಿಕಾರವಿದೆ. ನಿನ್ನ ನಿರ್ಧಾರಕ್ಕೆ ಮುಂಚೆ ನಾನೇನಾದರೂ ಸಲಹೆ ಕೊಡಬಲ್ಲೆನೇ ಹೊರತು, ಒಂದು ಸಾರಿ ನೀನು ನಿರ್ಣಯ ಮಾಡಿದೆಯೆಂದರೆ, ನಾನು ಅದಕ್ಕೆ ವಿರುದ್ಧವಾಗಿ ನುಡಿಯುವುದಿಲ್ಲ."

ಬದರೀ:—"ಹಾಗಾದರೆ ನಾಳೆ ಪೂರ್ಣಾಳ ಹೆಸರಿನಲ್ಲಿ ಬ್ಯಾಂಕಿನಲ್ಲಿ ನಾಲ್ಕು ಸಾವಿರ ರೂಪಾಯಿ ಜಮಾ ಮಾಡು. ಅವಳು ಮೂಲ ಧನದಿಂದ ತನ್ನ ಖರ್ಚಿಗೆ ಉಪಯೋಗಿಸಿಕೊಳ್ಳದಂತೆ ಏರ್ಪಡಿಸು. ಅವಳ ಮರಣಾನಂತರ ನಮ್ಮ ಹಣ ನಮ್ಮ ಕೈಗೇ ಬರುವುದು."

ಕಮಲಾಪ್ರಸಾದನಿಗೆ ತಂದೆಯ ಮಾತಿನಿಂದ ಆಘಾತವಾದಂತಾಯಿತು. ಹೇಳಿದನು— "ಇನ್ನೂ ಚನ್ನಾಗಿ ಯೋಚಿಸು."

ಬದರೀಪ್ರಸಾದರು ದೃಢವಾಣಿಯಿಂದ ನುಡಿದರು— "ಚೆನ್ನಾಗಿ ಯೋಚಿಸಿಯೇ ಇದ್ದೇನೆ. ಅವಳು ಇದನ್ನು ಸ್ವೀಕರಿಸುವಳೋ ಇಲ್ಲವೋ ಎಂಬುದನ್ನು ನೋಡಬೇಕಾಗಿದೆ."

ಕಮಲಾ:— " ಅವಳು ಇದನ್ನು ಸ್ವೀಕರಿಸಲಾರಳೆಂದು ನಿಮ್ಮ ಸಂದೇಹವೇ ?"

ಬದರೀಪ್ರಸಾದರು ತಿರಸ್ಕಾರದಿಂದ ನುಡಿದರು— "ಎಲ್ಲರನ್ನೂ ಸ್ವಾರ್ಥಿಗಳೆಂದು ತಿಳಿಯುವುದು ನಿನ್ನಲ್ಲಿರುವ ಒಂದು ದೊಡ್ಡ ಕೆಟ್ಟ ಗುಣ. ಯಾವ ಸತ್ಪುರುಷನೂ ಇನ್ನೊಬ್ಬರ ಹಂಗಿಗೊಳಗಾಗಲು ಇಷ್ಟಪಡುವುದಿಲ್ಲ. ಮಾನವ ಸ್ವಭಾವವೇ ಹೀಗೆ. ಮರ್ಯಾದೆಗೆಟ್ಟವರ ಮಾತು ಬೇರೆ. ಆದರೆ ಯಾರಲ್ಲಿ ಆತ್ಮಗೌರವವು ತಿಲಮಾತ್ರವಿದೆಯೋ ಅವನು ಪರರಿಗೆ ಋಣಿಯಾಗಿರಲು ಒಪ್ಪುವುದಿಲ್ಲ. ನನಗೆ ಅನುಮಾನ ಮಾತ್ರವಲ್ಲ, ಪೂರ್ಣಾ ಇದಕ್ಕೆ ಒಪ್ಪಲಾರಳೆಂಬ ದೃಢನಂಬಿಕೆಯೂ ನನಗಿದೆ. ಅವಳು ಕೂಲಿಯಾದರೂ ಮಾಡಿಯಾಳು; ಆದರೆ ಸಂಪೂರ್ಣವಾಗಿ ಶಕ್ತಿಗುಂದುವ ತನಕ ನಮ್ಮ ಸಹಾಯವನ್ನು ಎಂದಿಗೂ ಸ್ವೀಕರಿಸಳು."

ಪ್ರೇಮಾ ಬಹಳ ಉತ್ಸಾಹದಿಂದ ಹೇಳಿದಳು— " ನನಗೂ ಇದೇ ಸಂದೇಹ. ಒಪ್ಪಿದರೂ ಕೂಡ ಬಹಳ ಕಷ್ಟದಿಂದಲೇ ಒಪ್ಪಬಹುದು."

ಬದರೀ:— "ನೀನು ನಾಳೆಯೇ ಅವಳೊಡನೆ ಈ ವಿಷಯವನ್ನು ಪ್ರಸ್ತಾಪಿಸು."

ಪ್ರೇಮಾ:— "ಇಲ್ಲ ಅಣ್ಣಾ, ಇದು ನನ್ನಿಂದಾಗದು. ಅವಳು ಮತ್ತು ನಾನೂ ಇದುವರೆಗೂ ಅಕ್ಕತಂಗಿಯರಂತಿದ್ದೇವೆ; ಈಗ ಈ ರೀತಿಯ ಮಾತ ನಾಡಲು ನನ್ನಿಂದ ಸಾಧ್ಯವಿಲ್ಲ. ನನಗೆ ಬಹಳ ದುಃಖವಾಗುವುದು."

ಬದರೀ:— "ಹಾಗಾದರೆ ನಾನೇ ಎಲ್ಲವನ್ನೂ ಸರಿಪಡಿಸುವೆನು. ನಾಳೆ ಅವಕಾಶ ಸಿಕ್ಕಿದರೆ, ನಿಮ್ಮ ತಾಯಿಯೊಡನೆಯೂ ಮಾತನಾಡುವೆನು. ಪೂರ್ಣಾ ಇಲ್ಲಿರಲು ಪ್ರಾಯಶಃ ಅವಳೂ ಒಪ್ಪಬಹುದು."

ಕಮಲಾಪ್ರಸಾದನು ಗೃಹಕೃತ್ಯ ವಿಷಯಗಳಲ್ಲಿ ತಾನು ಅದ್ವಿತೀಯನೆಂದು ತಿಳಿದಿದ್ದನು. ಬುದ್ಧಿ ಕುಶಲತೆಯಲ್ಲಿ ಅವನು ತನ್ನನ್ನು ಯಾವ ಪಂಡಿತನಿಗಿಂತಲೂ ಕಡಿಮೆಯೆಂದು ತಿಳಿದಿರಲಿಲ್ಲ. ಆದರೆ ಗೃಹಕೃತ್ಯಗಳಲ್ಲಿನ ಅವನ ವ್ಯವಹಾರವನ್ನು ಎಲ್ಲರೂ ಒಪ್ಪುತ್ತಿದ್ದರು. ನಿತ್ಯವೂ ಸಿನೆಮಾ ನೋಡುತ್ತಿದ್ದನು; ಆದರೆ ತನ್ನ ಕಿಸೆಯಿಂದ ಒಂದು ಬಿಡಿ ಕಾಸನ್ನೂ ಖರ್ಚು ಮಾಡುತ್ತಿರಲಿಲ್ಲ. ಸಿನೆಮಾ ಮ್ಯಾನೇಜರ ಸ್ನೇಹ ಮಾಡಿಕೊಂಡಿದ್ದನು. ಅವರ ಮನೆಯಲಿಯೇ ಕೆಲವು ವೇಳೆ ಔತಣವೂ ನಡೆಯುತ್ತಿತ್ತು. ರೂಪಾಯಿ ಕೆಲಸವನ್ನು ಎಂಟಾಣೆಯಲ್ಲಿಯೇ ನಾಜೂಕಾಗಿ ಮಾಡುವುದರಲ್ಲಿ ಅವನು ಗಟ್ಟಿಗನಾಗಿದ್ದನು. ಆಗಾಗ್ಗೆ ಮಗನ ಈ ಅಲ್ಪ ಕಾರ್ಯಗಳ ವಿಷಯವು ಲಾಲಾ ಬದರೀಪ್ರಸಾದರ ಕಿವಿಗೂ ಬೀಳುತ್ತಿತ್ತು. ವೃದ್ಧ ಲಾಲಾಜಿಯವರು ಮಗನ ಈ ಕುತ್ಸಿತ ಮನೋವೃತ್ತಿಯನ್ನು ನೋಡಿ ಆಗಾಗ್ಗೆ ಅವನನ್ನು ಬಯ್ಯುತ್ತಿದ್ದರು. ತಂದೆಯು ಈಗ ತನ್ನ ಯಾವ ಅಡ್ಡಿಯನ್ನೂ ಲಕ್ಷಿಸಲಾರರೆಂದು ಚೆನ್ನಾಗಿ ತಿಳಿದನು; ಅಡ್ಡಿಪಡಿಸಿದರೂ ಕೂಡ ಅದರ ಪರಿಣಾಮವು ತನಗೆ ವಿರೋಧವಾಗಬಹುದೆಂಬ ಭಯವೂ ಉಂಟಾಯಿತು. ಆದ್ದರಿಂದ ಅವನು ಈಗ ಕೂಟ ನೀತಿಯಿಂದಲೇ ಕಾರ್ಯರಂಗಕ್ಕಿಳಿಯಬೇಕೆಂದು ನಿರ್ಧರಿಸಿದನು.

ಮರುದಿನ ಪ್ರಾತಃಕಾಲದಲ್ಲಿಯೇ ಅವನು ಪೂರ್ಣಾಳ ಮನೆಗೆ ಹೋದನು. ಪೂರ್ಣಾ ಮೊದಲು ಅವನ ಎದುರಿಗೆ ಬುರುಕೆ ಹಾಕಿಕೊಂಡು ಮಾತನಾಡುತ್ತಿದ್ದಳು. ಆದರೆ ಈಗ ನವವಿವಾಹಿತ ತರುಣಿಯಂತೆ ಕುಳಿತು ಕೊಳ್ಳುವುದರಿಂದ ಅವಳ ಕೆಲಸವು ನಡೆಯುವಂತಿರಲಿಲ್ಲ. ಕಮಲಾಪ್ರಸಾದ

ನನ್ನ ಒಳಗೆ ಬರಮಾಡಿಕೊಂಡಳು. ಅಂಗಳದಲ್ಲಿ ಒಂದು ಮಂಚವಿತ್ತು. ಕಮಲಾಪ್ರಸಾದನು ಅದರ ಮೇಲೆ ಕುಳಿತನು. ಕ್ಷಣಕಾಲದ ನಂತರ ಪೂರ್ಣಾ ಅವನ ಎದುರಿಗೆ ಬಂದು ನಿಂತಳು. ಪೂರ್ಣಾಳ ಮುಖವು ಬುರುಕೆಯಿಂದ ಮುಚ್ಚಿತ್ತು. ಆದರೆ ಅಶ್ರುಪೂರಿತವಾದ ಅವಳೆರಡು ಕಣ್ಣುಗಳು ಕೃತಜ್ಞತೆ ಮತ್ತು ವಿನಯವನ್ನು ಪ್ರಕಟಿಸುತ್ತಾ ನೆಲದ ಕಡೆಗೆ ನೋಡುತ್ತಿದ್ದವು. ಕಮಲಾ ಪ್ರಸಾದನು ಅವಳನ್ನು ನೋಡಿ ಅವಾಕ್ಕಾದನು. ಅವಳನ್ನು ಇಲ್ಲಿಂದ ಬೇರೆ ಎಲ್ಲಿಗಾದರೂ ಸಾಗಿಸಬೇಕೆಂಬ ಅಭಿಪ್ರಾಯದಿಂದ ಅವನು ಬಂದಿದ್ದನು. ತೌರುಮನೆಗೆ ಹೋಗುವಂತೆ ಅವಳನ್ನು ಒಪ್ಪಿಸಬೇಕೆಂದು ನಿರ್ಧರಿಸಿಕೊಂಡು ಬಂದಿದ್ದನು. ಈ ನಿರಾಶ್ರಿತ ಅಬಲೆಯ ಭವಿಷ್ಯ ಜೀವನದ ವಿಷಯವಾಗಿ ಅವನಿಗೆ ಲೇಶವಾದರೂ ಚಿಂತೆಯಿರಲಿಲ್ಲ. ಅವಳ ಜೀವನ ನಡೆಯುವ ಬಗೆ ಹೇಗೆ? ಅವಳ ರಕ್ಷಣೆಯನ್ನು ಮಾಡುವವರಾರು ? ಈ ವಿಷಯವಾಗಿ ಅವನಿಗೆ ಕಿಂಚಿತ್ತಾದರೂ ಯೋಚನೆಯಿರಲಿಲ್ಲ. ಅವನು ಈ ಸಮಯದಲ್ಲಿ ಅವಳನ್ನು ಹೇಗಾದರೂ ಇಲ್ಲಿಂದ ಸಾಗಿಸಿ ತನ್ನ ಹಣವನ್ನು ಉಳಿಸಿಕೊಳ್ಳಬೇಕೆಂದು ಹವಣಿಸುತ್ತಿದ್ದನು. ಆದರೆ ವಿಧವೆಯ ಸರಳ, ನಿಷ್ಕಳಂಕ, ದೀನ ಮೂರ್ತಿಯನ್ನು ನೋಡಿ ಅವನಿಗೆ ತನ್ನ ಕಪಟ ಬುದ್ಧಿಗಾಗಿ ನಾಚಿಕೆಯಾಯಿತು. ಯಾವುದಾದರೂ ಕೋಮಲ ಪುಷ್ಪವನ್ನು ಕಿತ್ತು ನದಿಗೆ ಎಸೆಯುವ ಹೃದಯಹೀನನು ಯಾವನಿದ್ದಾನೆ ? ಅವನಿಗೆ ಜೀವನದಲ್ಲಿ ಮೊಟ್ಟಮೊದಲು ಸೌಂದರ್ಯದಕಡೆ ಆಕರ್ಷಣೆಯುಂಟಾಯಿತು. ಕತ್ತಲೆಯ ಮನೆಗೆ ದೀಪವನ್ನಿಟ್ಟಂತಾಯಿತು. ಹೇಳಿದನು— "ನೀನು ಇಲ್ಲಿ ಒಬ್ಬಳೇ ಇರುವುದಾದರೆ ಬಹಳ ಕಷ್ಟವಾಗುವುದು. ಅತ್ತ ಪ್ರೇಮಾ ಕೂಡ ಒಂಟಿಯಾಗಿರಲು ಬೇಸರಪಡುತ್ತಾಳೆ. ಆ ನಮ್ಮ ಮನೆಗೆ ನೀನೂ ಏಕೆ ಬಂದಿರಬಾರದು ! ಇದರಲ್ಲಿ ನಿನಗೇನಾದರೂ ತೊಂದರೆಯಿದೆಯೆ ?"

ಪೂರ್ಣಾ ತಲೆಯನ್ನು ಬಗ್ಗಿಸಿಕೊಂಡು ಒಂದು ಕ್ಷಣಕಾಲ ಯೋಚಿಸಿದ ನಂತರ ಹೇಳಿದಳು— "ಇದರಲ್ಲಿ ತೊಂದರೆಯೇನೂ ಇಲ್ಲ. ಇಲ್ಲಿಯೂ ನಿಮ್ಮಗಳನ್ನು ನಂಬಿ ಕಾಲಯಾಪನೆ ಮಾಡುತ್ತಿದ್ದೇನೆ."

ಕಮಲಾ:— "ಹಾಗಾದರೆ ಇಂದೇ ಹೊರಡು. ತಂದೆಯವರ ಇಷ್ಟವೂ ಇದೇ ಆಗಿದೆ. ನಾನು ಮನೆಗೆ ಹೋಗಿ ಸಾಮಾನು ಸಾಗಿಸಲು ಆಳುಗಳನ್ನು

ಕಳಿಸುವೆನು."

ಪೂರ್ಣಾ:— "ಇಷ್ಟು ಆತುರವೇಕೆ? ನನಗೆ ಸ್ವಲ್ಪ ಯೋಚನೆ ಮಾಡಲು ಅವಕಾಶ ಕೊಡಿರಿ."

ಕಮಲಾ:— "ಇದರಲ್ಲಿ ಯೋಚಿಸಬೇಕಾದ ವಿಷಯವೇನೂ ಇಲ್ಲ. ಒಂಟಿಯಾಗಿ ಇಲ್ಲಿ ಹೇಗೆ ಬಿದ್ದುಕೊಂಡಿರುವೆ?"

ಪೂರ್ಣಾ:— "ಒಂಟಿಯಾಗಿ ಇಲ್ಲ. ಮನೆಗೆಲಸದವಳೂ ಇಲ್ಲಿಯೇ ಮಲಗುತ್ತಾಳೆ."

ಕಮಲಾ:— "ಚೆನ್ನಾಯ್ತು! ಆ ಭಾಗ್ಯಮ್ಮ ತಾನೆ? ಮುದುಕಿಯಾದರೂ ನಿಷ್ಕಪಟಿ; ಆದರೆ ಸ್ವಲ್ಪ ಅವಿಧೇಯಳು. ನಮ್ಮ ಮನೆಗೆ ಬಂದು ಇರುವುದರಲ್ಲಿ ನಿನಗೇನು ತೊಂದರೆ?"

ಪೂರ್ಣಾ:— "ಏನೂ ಸಂಕೋಚವಿಲ್ಲ."

ಕಮಲಾ:— "ಹಾಗಾದರೆ ನಾನು ಹೋಗಿ ಆಳುಗಳನ್ನು ಕಳುಹಿಸುವೆನು."

ಪೂರ್ಣಾ:— "ಕಳುಹಿಸಬಹುದು, ಆದರೆ ಈಗ ಇಷ್ಟು ಆತುರವೇಕೆ?"

ಕಮಲಾ:— "ಪೂರ್ಣಾ, ನೀನು ವ್ಯರ್ಥವಾಗಿ ಇಷ್ಟು ಸಂಕೋಚಪಡುತ್ತಿರುವೆ! ನೀನು ನಮ್ಮ ಮನೆಗೆ ಬರುವುದರಿಂದ ನಮ್ಮ ಮನೆಯವರು ಬೇಸರಪಡುವರೆಂದು ತಿಳಿದಿರುವೆಯಾ?"

ಕಮಲಾಪ್ರಸಾದನ ಸಂಶಯವು ಸರಿಯಾಗಿತ್ತು. ವಾಸ್ತವವಾಗಿ ಪೂರ್ಣಾಳಿಗೆ ಇದ್ದ ತೊಂದರೆ ಇದೊಂದೆ; ಆದರೆ ಅವಳು ಸಂಕೋಚದಿಂದ ಅದನ್ನು ವ್ಯಕ್ತಪಡಿಸಲಾರದವಳಾಗಿದ್ದಳು. ಕಮಲಾಪ್ರಸಾದನು ತನ್ನ ಮನೋಭಾವನೆಯನ್ನರಿತನೆಂದು ಅವಳು ತಿಳಿದಳು. ಇದರಿಂದ ಅವಳಿಗೆ ನಾಚಿಕೆಯೂ ಆಯಿತು. ಕಮಲಾಪ್ರಸಾದನಂತಹ ದೊಡ್ಡ ಮನುಷ್ಯನ ಮನೆಯವರ ವಿಷಯವಾಗಿ ಅವಳು ಇಂತಹ ದುರಾಲೋಚನೆಯನ್ನು ಮಾಡಬಾರದಾಗಿತ್ತು; ಆದರೆ ಕಮಲಾ ಪ್ರಸಾದನು ಅವಳ ಸಂಕೋಚವನ್ನು ಶೀಘ್ರವಾಗಿಯೇ ನಿವಾರಿಸಿದನು. ಹೇಳಿದನು—

"ಪೂರ್ಣಾ, ನಿನ್ನ ಅನುಮಾನವು ಸಹಜವಾದುದೇ ಸರಿ. ಆದರೆ ನೀನೇ ಯೋಚಿಸು, ನನ್ನ ಮನೆಯಲ್ಲಿ ನಿನ್ನನ್ನು ವಿರೋಧಿಸುವವರು ಯಾರಿದ್ದಾರೆ?

ತಂದೆಯವರಿಗೆ ನೀನು ನಮ್ಮ ಮನೆಗೆ ಬಂದಿರುವುದು ತುಂಬಾ ಇಷ್ಟ. ನನ್ನ ವಿಷಯ ನಿನಗೆ ಗೊತ್ತೇ ಇದೆ. ಪಂಡಿತ ವಸಂತಕುಮಾರನಿಗೂ ನನಗೂ ಇದ ಮೈತ್ರಿಯ ವಿಷಯವನ್ನು ನೀನೂ ಚೆನ್ನಾಗಿ ಬಲ್ಲೆ. ಪ್ರೇಮಾಳಂತೂ ನಿನ್ನ ಗೆಳತಿಯೇ ಆಗಿದ್ದಾಳೆ. ತಾಯಿಗೆ ನಿನ್ನಲ್ಲಿ ಎಷ್ಟು ಪ್ರೇಮವಿದೆಯೆಂಬುದು ನಿನಗೆ ತಿಳಿಯದ ವಿಷಯವಲ್ಲ; ಉಳಿದವಳು ಸುಮಿತ್ರಾ, ಅವಳಿಗೆ ಸ್ವಲ್ಪ ಕಸಿ ವಿಸಿಯಾಗಬಹುದು; ನಿನ್ನಲ್ಲಿ ನಾನು ಯಾವ ವಿಷಯವನ್ನೂ ಮರೆಮಾಚು ತ್ತಿಲ್ಲ. ಆದರೆ ಅವಳ ಮಾತನ್ನು ಲಕ್ಷಿಸುವವರು ಯಾರು? ಅವಳನ್ನು ಸಂತೋಷಪಡಿಸುವ ಒಂದು ಗುಟ್ಟನ್ನೂ ನಿನಗೆ ತಿಳಿಸುತ್ತೇನೆ. ಆಗಾಗ್ಗೆ ನೀನು ಅವಳಿಗೆ ಈ ಮಂತ್ರ ಹಾಕಿದರೆ, ಅವಳು ಎಂದೆಂದಿಗೂ ನಿನಗೆ ಕೆಡುಕೆಣಿಸಲಾ ರಳು. ಅವಳ ಸೌಂದರ್ಯವನ್ನು ಹೊಗಳುತ್ತಿರುವುದೇ ಈ ಗುಟ್ಟು. ನೀನು ಅವಳನ್ನು ರಂಭೆ ಅಥವಾ ಊರ್ವಶಿಯೆಂದು ಕರೆದರೆ, ಅವಳು ಅದನ್ನು ವ್ಯಂಗ್ಯ ವೆಂದು ಎಂದೂ ಭಾವಿಸುವುದಿಲ್ಲ. ಹೆಚ್ಚು ಹೆಚ್ಚಾಗಿ ಶ್ಲಾಘಿಸಿದಂತೆಲ್ಲಾ ಅವಳು ಅದನ್ನು ಯಥಾರ್ಥವೆಂದು ತಿಳಿಯುವಳು. ಈ ಮಂತ್ರಶಕ್ತಿಯಿಂದಲೇ ನಾನು ಅವಳನ್ನು ಕುಣಿಸುತ್ತಿರುತ್ತೇನೆ. ಈ ಮಂತ್ರವನ್ನೇ ನಿನಗೂ ಈಗ ತಿಳಿಸಿದ್ದೇನೆ."

ಪೂರ್ಣಾಗೆ ನಗೆ ಬಂದಿತು. ಹೇಳಿದಳು— "ತಾವಾದರೋ ಆಕೆಯನ್ನು ಅಣಕಿಸುತ್ತಿರುವಿರಿ. ಇಷ್ಟು ತಿಳುವಳಿಕೆಯೂ ಇಲ್ಲದವರು ಯಾರಿದ್ದಾರೆ?"

ಕಮಲಾ:— "ಇಷ್ಟು ತಿಳುವಳಿಕೆಯನ್ನು ನೀನು ಸಾಧಾರಣ ವಿಷಯ ವೆಂದು ತಿಳಿದಿರುವೆ. ಇದು ಸಾಮಾನ್ಯ ವಿಷಯವಲ್ಲ. ಇದನ್ನು ಕೇಳಿ ನಿನಗೆ ಆಶ್ಚರ್ಯವಾಗಬಹುದು. ಆದರೆ ನಾವು ನಮ್ಮ ಸ್ತುತಿಪಾಠವನ್ನು ಕೇಳಿ ವಿವೇಕಶೂನ್ಯರಾಗುವಷ್ಟು ಮದೋನ್ಮತ್ತರಾಗುತ್ತೇವೆ. ಶ್ರೇಷ್ಠನಾದ ಮಹಾ ತ್ಮನೂ ಕೂಡ ತನ್ನ ಗುಣಗಾನವನ್ನು ಕೇಳಿ ಉಬ್ಬಿ ಹೋಗುತ್ತಾನೆ. ಆದರೆ ಸ್ತುತಿಪಾಠಕನ ಮಾತುಗಳಲ್ಲಿ ಭಕ್ತಿಭಾವನೆಯು ಇರಬೇಕಾದುದು ಅಗತ್ಯ. ಹೀಗಿಲ್ಲದಿದ್ದರೆ ನಮ್ಮ ರಾಜ-ಮಹಾರಾಜರುಗಳು ಕವಿಪುಂಗವರ ಸ್ತೋತ್ರಕ್ಕೆ ಮರುಳಾಗಿ ಅವರಿಗೇಕೆ ಅಮೂಲ್ಯವಾದ ಪಾರಿತೋಷಕಗಳನ್ನು ಕೊಡುತ್ತಿ ದ್ದರು? ಈಗ ನೀನೇ ಹೇಳು. ರಾಜರುಗಳು ಲಾವಂಚದ ಕಡ್ಡಿಯ ಧ್ವನಿ ಯನ್ನು ಕೇಳಿ ಬೆಚ್ಚಿಬಿದ್ದು, ತಮ್ಮ ಕಿವಿಗಳಿಗೆ ಬೆರಳಿಟ್ಟುಕೊಂಡು ಮನೆಗೆ ಓಡಿ

ಹೋಗುತ್ತಾರೆ. ಅದರೆ ದರಬಾರಿನ ಕವಿಯು ಅವರನ್ನು ಸಾಹಸದಲ್ಲಿ ಅರ್ಜುನ ಮತ್ತು ದ್ರೋಣಾಚಾರ್ಯರಿಗಿಂತಲೂ ಒಂದು ಕೈ ಮಿಗಿಲೆಂದು ವರ್ಣಿಸುತ್ತಾನೆ. ಈ ಗುಣಗಾನವನ್ನು ಕೇಳಿ ಅವರು ತಮ್ಮ ಮೀಸೆಯನ್ನು ಹುರಿಮಾಡುತ್ತಾರೆ. ಇದು ತಮ್ಮ ಅಣಕವೆಂಬುದನ್ನು ಅವರು ಒಂದು ಕ್ಷಣಕಾಲವಾದರೂ ಯೋಚಿಸುವುದಿಲ್ಲ. ಇಂತಹ ಹೊಗಳಿಕೆಗಳಲ್ಲಿ ನಾವು ಅದರಲ್ಲಿನ ಶಬ್ದಗಳನ್ನು ಅಷ್ಟಾಗಿ ಗಮನಿಸುವುದಿಲ್ಲ, ಅವುಗಳ ಅಂತರಾಳದಲ್ಲಿ ಅಡಗಿರುವ ಭಾವಗಳನ್ನು ಮಾತ್ರ ಗ್ರಹಿಸುತ್ತೇವೆ. ಸುಮಿತ್ರೆಯು ರೂಪ ಲಾವಣ್ಯಗಳಲ್ಲಿ ತನಗನುರೂಪರಾದವರು ಯಾರೂ ಇಲ್ಲವೆಂದು ತಿಳಿದಿದ್ದಾಳೆ. ಅವಳಿಗೆ ಈ ಹುಚ್ಚು ಹೇಗೆ ಹಿಡಿಯಿತೆಂಬುದೇ ಗೊತ್ತಿಲ್ಲ.

ಪೂರ್ಣಾ, ಈ ವಿಷಯವನ್ನು ಹೇಳುತ್ತಾ ಹೋದರೆ ನನಗೆ ಬಹಳ ದುಃಖವಾಗುತ್ತದೆ; ಆದರೆ ಈ ಸ್ತ್ರೀಯ ಕಾರಣವಾಗಿ ನನ್ನ ಬಾಳೇ ಹಾಳಾಯಿತು. ಪ್ರೇಮವೆಂದರೇನು ಎಂಬುದೇ ನನಗೆ ಅರ್ಥವಾಗಲಿಲ್ಲ. ನಾನು ಈ ಜಗತ್ತಿನಲ್ಲಿ ಎಲ್ಲರಿಗಿಂತಲೂ ಭಾಗ್ಯಹೀನ, ಎಷ್ಟೆಂದು ಹೇಳಲಿ! ಹಿಂದಿನ ಜನ್ಮದಲ್ಲಿ ಮಾಡಿದ್ದ ಪಾಪ ಕಾರ್ಯಗಳಿಗಾಗಿ ಈಗ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಿದ್ದೇನೆ. ಸುಮಿತ್ರೆಯೊಡನೆ ಮಾತನಾಡುವುದಕ್ಕೂ ಮನಸ್ಸಾಗುವುದಿಲ್ಲ. ಆದರೆ ಮನೆಯಲ್ಲಿ ಎಲ್ಲಿ ರಾದ್ಧಾಂತವಾಗುವುದೋ ಎಂದು ಹೆದರಿ ಬಾಯಿ ಬಿಟ್ಟು ಒಂದು ಮಾತನ್ನೂ ಆಡುವುದಿಲ್ಲ. ನಾನು ಪೋಲಿ, ಲಫಂಗ, ಸಿನೆಮಾ ಮತ್ತು ನಾಟಕ ಮಂದಿರಗಳಿಗೆ ಮನೋರಂಜನೆಗಾಗಿ ಹೋಗುತ್ತೇನೆಂದು ಜನರು ತಿಳಿದಿದ್ದಾರೆ; ಆದರೆ ಪೂರ್ಣಾ, ನಾನು ನಿನಗೆ ಸತ್ಯವಾಗಿ ಹೇಳುತ್ತೇನೆ, ಕೇಳು. ನನ್ನ ಮನೋವೇದನೆಯನ್ನು ಮರೆಯುವುದಕ್ಕಾಗಿಯೇ ನಾನು ಸಿನೆಮಾಕ್ಕೆ ಹೋಗುತ್ತೇನೆ. ನನ್ನ ಅತೃಪ್ತ ಅಭಿಲಾಷೆಗಳನ್ನು ಯಾವ ರೀತಿಯಲ್ಲಿ ತಾನೇ ತೃಪ್ತಿಪಡಿಸಿಕೊಳ್ಳಬಲ್ಲೆನು ? ಹೃದಯದ ಬೇಗೆಯನ್ನು ಹೇಗೆ ತಾನೇ ಶಾಂತಿಗೊಳಿಸಬಲ್ಲೆನು ? ಒಂದೊಂದು ವೇಳೆ ನನಗೆ ಸನ್ಯಾಸಿಯಾಗಬೇಕೆನಿಸುತ್ತದೆ. ಪ್ರಾಯಶಃ ಎಂದಾದರೊಂದು ದಿನ ನಾನು ಸನ್ಯಾಸಿಯಾಗಬೇಕಾಗುತ್ತದೆ. ಈ ಮಹಾಶಯ ಯಾವುದೋ ರಗಳೆಯನ್ನೇ ಆರಂಭಿಸಿದನೆಂದು ನೀನು ತಿಳಿಯುತ್ತಿರಬಹುದು. ಪೂರ್ಣಾ, ನನ್ನನ್ನು ಕ್ಷಮಿಸು. ಇಂದು ನಾನು ನಿನ್ನೊಡನೆ ಈ ಮಾತುಗಳನ್ನು ಏಕೆ ಆಡುತ್ತಿರುವೆನೆಂಬುದೇ ನನಗೆ ತಿಳಿಯದಾಗಿದೆ. ಇಂದಿನ

ವರೆಗೂ ನಾನು ಈ ವಿಷಯಗಳನ್ನು ಯಾರೊಡನೆಯೂ ಹೇಳಿರಲಿಲ್ಲ. ನೊಂದ ಹೃದಯವು ನೊಂದ ಹೃದಯದಿಂದಲೇ ಸಹಾನುಭೂತಿಯನ್ನು ಬಯಸುತ್ತದೆ. ನೀನು ಇಷ್ಟು ಮಾತ್ರ ತಿಳಿದಿರು. ನಾನು ಹೋಗಿ ಸೇವಕರನ್ನು ಕಳುಹಿಸು ತ್ತೇನೆ; ಅವರು ನಿನ್ನ ಸಾಮಾನನ್ನು ಸಾಗಿಸುವರು.''

ಈಗ ಪೂರ್ಣಾಗೆ ಭವಿಷ್ಯ ಜೀವನದ ವಿಪತ್ತಿನ ಶಂಕೆಯೂ ದೂರಾ ಯಿತು. ಈ ಮನೆಯನ್ನು ಬಿಟ್ಟು ಹೋಗಲು ಈಗಲೂ ಅವಳಿಗೆ ಇಷ್ಟವಿರ ಲಿಲ್ಲ; ಆದರೆ ಅವಳು ಈ ಪ್ರೇಮಪೂರ್ವಕವಾದ ಈ ಒತ್ತಾಯವನ್ನು ನಿರಾಕರಿ ಸಲು ಸಿದ್ಧಳಾಗಿರಲಿಲ್ಲ. ತನ್ನ ತಿರಸ್ಕಾರದಿಂದ ಕಮಲಾಪ್ರಸಾದನ ದುಃಖವು ಇಮ್ಮಡಿಸಬಹುದೆಂಬ ಭಯವೂ ಅವಳನ್ನು ಕಾಡತೊಡಗಿತು. ಆಶ್ರಯಹೀನ ಳಾದ ವಿಧವೆಗೆ ಈ ಸಮಯದಲ್ಲಿ ಒದಗುವ ಅಲ್ಪ ಸಹಾಯವೇ ಮಹತ್ತರವಾ ಗಿತ್ತು. ಹೀಗಿರುವಲ್ಲಿ ಅವಳು ಈ ಆಶ್ರಯವನ್ನು ಹೇಗೆ ತಾನೆ ನಿರಾಕರಿಸಿ ಯಾಳು! ಆದರೆ ಇದು ತನ್ನ ಉದ್ಧಾರದ ಆಶ್ರಯವಲ್ಲ; ತನ್ನ ಆತ್ಮವನ್ನೇ ನುಂಗಿ ಹಾಕುವ ಒಂದು ಜಲಜಂತುವಿನೋಪಾದಿಯಲ್ಲಿದೆಯೆಂಬುದನ್ನು ಅವಳು ಹೇಗೆ ತಾನೆ ತಿಳಿಯುವಳು ?

೫

ತನ್ನ ಮನೆಯನ್ನು ಬಿಟ್ಟು ಹೊರಡುವ ಕಾಲದಲ್ಲಿ ಪೂರ್ಣಾಗೆ ತುಂಬಾ ದುಃಖವಾಯಿತು. ಜೀವನದ ಮೂರು ವರ್ಷಗಳನ್ನು ಅವಳು ಇದೇ ಮನೆಯ ಲ್ಲಿಯೇ ಕಳೆದಿದ್ದಳು. ಇಲ್ಲಿಯೇ ತನ್ನ ಸೌಭಾಗ್ಯದ ಸುಖವನ್ನೂ ಕಂಡಿದ್ದಳು. ಇಲ್ಲಿಯೇ ವೈಧವ್ಯದ ದುಃಖವನ್ನೂ ಅನುಭವಿಸಿದ್ದಳು. ಈಗ ಅದನ್ನು ಬಿಡುವ ಸಮಯದಲ್ಲಿ ಹೃದಯವು ಒಡೆದು ಹೋಗುವಂತಾಗುತ್ತಿತ್ತು. ನಾಲ್ಕು ಜನ ಸೇವಕರು ಅವಳ ಮನೆಯ ಸಾಮಾನುಗಳನ್ನು ಹೊತ್ತುಕೊಂಡು ಹೋಗಲು ಬಂದಾಗ ಅವಳು ಇದ್ದಕ್ಕಿದ್ದಂತೆಯೇ ಅತ್ತುಬಿಟ್ಟಳು. ಶವವನ್ನು ಎತ್ತಿ ಕೊಂಡು ಹೋಗುವಾಗ ಶೋಕಸಂತಪ್ತರ ಮನಸ್ಸಿನಲ್ಲಿ ಉಂಟಾಗುವ ಭಾವನೆ

ಗಳು ಈಗ ಅವಳ ಹೃದಯದಲ್ಲಿ ಬರತೊಡಗಿದವು. ಶವವನ್ನು ಮನೆಯಲ್ಲಿ ಇರಿಸಿಕೊಂಡಿರಲು ಸಾಧ್ಯವಿಲ್ಲ; ಎಷ್ಟು ಜಾಗ್ರತೆ ದಹನ ಕ್ರಿಯೆಗಳಾದರೆ ಅಷ್ಟೇ ಮೇಲು ಎಂಬ ವಿಷಯವನ್ನು ತಿಳಿದುಕೊಂಡಿದ್ದರೂ ಕೂಡ, ಅವರು ಕ್ಷಣಕಾಲ ಮೋಹಪರವಶರಾಗಿ ಶವದ ಕಾಲುಗಳನ್ನು ಅಪ್ಪಿಕೊಂಡು ಶೋಕವಿಹ್ವಲರಾಗಿ ಕರುಣಾಪೂರಿತ ಧ್ವನಿಯಲ್ಲಿ ಪ್ರಲಾಪಿಸಲಾರಂಭಿಸುತ್ತಾರೆ. ಅವರು ಇದು ವರೆಗೂ ಯಾವ ಆತ್ಮವಂಚನೆಯಲ್ಲಿ ಸಿಕ್ಕಿಕೊಂಡಿದ್ದರೋ, ಅದು ಈಗಲೂ ಪ್ರಾಯಶಃ ಜೀವನದ ಕೆಲವು ಲಕ್ಷಣಗಳು ಕಂಡು ಬಂದದ್ದೇ ಆದರೆ, ಒಂದು ಪರದೆಯೋಪಾದಿಯಲ್ಲಿ ಅವರ ಕಣ್ಣೆದುರಿನಿಂದ ಸರಿದು ಹೋಗುತ್ತದೆ ಮತ್ತು ಮೋಹದ ಕೊನೆಯ ಬಂಧನವೂ ಕಡಿದು ಹೋಗುತ್ತದೆ. ಅದೇ ರೀತಿಯಲ್ಲಿ ಪ್ರೇಮಾ ಕೂಡ ಮನೆಯ ಒಂದು ಮೂಲೆಯಲ್ಲಿ ಗೋಡೆಯಿಂದ ಮುಖ ಮುಚ್ಚಿಕೊಂಡು ಅಳಲಾರಂಭಿಸಿದಳು. ತನ್ನ ಪ್ರಾಣೇಶನ ಸ್ಮೃತಿಯ ಈ ಆಧಾರವೂ ಕೂಡ ಅಪಾರವಾದ ಶೋಕಸಾಗರದಲ್ಲಿ ವಿಲೀನವಾಗುತ್ತಿತ್ತು. ಆ ಮನೆಯ ಪ್ರತಿಯೊಂದು ಕೋಣೆಯೂ ಮರೆಯಲಾಗದ ಮಧುರ ಸ್ಮೃತಿಗ ಳಿಂದ ತುಂಬಿ ಹೋಗಿತ್ತು. ತನ್ನ ಸೌಭಾಗ್ಯ ರವಿಯು ಅಸ್ತನಾದ ಮೇಲೆಯೂ ಕೂಡ ಅದರ ಒಂದು ಕಾಂತಿಯು ಶೋಭಿಸುತ್ತಿತ್ತು. ಅವಳ ಸೌಭಾಗ್ಯಸಂಗೀ ತವು ಕೊನೆಗೊಂಡಿದ್ದರೂ ಕೂಡ ಇಲ್ಲಿ ಅದರ ಪ್ರತಿಧ್ವನಿಯು ಸ್ವಲ್ಪಸ್ವಲ್ಪವಾಗಿ ಕೇಳಿಬರುತ್ತಿತ್ತು. ಮನೆಯಲ್ಲಿ ಸುಳಿದಾಡುತ್ತಿರುವಾಗ ಅವಳಿಗೆ ತನ್ನ ಸೌಭಾ ಗ್ಯದ ವಿಷಯದಲ್ಲಿ ವಿಷಾದಪೂರ್ಣವಾದ ಹೆಮ್ಮೆಯುಂಟಾಗುತ್ತಿತ್ತು. ಇಂದು ತನ್ನ ಆ ಸೌಭಾಗ್ಯ ಸೂರ್ಯನ ಅಂತಿಮ ಪ್ರಕಾಶವೂ ಕೂಡ ಲುಪ್ತವಾಗು ತ್ತಿತ್ತು. ತನ್ನ ಸೌಭಾಗ್ಯ ಸಂಗೀತದ ಆ ಪ್ರತಿಧ್ವನಿಯು ಒಂದು ಅನಂತಾಕಾಶ ದಲ್ಲಿ ಲೀನವಾಗುತ್ತಿತ್ತು. ಅವಳ ಆ ವಿಷಾದಪೂರ್ಣವಾದ ಗರ್ವವು ಹೃದಯ ವನ್ನು ಸೀಳಿಕೊಂಡು ಹೊರಟು ಹೋಗುವುದರಲ್ಲಿತ್ತು !

ನೆರೆಹೊರೆಯಲ್ಲಿದ್ದ ಸ್ತ್ರೀಯರಿಗೆ ಪೂರ್ಣಾ ಇಲ್ಲಿಂದ ಹೊರಟು ಹೋಗುವ ಳೆಂದು ತಿಳಿಯುತ್ತಲೇ ಎಲ್ಲರೂ ಅವಳನ್ನು ಬೀಳ್ಕೊಡಲು ಬಂದರು. ಪೂರ್ಣಾಳ ಶೀಲ ಮತ್ತು ವಿನಯ ಗುಣಗಳು ಎಲ್ಲರನ್ನೂ ಮೋಹಗೊಳಿಸಿದ್ದವು. ಪೂರ್ಣಾಳ ಹತ್ತಿರ ಹಣವಿರಲಿಲ್ಲ, ಆದರೆ ಅವಳ ಬಳಿ ಮಧುರ ವಚನಗಳಿಗೆ ಕೊರತೆ ಇರ ಲಿಲ್ಲ. ಅವಳ ವದನವು ಮಂದಹಾಸದಿಂದ ಮಿನುಗುತ್ತಿರುತ್ತಿತ್ತು. ಹಣ

ಕ್ಕಿಂತಲೂ ಅತ್ಯಾವಶ್ಯಕವಾಗಿ ಬೇಕಾದ ಸಹಾನುಭೂತಿ ಮತ್ತು ಸೇವಾಭಾವನೆಗಳು ಅವಳಲ್ಲಿ ತುಂಬಿ ತುಳುಕುತ್ತಿದ್ದವು. ಪೂರ್ಣಾ ಮನೆಗೆ ಬಂದಿದ್ದ ಎಲ್ಲರನ್ನೂ ಆಲಂಗಿಸಿಕೊಂಡು ಅವರಿಂದ ಅತ್ತೆಯ ಮನೆಗೆ ಹೋಗುವ ಸೊಸೆಯಂತೆ ಬೀಳ್ಕೊಂಡಳು.

ಸಂಜೆಯ ವೇಳೆ ಅವಳು ತನ್ನ ಮನೆಗೆಲಸದ ಭಾಗ್ಯಮ್ಮನೊಡನೆ ಬಹಿಷ್ಕೃತಳಂತೆ ಅಳುತ್ತಾ ಹೊರಟಳು. ತನ್ನ ಹೃದಯವು ಅಲ್ಲಿಯೇ ಉಳಿದುಕೊಂಡಿದೆಯೋ ಎಂಬಂತೆ ಅವಳು ಹಿಂದಕ್ಕೆ ತಿರುಗಿತಿರುಗಿ ತನ್ನ ಪ್ರಿಯನಿವಾಸವನ್ನು ನೋಡುತ್ತಾ ಹೋಗುತ್ತಿದ್ದಳು.

ಪ್ರೇಮಾ ತನ್ನ ಮನೆಯ ಬಾಗಿಲಿನಲ್ಲಿ ನಿಂತುಕೊಂಡು ಅವಳ ದಾರಿ ಕಾಯುತ್ತಿದ್ದಳು. ಪೂರ್ಣಾಳನ್ನು ನೋಡುತ್ತಲೇ ಓಡಿಬಂದು ಅವಳ ಕೊರಳನ್ನು ತಬ್ಬಿಕೊಂಡಳು. ಈ ಮನೆಗೆ ಪೂರ್ಣಾ ಪ್ರಾಯಶಃ ನಿತ್ಯವೂ ಬರುತ್ತಿದ್ದಳು. ಆಗ ಇಲ್ಲಿಗೆ ಬರುತ್ತಲೇ ಅವಳ ಮನಸ್ಸು ಹಿರಿಹಿರಿ ಹಿಗ್ಗಿ ಹೋಗುತ್ತಿತ್ತು; ಆಮೋದ ಪ್ರಮೋದಗಳಲ್ಲಿ ಅವಳ ಸಮಯವು ಕಳೆದುಹೋಗುತ್ತಿತ್ತು; ಆದರೆ ಇಂದು ಈ ಮನೆಯನ್ನು ಪ್ರವೇಶಿಸಲು ಸಂಕೋಚವೂ ದುಃಖವೂ ಆಗುತ್ತಿತ್ತು. ಪ್ರಾಯಶಃ ಅವಳು ತಾನು ವ್ಯರ್ಥವಾಗಿ ಈ ಮನೆಗೆ ಬಂದೆನೆಂದು ಪಶ್ಚಾತ್ತಾಪಪಡುತ್ತಿದ್ದಳು. ಪ್ರೇಮಾಳನ್ನು ಆಲಿಂಗಿಸಿಕೊಂಡರೂ ಅವಳ ಮನಸ್ಸು ಪ್ರಸನ್ನವಾಗಲಿಲ್ಲ. ಮೊದಲು ಅವಳು ಸ್ನೇಹಭಾವದಿಂದ ಬರುತ್ತಿದ್ದಳು; ಇಂದು ಆಶ್ರಿತಳಾಗಿ ಬಂದಿದ್ದಳು. ಆಗಿನ ಅವಳ ಆಗಮನವು ಸಾಮಾನ್ಯ ವಿಷಯವಾಗಿತ್ತು. ಅವಳಿಗೆ ವಿಶೇಷ ರೀತಿಯ ಆದರೋಪಚಾರಗಳು ನಡೆಯುತ್ತಿರಲಿಲ್ಲ. ಜನರು ಅವಳನ್ನು ಸ್ವಾಗತಿಸಲು ಓಡಾಡುತ್ತಿರಲಿಲ್ಲ, ಇಂದು ಅವಳು ಬರುತ್ತಲೇ ದೇವಕಿಯು ಉಗ್ರಾಣದ ತೆರೆದ ಬಾಗಿಲನ್ನು ಹಾಗೆಯೇ ಬಿಟ್ಟು ಹೊರಗೆ ಬಂದಳು. ಸುಮಿತ್ರಾ ತಲೆ ಬಾಚಿಕೊಳ್ಳುತ್ತಿದ್ದಳು, ಅರ್ಧ ಹೆಣೆದಿದ್ದ ಜಡೆಯ ಮೇಲೆ ಮುಸುಕು ಹಾಕಿಕೊಂಡು ಓಡಿ ಬಂದಳು. ಸೇವಕಿಯರು ತಮ್ಮ ತಮ್ಮ ಕೆಲಸವನ್ನು ಬಿಟ್ಟು ಹೊರಕ್ಕೆ ಓಡಿ ಬಂದರು. ಕಮಲಾಪ್ರಸಾದನಂತೂ ಮೊದಲಿನಿಂದಲೇ ಅಂಗಳದಲ್ಲಿ ನಿಂತಿದ್ದನು. ಸಂಧ್ಯಾವಂದನೆ ಮಾಡಲು ಹೋಗುತ್ತಿದ್ದ ಬದರೀಪ್ರಸಾದರು, ಅದನ್ನು ಬದಿಗೊತ್ತಿ ಅಂಗಳಕ್ಕೆ ಬಂದು ಸೇರಿದರು. ಈ ಸಂಭ್ರಮವನ್ನು

ನೋಡಿ ಪೂರ್ಣಾಳ ಮನಸ್ಸು ಕುಗ್ಗಿ ಹೋಗುತ್ತಿತ್ತು. ಈ ಸ್ವಾಗತವು ಗೌರವ ಸೂಚಕವಾಗಿರಲಿಲ್ಲ, ದಯಾಸೂಚಕವಾಗಿತ್ತು.

ದೇವಕಿಗೆ ಸುಮಿತ್ರೆಯ ಮಾತೆಂದರೆ ಆಗುತ್ತಿರಲಿಲ್ಲ. ಅವಳ ನಡೆ-ನುಡಿ, ಏಳುವುದು-ಕೂಡುವುದು, ಉಡಿಗೆ-ತೊಡಿಗೆಗಳೆಲ್ಲವೂ ಮುಂಕುತನದ ಚರಮ ಸೀಮೆಯನ್ನು ಅತಿಕ್ರಮಿಸಿರುವಂತೆ ದೇವಕಿಗೆ ಕಾಣುತ್ತಿದ್ದವು. ಅವಳು ನಿತ್ಯವೂ ಸೊಸೆಯ ವಿಷಯವಾಗಿ ಪ್ರಚಂಡ ಆಲೋಚನೆ ಮಾಡುತ್ತಿದ್ದಳು. ಅವಳ ಆಲೋಚನೆಯಲ್ಲಿ ಪ್ರೇಮ ಮತ್ತು ಸದ್ಭಾವನೆಗಳು ಅಧಿಕವಾಗಿದ್ದವೋ ಅಥವಾ ದ್ವೇಷವೋ ಎಂಬುದನ್ನು ನಿರ್ಣಯಿಸುವುದು ಕಷ್ಟವಾಗಿತ್ತು. ಸುಮಿತ್ರೆಯೇನೋ ದ್ವೇಷವೆಂದೇ ತಿಳಿದಿದ್ದಳು. ಆದ್ದರಿಂದ ಅವಳು ಅತ್ತೆಯನ್ನು ಮತ್ತಷ್ಟು ರೇಗಿ ಸುತ್ತಿದ್ದಳು. ದೇವಕಿಯು ಪ್ರಾತಃಕಾಲದಲ್ಲಿಯೇ ಏಳಬೇಕೆಂದು ಉಪದೇಶ ಮಾಡಿದರೆ, ಸುಮಿತ್ರೆ ಒಂಬತ್ತು ಗಂಟೆಗೆ ಮುಂಚೆ ಏಳುತ್ತಿರಲಿಲ್ಲ. ದೇವಕಿಯು ಬುರುಕೆಯನ್ನು ಕಿತ್ತೊಗೆಯಲು ಆಜ್ಞೆ ಮಾಡಿದರೆ, ಇದಕ್ಕೆ ಉತ್ತರ ರೂಪವಾಗಿ ಸುಮಿತ್ರೆಯು ತಲೆಯ ಮೇಲೆ ಅರ್ಧ ಮುಸುಕನ್ನು ಎಳೆದುಕೊಳ್ಳುತ್ತಿದ್ದಳು. ದೇವಕಿಯು ಸೇವಕಿಯರೊಡನೆ ತುಂಬಾ ಸಲಿಗೆಯಿಂದಿರಬಾರದೆಂಬ ನೀತಿ ಹೇಳಿದರೆ, ಸುಮಿತ್ರೆಯು ಅವರೊಡನೆ ವಿನೋದದಿಂದ ಆಟವಾಡುತ್ತಿದ್ದಳು. ಪೂರ್ಣಾ ಇಲ್ಲಿಗೆ ಬರುವುದು ದೇವಕಿಗೆ ಇಷ್ಟವಿಲ್ಲವೆಂಬುದು ಸುಮಿತ್ರೆಗೆ ತಿಳಿಯ ದಿರಲಿಲ್ಲ. ಮೊದಲಿನಿಂದಲೇ ಅವಳು ಈ ಪ್ರಸ್ತಾಪಕ್ಕಾಗಿ ಗಂಡನ ಮೇಲೆ ಕೋಪಿಸಿಕೊಂಡಿದ್ದಳು. ಆದರೆ ಗಂಡನು ತನ್ನ ಇಚ್ಛೆಯನ್ನು ಹೇಗಾದರೂ ನೆರವೇರಿಸದೆ ಇರಲಾರನೆಂದು ಚೆನ್ನಾಗಿ ಅನುಭವವಿದ್ದುದರಿಂದ, ಅವಳು ತನ್ನ ವಿರೋಧವನ್ನು ಪ್ರಕಟಿಸಿ ಅಪಯಶಸ್ಸಿಗೆ ಗುರಿಯಾಗಲು ಸಿದ್ಧಳಾಗಲಿಲ್ಲ. ಸುಮಿತ್ರೆಯು ಅತ್ತೆಯ ಮನೋಭಾವನೆಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದಳು. ಪೂರ್ಣಾ ಕೂಡ ಅತ್ತೆಯ ಸ್ವಭಾವವನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳುತ್ತಿರುವಳೆಂಬುದನ್ನು ಅರಿತಿದ್ದಳು. ಆದ್ದರಿಂದ ಪೂರ್ಣಾಳ ವಿಷಯದಲ್ಲಿ ಅವಳ ಮನಸ್ಸಿನಲ್ಲಿ ಸ್ನೇಹ ಮತ್ತು ಸಹಾನುಭೂತಿಗಳು ಉತ್ಪನ್ನವಾದುವು. ಇದುವರೆಗೂ ದೇವಕಿಯು ಪೂರ್ಣಾಳನ್ನು ಆದರ್ಶ ಗೃಹಿಣಿಯೆಂದು ಹೇಳಿ, ಅವಳ ವರ್ಣನೆ ಮಾಡುತ್ತಿರುತ್ತಿದ್ದಳು. ಅವಳನ್ನು ತೋರಿಸಿ ಸುಮಿತ್ರೆಯನ್ನು ನಾಚಿಕೆಪಟ್ಟುಕೊಳ್ಳುವಂತೆ ಮಾಡುವುದು ಅವಳ ಬಯಕೆಯಾಗಿತ್ತು.

ಆದ್ದರಿಂದ ಸುಮಿತ್ರೆಯು ಪೂರ್ಣಾಳನ್ನು ನೋಡಿ ಕರುಬುತ್ತಿದ್ದಳು. ಆದರೆ ಇಂದು ದೇವಕಿಯ ಮನಸ್ಸಿನಲ್ಲಿ ಆ ಭಾವನೆ ಇರಲಿಲ್ಲ. ಆದ್ದರಿಂದ ಸುಮಿತ್ರೆಯ ಮನದಲ್ಲಿಯೂ ಹಿಂದಿನ ಭಾವನೆಯಿರಲಿಲ್ಲ.

ಪೂರ್ಣಾ ಇಂದು ಬಹಳ ಹೊತ್ತಿನವರೆಗೆ ಪ್ರೇಮಾಳ ಬಳಿ ಕುಳಿತುಕೊಳ್ಳಲಿಲ್ಲ. ಮನಸ್ಸು ಬಹಳ ಬೇಸರಗೊಂಡಿತ್ತು. ಇಂದು ಅವಳಿಗೆ ತನ್ನ ಹೀನ ಸ್ಥಿತಿಯ ಯಥಾರ್ಥ ಜ್ಞಾನವುಂಟಾಗಿತ್ತು. ಇಷ್ಟು ಬೇಗ ತನ್ನ ಸ್ಥಿತಿಯು ಹೇಗಿದ್ದುದು ಹೇಗಾಯಿತೆಂಬುದರ ಅರಿವು ಇಂದು ಅವಳಿಗಾಗುತ್ತಿತ್ತು. ಈ ಮನೆಯು ಅವಳ ನಾಡು ಹೆಂಚಿನ ಮನೆಗಿಂತಲೂ ಎಷ್ಟೋ ಸುಂದರವಾಗಿತ್ತು. ಅವಳ ಕೊಠಡಿಯಲ್ಲಿ ರತ್ನಗಂಬಳಿಯಿತ್ತು, ಮನೋಹರವಾದ ಮಂಚವಿತ್ತು. ಬೀರುಗಳಿದ್ದವು. ವಿದ್ಯುದ್ದೀಪವು ಥಳಥಳಿಸುತ್ತಿತ್ತು, ಬೀಸಣಿಗೆಯೂ ಇತ್ತು; ಆದರೆ ಈ ಸಮಯದಲ್ಲಿ ವಿದ್ಯುತ್ಪ್ರಕಾಶವು ಅವಳ ಕಣ್ಣುಗಳನ್ನು ಕುಕ್ಕುತ್ತಿತ್ತು. ಮತ್ತು ಬೀಸಣಿಕೆಯಿಂದ ಬರುವ ಗಾಳಿಯು ಅವಳ ದೇಹವನ್ನು ಜ್ವಾಲೆಯಂತೆ ದಹಿಸುತ್ತಿತ್ತು. ಪ್ರೇಮಾ ಬಹಳ ಒತ್ತಾಯ ಮಾಡಿದರೂ ಕೂಡ ಇಂದು ಅವಳು ಊಟ ಮಾಡಲಿಲ್ಲ. ತನ್ನ ಕೊಠಡಿಗೆ ಬಂದು ಮಂಚದಮೇಲೆ ಬಿದ್ದುಕೊಂಡು ಅಳತೊಡಗಿದಳು. ವಿಧಿಯು ಅವಳೊಡನೆ ಎಂತಹ ಆಣಕದಾಟವಾಡುತ್ತಿದ್ದನು ! ಅವಳ ಜೀವನ ಸರ್ವಸ್ವವನ್ನು ಅಪಹರಿಸಿ, ಆ ನಿರ್ದಯ ವಿಧಿಯು ಅವಳನ್ನು ನಿರ್ಜೀವ ಪುತ್ಥಳಿಗಳಿಂದ ಸಂತುಷ್ಟಪಡಿಸಬೇಕೆಂದಿದ್ದನು. ಅವಳ ಎರಡು ಕಣ್ಣುಗಳನ್ನೂ ಕಿತ್ತು ಅವಳಿಗೆ ರಮಣೀಯವಾದ ಉಪವನದ ಸೊಬಗನ್ನು ತೋರಿಸುತ್ತಿದ್ದನು. ಅವಳ ಎರಡು ಕೈಗಳನ್ನೂ ಕತ್ತರಿಸಿ ಅವಳನ್ನು ಜಲಕ್ರೀಡೆಯಾಡಲು ಸಾಗರದಲ್ಲಿ ನೂಕುತ್ತಿದ್ದನು !

ರಾತ್ರಿಯ ಹನ್ನೊಂದು ಗಂಟೆಯ ಸಮಯ. ಪೂರ್ಣಾ ವಿದ್ಯುತ್ಪ್ರಕಾಶವನ್ನು ನೋಡಲಾರದೆ ಕಿಟಕಿಯ ಬಳಿ ನಿಂತು ಹೊರಗಿನ ಅಂಧಕಾರದ ಕಡೆಗೆ ನೋಡುತ್ತಿದ್ದಳು. ಆ ನಿಬಿಡವಾದ ಕಗ್ಗತ್ತಲಿನಲ್ಲಿ ಅವಳಿಗೆ ಎಷ್ಟೋ ಸುಂದರ ದೃಶ್ಯಗಳು ಗೋಚರಿಸುತ್ತಿದ್ದವು; ಅವಳ ಆ ಹೆಂಚಿನ ಮನೆ, ಅದರಲ್ಲಿನ ಹಳೆಯ ಮಂಚ, ಆ ಮನೆಯ ಚಿಕ್ಕ ಅಂಗಳ, ಮತ್ತು ತನ್ನ ಪತಿದೇವನು ಆಫೀಸಿನಿಂದ ಬಂದು ಅವಳನ್ನು ಸುಹಾಸವದನವಾಗಿ ಸಪ್ರೇಮ ನಯನಗಳಿಂದ ನೋಡುತ್ತಾ ತನ್ನ ಕಿಸೆಯಿಂದ ಯಾವುದಾದರೊಂದು ವಸ್ತುವನ್ನು ಹೊರಕ್ಕೆ ತೆಗೆದು ಅವಳಿಗೆ

ತೋರಿಸಿ ತಕ್ಷಣವೇ ಬಚ್ಚಿಡುತ್ತಿದ್ದ ಆ ಹೃದಯಂಗಮವಾದ ದೃಶ್ಯ ಅವಳ ಕಣ್ಣಿಗೆ ಕಟ್ಟಿದಂತೆ ಒಂದಾದಮೇಲೊಂದರಂತೆ ಕಾಣಿಸತೊಡಗಿದವು. ತಾಂಬೂಲವನ್ನು ಸಿದ್ಧಪಡಿಸುತ್ತಿದ್ದ ಅವಳು ಕಟಕ್ಕನೆ ಎದ್ದು ತನ್ನ ಪತಿಯ ಎರಡು ಕೈಗಳನ್ನೂ ಹಿಡಿದುಕೊಂಡು ಹೇಳುತ್ತಿದ್ದಳು— "ಏನದು ? ತೋರಿಸುವಿರೋ ಇಲ್ಲವೋ ? ಪತಿಯು ತನ್ನ ಮುಷ್ಟಿಯನ್ನು ಬಿಗಿ ಹಿಡಿಯುತ್ತಿದ್ದನು. ಅವಳ ಉತ್ಸಾಹವು ಮತ್ತಷ್ಟು ಹೆಚ್ಚುತ್ತಿತ್ತು. ಅವಳು ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಗಂಡನ ಮುಷ್ಟಿಯನ್ನು ಬಿಚ್ಚುತ್ತಿದ್ದಳು. ಆದರೆ ಅದರಲ್ಲಿ ಏನೂ ಇಲ್ಲದ್ದನ್ನು ನೋಡಿ ಅವಳ ಕೌತುಕವು ಕೆರಳುತ್ತಿತ್ತು. ಆಹಾ ! ಆ ಕೌತುಕ ಮತ್ತು ಕ್ರೀಡೆಯಲ್ಲಿ ಅವಳಿಗೆ ತನ್ನ ಜೀವನ ಚಿತ್ರವೆಲ್ಲಾ ಅಡಗಿರುವಂತೆ ಕಾಣುತ್ತಿತ್ತು. ತಟಕ್ಕನೆ ಸುಮಿತ್ರಾ ಅಲ್ಲಿಗೆ ಬಂದು ಕೇಳಿದಳು— "ಅಯ್ಯೋ, ಇದೇನು ? ನೀನು ಅಲ್ಲಿ ಕಿಟಕಿಯ ಬಳಿಯಲ್ಲೇಕೆ ನಿಂತಿರುವೆ ? ನಿನಗೆ ನಿದ್ದೆ ಬಂದಿರಬಹುದೆಂದು ತಿಳಿದಿದ್ದೆ."

ಪೂರ್ಣಾ ಕಂಬನಿಗಳನ್ನೊರಸಿಕೊಂಡು ಉಕ್ಕಿ ಬರುತ್ತಿದ್ದ ದುಃಖವನ್ನು ತಡೆಯಲು ಪ್ರಯತ್ನಿಸುತ್ತಾ ಹೇಳಿದಳು— "ಅಕ್ಕಾ, ನೀನು ಹೇಳುತ್ತಿರುವುದು ಸುಳ್ಳು. ಹಾಗೆ ಯೋಚಿಸಿದ್ದರೆ ನೀನು ಇಲ್ಲಿಗೆ ಬರುತ್ತಲೇ ಇಲ್ಲ."

ಸುಮಿತ್ರಾ ಮಂಚದ ಮೇಲೆ ಕುಳಿತುಕೊಳ್ಳುತ್ತಾ ಹೇಳಿದಳು—"ನಾನು ಹೇಳುತ್ತಿರುವುದು ನಿಜ. ಯೋಚಿಸಿದ್ದೇನೋ ಹೀಗೆನೆ; ಆದರೆ ನಾನು ಏಕೆ ಇಲ್ಲಿಗೆ ಬಂದೆನೆಂಬುದರ ರಿವೇ ನನಗಿಲ್ಲ. ಪ್ರಾಯಶಃ ನೀನು ನಿದ್ರಿಸುತ್ತಿರುವುದನ್ನು ನೋಡಿ ಹಿಂತಿರುಗಿ ಹೋಗಲು ಬಂದಿದ್ದೆ. ನನ್ನ ಮಾತನ್ನು ಸತ್ಯವೆಂದು ನಂಬು. ಆಗಲೇ ಬಹಳ ಹೊತ್ತಾಗಿದೆ. ಈಗಲಾದರೂ ಮಲಗುವೆಯಷ್ಟೆ ?"

ಪೂರ್ಣಾ ಅನುಮಾನದಿಂದ ಕೇಳಿದಳು— "ನೀನು ಇದುವರೆಗೂ ಏಕೆ ಎಚ್ಚರವಾಗಿರುವೆ ?"

ಸುಮಿತ್ರಾ:— "ಹಗಲೆಲ್ಲಾ ನಿದ್ರಿಸುತ್ತೇನೆ."

ಪೂರ್ಣಾ:— "ಹಗಲೆಲ್ಲಾ ನಿದ್ರಿಸುವುದೇಕೆ ?"

ಸುಮಿತ್ರಾ:— "ರಾತ್ರಿಯೆಲ್ಲಾ ಎಚ್ಚರವಾಗಿರಲು."

ಸುಮಿತ್ರೆಯು ನಗಲಾರಂಭಿಸಿದಳು. ಒಂದು ಕ್ಷಣದಲ್ಲಿ ಇದ್ದಕ್ಕಿದ್ದಂತೆಯೇ ಅವಳ ಮುಖಾಕೃತಿಯು ಗಂಭೀರವಾಯಿತು. ಹೇಳಿದಳು-- " ನನ್ನ ಮಾತಾಪಿತೃಗಳ ಧನದಾಹಕ್ಕಾಗಿ ಪ್ರಾಯಶ್ಚಿತ್ತ ಮಾಡುತ್ತಿದ್ದೇನೆ, ಅಷ್ಟೇ. " ಹೀಗೆ ಹೇಳುತ್ತಾ ಹೇಳುತ್ತಾ ಅವಳ ಕಣ್ಣುಗಳು ಅಶ್ರುಪೂರಿತವಾದುವು.

ಪೂರ್ಣಾ ಸುಮಿತ್ರೆಯ ಈ ಮಾತನ್ನು ಕೇಳಿ ಚಕಿತಳಾದಳು. ಈ ಜೀವನದ ಮಧುರ ಸಂಗೀತದಲ್ಲಿ ಈ ಕರ್ಕಶ ಧ್ವನಿಯೇಕೆ?

ಸುಮಿತ್ರೆಯು ಯಾವುದೋ ಅಂತರ್ವೇದನೆಯಿಂದ ಖಿನ್ನಳಾಗಿ ನುಡಿದಳು—"ಸೋದರಿ, ನೀನೇ ನೋಡುತ್ತಿರು, ಒಂದಲ್ಲ ಒಂದು ದಿನ ಈ ಮನೆಯು ನೆಲಸಮವಾಗುವುದು. ಈ ಅಭಿಶಾಪವು ನನ್ನ ಬಾಯಿಂದ ಪದೇ ಪದೇ ಹೊರಡುತ್ತಿದೆ."

ಪೂರ್ಣಾ ವಿಸ್ಮಿತಳಾಗಿ ಹೇಳಿದಳು:— "ಹೀಗೇಕೆ ಹೇಳುವೆ ಸೋದರಿ ? ಪುನಃ ಅವಳಿಗೆ ಒಂದು ವಿಷಯ ಜ್ಞಾಪಕಕ್ಕೆ ಬಂದಿತು. ಆಗ ಕೇಳಿದಳು— "ಅಣ್ಣಾ ಇನ್ನೂ ಬಂದಿಲ್ಲವೇ ?"

ಸುಮಿತ್ರೆಯು ಬಾಗಿಲ ಕಡೆಗೆ ಭಯಭೀತ ನೇತ್ರಗಳಿಂದ ನೋಡುತ್ತಾ ಹೇಳಿದಳು— "ಇನ್ನೂ ಇಲ್ಲ, ಹನ್ನೆರಡು ಗಂಟೆಯಾಗಿದೆ. ಇಷ್ಟು ಜಾಗ್ರತೆ ಅವರೆಲ್ಲಿ ಬರುವರು ? ಅವರು ಒಂದಕ್ಕೊ, ಎರಡಕ್ಕೊ ಅಥವಾ ಮೂರಕ್ಕೊ ಬಂದಾರು. ನನ್ನ ಮದುವೆಯಾಗಿರುವುದು ಈ ಮನೆಗೆ. ಲಾಲಾ ಬದರೀಪ್ರಸಾದರ ಸೊಸೆ; ಇದಕ್ಕಿಂತಲೂ ಅಧಿಕ ಸುಖದ ಕಲ್ಪನೆಯನ್ನು ಯಾರು ತಾನೆ ಮಾಡಬಲ್ಲರು? ದೇವರು ನನ್ನನ್ನೇತಕ್ಕೆ ಸೃಷ್ಟಿಸಿದನೊ, ನನಗರ್ಥವಾಗುವುದಿಲ್ಲ. ಈ ಮನೆಯಲ್ಲಿ ನನಗಾಗಿ ಅಯ್ಯೋ ಅನ್ನುವರು ಯಾರೂ ಇಲ್ಲ. ಸೋದರಿ. ನಾನೇ ಮೊಂಡತನದಿಂದ ಇಲ್ಲಿ ಬಿದ್ದುಕೊಂಡಿದ್ದೇನೆ. ನಾನು ಸತ್ತರೂ ಬದುಕಿದರೂ ಯಾರೂ ಕೇಳುವವರೇ ಇಲ್ಲ. ನನ್ನಲ್ಲಿ ಕರುಣೆ ಇಟ್ಟಿರು ಎಂದು ನಿನ್ನನ್ನು ಪ್ರಾರ್ಥಿಸುತ್ತೇನೆ. ಕಿತ್ತು ಹೋದ ತಂತಿಗಳಿಂದ ಮಧುರ ನಾದವು ಹೊರಡಲಾರದು. ನಿನಗೆ ಇನ್ನೂ ಏನೇನು ಹೇಳುವೆನೋ ನನಗೇ ತಿಳಿಯದಾಗಿದೆ! ಯಾರಿಗಾದರೂ ಹೇಳಿಗೀಳಿಯೆ, ನಾನು ಮತ್ತಷ್ಟು ಕಷ್ಟಕ್ಕೆ ಗುರಿಯಾಗುವೆನು. ನಾವಿಬ್ಬರೂ ದುಃಖಿಗಳು. ನಿನ್ನ ಮನಸ್ಸಿನಲ್ಲಿ ಸುಖವನ್ನೀಯುವ ಜೀವಂತ ಸ್ಮೃತಿಗಳಾದರೂ ಇವೆ; ನನ್ನ ಮನಸ್ಸಿನಲ್ಲಿ ಅವೂ ಇಲ್ಲ.

ನಾನು ಸುಖವನ್ನು ಕಂಡವಳೇ ಅಲ್ಲ; ಕಾಣುವೆನೆಂಬ ಆಶೆಯನ್ನೂ ಇಟ್ಟು ಕೊಂಡಿಲ್ಲ."

ಪೂರ್ಣಾ ನಿಟ್ಟುಸಿರು ಬಿಡುತ್ತಾ ಹೇಳಿದಳು— "ನಿನ್ನ ಸೌಭಾಗ್ಯವನ್ನು ನನ್ನ ಸೌಭಾಗ್ಯದೊಡನೆ ಹೋಲಿಸಬೇಡ, ಅಕ್ಕ, ಪರಾಶ್ರಯಕ್ಕಿಂತಲೂ ಮಿಗಿ ಲಾದ ಕಷ್ಟವು ಸೌಭಾಗ್ಯದ ಭಂಡಾರದಲ್ಲಿಯೇ ಇಲ್ಲ."

ಸುಮಿತ್ರೆಯು ಒಣನಗು ನಗುತ್ತಾ ಹೇಳಿದಳು— " ಸೋದರಿ, ಆ ವಿಪತ್ತು ನನಗಿಲ್ಲವೆಂದು ತಿಳಿದಿರುವೆಯಾ ? ನನಗೆ ಎಲ್ಲಿಯಾದರೂ ಆಶ್ರಯ ಸಿಕ್ಕಿದ್ದರೆ, ಈ ಮನೆಯಲ್ಲಿ ಒಂದು ಕ್ಷಣಕಾಲವೂ ಇರುತ್ತಿರಲಿಲ್ಲ. ನೂರಾರುಸಲ ತಾಯಿ ತಂದೆಯರಿಗೆ ಕಾಗದ ಬರೆದು ನನಗೆ ಸಾಕಾಗಿ ಹೋಗಿದೆ. ನನ್ನನ್ನು ಒಂದು ಸಲ ಅವರು ಕರೆದುಕೊಂಡು ಹೋದರೆ, ನಾನು ಆಜೀವನ ಅವರ ಚರಣಸೇವೆ ಮಾಡಿಕೊಂಡಿರುವೆನು. ಆದರೆ ಅವರೂ ಕೂಡ ನನ್ನ ವಿಷಯ ದಲ್ಲಿ ಕರುಣಾಹೀನರಾಗಿದ್ದಾರೆ. ಅವರ ಉತ್ತರ ಪತ್ರವು ತಿರುಳಿಲ್ಲದ ಉಪ ದೇಶ ಮಾಲಿಕೆಯಂತಿರುತ್ತದೆ. ಅದನ್ನು ನಾನು ಎಂದೂ ಓದುವುದೇ ಇಲ್ಲ. ಈ ಮನೆಯಲ್ಲಿ ಮಾವನವರ ಹೃದಯದಲ್ಲಿ ಮಾತ್ರ ಭಗವಂತನು ಕರುಣೆಯನ್ನು ತುಂಬಿದ್ದಾನೆ; ಉಳಿದವರೆಲ್ಲರೂ ಪಾಷಾಣ ಮೂರ್ತಿಗಳು. ಸೋದರಿ, ನಾನು ಹೇಳುವುದು ಸತ್ಯವೆಂದು ತಿಳಿ. ಈ ಮಹಾಶಯರು ಇಷ್ಟು ಹೊತ್ತಾಗಿ ಬರು ತ್ತಾರಲ್ಲ ಎಂಬ ದುಃಖ ನನಗಿಲ್ಲ. ಅವರ ಮನಸ್ಸು ಬೇರೆ ಯಾರಲ್ಲಿಯಾದರೂ ಅನುರಕ್ತವಾಗಿದೆಯೆಂಬ ಕ್ಲೇಶವೂ ಇಲ್ಲ. ಇವರು ಯಾವಳಾದರೂ ರಮಣಿ ಯಲ್ಲಿ ಮೋಹಗೊಂಡಿದ್ದಾರೆಂದು ಇಂದು ನನಗೆ ತಿಳಿಯಬಂದರೆ, ನನ್ನ ಅರ್ಧ ದುಃಖವೆಲ್ಲಾ ಶಮನವಾಗುವುದು. ಇವರ ಹೃದಯ ಹೀನತೆಯನ್ನು ನೋಡಿ ನಾನು ದುಃಖಿಸುತ್ತೇನೆ. ಪ್ರೇಮಕ್ಕೆ ಬದಲಾಗಿ ಅವರಲ್ಲಿರುವುದು ಸ್ವಾರ್ಥ ತೆಯ ಒಂದು ಅಡ್ಡ ಗೋಡೆ. ಪುಸ್ತಕಗಳೆಂದರೆ ಇವರಿಗೆ ಪ್ರೇಮವಿಲ್ಲ, ಸಂಗೀತ ವೆಂದರೆ ಪ್ರೇಮವಿಲ್ಲ; ವಿನೋದವಂತೂ ಅವರ ಹತ್ತಿರ ಸುಳಿಯುವದಿಲ್ಲ; ಅವರಿ ಗಿರುವ ಪ್ರೇಮವೆಲ್ಲಾ ಹಣದ ಮೇಲೆ. ಇವರಿಗೆ ಸಿನೆಮಾ ನೋಡುವುದರಿಂದ ಆನಂದವಾಗುವುದೆಂಬ ನಂಬಿಕೆಯೂ ನನಗಿಲ್ಲ. ಅಲ್ಲಿಯೂ ಅವರಿಗೆ ಯಾವು ದಾದರೊಂದು ಸ್ವಾರ್ಥತೆ ಇದ್ದೇ ಇರುತ್ತದೆ. ಹಣ ಕಾಸಿನ ಲೇವಾದೇವಿ, ರೂಪಾಯಿಗೆ ರೂಪಾಯಿ ಬಡ್ಡಿ ತೆಗೆದುಕೊಳ್ಳುವುದು ಮತ್ತು ಲಾಭ ನಷ್ಟ

ಗಳಲ್ಲಿಯೇ ಇವರ ಜೀವವಿರುತ್ತದೆ. ಆದರೆ ನನಗೆ ಈ ವಿಷಯಗಳಲ್ಲೆಲ್ಲಾ ತಿರಸ್ಕಾರ ಭಾವನೆ.

ಅವರು ಮಲಗುವ ಕೊಠಡಿಗೆ ಬರುತ್ತಲೇ ಅವರ ಬಾಯಿಂದ ಹೊರಡುವ ಮೊದಲನೆಯ ಮಾತೆಂದರೆ,—ಇನ್ನೂ ದೀಪವನ್ನೇಕೆ ಆರಿಸಿಲ್ಲ? ಅಗೋ ನೋಡು, ಸವಾರಿ ಬಂದಿತು. ಈಗ ನಾವು ಗಂಟೆಗಟ್ಟಲೆ ಮಿತವ್ಯಯದ ಉಪದೇಶವನ್ನು ಕೇಳಬೇಕಾಗುವುದು. ಇದರಿಂದ ನಾನು ಹಣವನ್ನು ತುಚ್ಛವಾಗಿ ತಿಳಿಯುವೆನೆಂಬ ಅರ್ಥವಲ್ಲ. ಧನಸಂಚಯನ ಕಾರ್ಯವು ಒಳ್ಳೆಯದೇ ಹೌದು; ಆದರೆ ಮನುಷ್ಯನು ಹಣಕ್ಕೆ ಗುಲಾಮನಾಗಬಾರದು. ನಾನೂ ಇವರನ್ನು ರೇಗಿಸೋಣವೆಂದೇ ಏನಾದರೊಂದು ಉಪಯೋಗವಿಲ್ಲದ ಖರ್ಚುಮಾಡುತ್ತಿರುತ್ತೇನೆ. ಇದರಲ್ಲಿರುವ ವಿನೋದವನ್ನಾದರೂ ನೋಡು. ಇವರಿಗೆ ತಮ್ಮ ಹಣ ಖರ್ಚಾದುದಕ್ಕೆ ಮಾತ್ರ ಕೆಡುಕೆನಿಸುವುದಿಲ್ಲ, ನಾನು ನನ್ನಲ್ಲಿರುವ ಹಣದಲ್ಲಿಯೂ ಸ್ವಲ್ಪ ಖರ್ಚು ಮಾಡುತ್ತೇನೆ. ನಮ್ಮ ತಂದೆಯವರು ತಿಂಗಳಿಗೆ ನಲವತ್ತೋ, ಐವತ್ತೋ ರೂಪಾಯಿಗಳನ್ನು ಕಳಿಸಿಕೊಡುತ್ತಾರೆ, ಇಲ್ಲದಿದ್ದರೆ ಈ ಮನೆಯಲ್ಲಿ ಒಂದು ಕಿಲುಬಾದ ಕಾಸೂ ಸಿಕ್ಕುವುದಿಲ್ಲ. ನನಗೆ ಇಷ್ಟವಾದ ರೀತಿಯಲ್ಲಿ ಅದನ್ನು ಖರ್ಚು ಮಾಡುತ್ತೇನೆ. ಅದನ್ನು ನೋಡಿ ಸಹಿಸದಿದ್ದರೆ ಏನು ಮಾಡಬೇಕು, ಹೇಳು. ಇದಕ್ಕೂ ಅನೇಕ ಸಲ ತಕರಾರು ಆಗಿದೆ. ನೀನು ಮಲಗಿಕೊಳ್ಳುವಾಗ ದೀಪವನ್ನು ಆರಿಸಿ ಬಿಡು, ಸೋದರಿ. ನಾನು ಹೊರಡುತ್ತೇನೆ."

ಸುಮಿತ್ರಾ ಹೊರಟು ಹೋದಳು. ಪೂರ್ಣಾ ದೀಪವನ್ನಾರಿಸಿ ಮಲಗಿಕೊಂಡಳು; ಆದರೆ ಅವಳಿಗೆ ನಿದ್ದೆಯೆಲ್ಲಿಂದ ಬರಬೇಕು? ಇಂದೇ ಅವಳು ಈ ಮನೆಗೆ ಕಾಲಿಟ್ಟಿದ್ದಳು ಮತ್ತು ಇಂದೇ ಅವಳಿಗೆ ತನ್ನ ಆತುರಕ್ಕಾಗಿ ವ್ಯಥೆಯಾಗುತ್ತಿತ್ತು. ಇಲ್ಲಿ ತಾನು ಬಹಳ ದಿನಗಳ ವರೆಗೆ ನಿಲ್ಲಲಾರೆನೆಂಬುದು ಅವಳಿಗೆ ಖಚಿತವಾಯಿತು.

೬

ಲಾಲಾ ಬದರೀಪ್ರಸಾದರಿಗೆ ಅಮೃತರಾಯನೊಡನೆ ಈಗ ಯಾವ ವಿಧವಾದ ಸಂಪರ್ಕವನ್ನಿಟ್ಟುಕೊಳ್ಳುವುದೂ ಸಾಧ್ಯವಿರಲಿಲ್ಲ. ಹೀಗಿರುವಾಗ ವಿವಾಹದ ಪ್ರಶ್ನೆಯಂತೂ ದೂರದ ವಿಷಯವಾಗಿತ್ತು. ಸಮಾಜದಲ್ಲಿ ಭಯಂಕರವಾದ ಅನಾಚಾರದ ಪಕ್ಷವನ್ನು ವಹಿಸಿದ್ದರಿಂದ ಅಮೃತರಾಯನು ಅವರ ದೃಷ್ಟಿಯಲ್ಲಿ ಕೀಳಾಗಿದ್ದನು. ಈಗ ಅವನೊಡನೆ ಯಾವ ವಿಧವಾದ ಸಂಬಂಧ ಬೆಳೆಸುವುದೂ ಬದರೀಪ್ರಸಾದರಿಗೆ ಕಳಂಕಪ್ರಾಯವಾಗಿತ್ತು. ಅಮೃತರಾಯನನ್ನು ಬಿಟ್ಟರೆ ದಾನನಾಥನಿಗಿಂತಲೂ ಉತ್ತಮ ವರನು ಅವರಿಗೆ ಬೇರೆ ಯಾರೂ ಕಾಣಿಸಲಿಲ್ಲ. ಹೆಚ್ಚು ಹುಡುಕೋಣವೆಂದರೆ ಈಗ ಅವರಿಗೆ ಸಮಯವೂ ಇರಲಿಲ್ಲ. ಅಮೃತರಾಯನ ನಿರೀಕ್ಷಣೆಯಲ್ಲಿ ಮೊದಲೇ ಬಹಳ ಸಾವಕಾಶವಾಗಿತ್ತು. ಬಂಧುಗಳೆಲ್ಲರೂ ಆಗಲೇ ಮೂಗು ಮುರಿಯಲಾರಂಭಿಸಿದ್ದರು. ಹೊಸ ಸಂಬಂಧವನ್ನು ಹುಡುಕಲು ಹೊರಟರೆ ವಿವಾಹವು ಒಂದು ಅನಿರ್ದಿಷ್ಟ ಸಮಯದವರೆಗೂ ಮುಂದೆ ಹೋಗುವದೆಂಬ ಭಯವೂ ಇತ್ತು. ಆದ್ದರಿಂದ ಮನಸ್ಸನ್ನು ಅತ್ತಿತ್ತ ಹೊರಳಿಸದೆ ಅವರು ದಾನನಾಥನನ್ನೇ ಒಪ್ಪಿಸಬೇಕೆಂದು ನಿಶ್ಚಯಿಸಿದರು. ದೇವಕಿಯೂ ಕೂಡ ಏನೂ ಅಡ್ಡಿ ಮಾಡಲಿಲ್ಲ. ಪ್ರೇಮಾ ಈ ವಿಷಯದಲ್ಲಿ ತನ್ನ ಅಸಮ್ಮತಿಯನ್ನು ಸೂಚಿಸಿದಳು. ಈಗ ಅವಳಿಗೆ ಎಲ್ಲಾ ಪುರುಷರು ಸಮಾನರು. ಅವಳು ಯಾರನ್ನಾದರೂ ಕೈಹಿಡಿದು ಬಾಳಬಹುದಾಗಿತ್ತು. ಅವಳ ಇಷ್ಟಕ್ಕೆ ಯಾರೂ ಅಡ್ಡಿ ಬರದಿದ್ದರೆ ಅವಳು ಅವಿವಾಹಿತಳಾಗಿಯೇ ಇರುತ್ತಿದ್ದಳು. ಆದರೆ ವಯಸ್ಸಿಗೆ ಬಂದ ಮಗಳು ಮನೆಯಲ್ಲಿ ಕುಳಿತಿರುವುದು ವಂಶ ಗೌರವಕ್ಕೆ ಕಳಂಕಾಸ್ಪದವಾಗಿತ್ತು. ಆದ್ದರಿಂದ ಅವಳು ಯಾವ ರೀತಿಯಿಂದಲಾದರೂ ಹಠ ಸಾಧಿಸಿ ತನ್ನ ತಾಯಿ ತಂದೆಯರ ಮನಸ್ಸನ್ನು ನೋಯಿಸಲು ಇಷ್ಟಪಡುತ್ತಿರಲಿಲ್ಲ.

ಅಮೃತರಾಯನು ಭಯಂಕರ ಪ್ರತಿಜ್ಞೆ ಮಾಡಿದ ದಿನವೇ ಪ್ರೇಮಾ ತನ್ನ ಜೀವನದ ಸುಖವು ನಾಶವಾಯಿತೆಂದು ಅರಿತಿದ್ದಳು. ಆದರೆ ಜೀವನ ಪರ್ಯಂತ ಅವಿವಾಹಿತಳಾಗಿದ್ದುಕೊಂಡು ಪರನಿಂದೆಗೆ ಗುರಿಯಾಗಿ ಬಾಳುವುದಕ್ಕಿಂತಲೂ

ಯಾವನಾದರೊಬ್ಬನ ಕೈಹಿಡಿದು ಹೇಗೋ ಜೀವನ ಸಾಗಿಸುವುದು ಸುಲಭವಾಗಿತ್ತು. ಎರಡು ಮೂರು ವರ್ಷಗಳ ಹಿಂದೆಯೇ ಅವಳನ್ನು ದಾನನಾಥನಿಗೆ ಕೊಟ್ಟು ಮದುವೆ ಮಾಡಬೇಕೆಂಬ ಮಾತುಕತೆ ನಡೆಯುತ್ತಿತ್ತು. ಇದು ಅವಳಿಗೂ ಗೊತ್ತಿತ್ತು. ಈ ಮಧ್ಯೆ ಪರಿಸ್ಥಿತಿಯೂ ಬದಲಾಯಿಸದಿದ್ದರೆ, ಈಗ ಅವಳು ದಾನನಾಥನ ಮನೆಯಲ್ಲಿರುತ್ತಿದ್ದಳು. ಅವಳು ದಾನನಾಥನನ್ನು ಅನೇಕ ಸಲ ನೋಡಿದ್ದಳು. ಅವನು ರಸಿಕ, ಸಜ್ಜನ ಮತ್ತು ವಿದ್ವಾಂಸನೆಂಬುದು ಅವಳಿಗೆ ಗೊತ್ತಿತ್ತು. ಅವನ ಶೀಲ, ಸದಾಚಾರಗಳ ವಿಷಯದಲ್ಲಿಯೂ ಯಾರೂ ಶಂಕಿಸುವಂತಿರಲಿಲ್ಲ. ನೋಡುವುದಕ್ಕೂ ಅವನು ದೃಢ ಕಾಯನೂ ಸುಂದರನೂ ಆಗಿದ್ದನು. ಬ್ರಹ್ಮಚರ್ಯೆಯ ಕಾಂತಿಯು ಅವನ ಮುಖಮಂಡಲದಲ್ಲಿ ಮಿಂಚಿನಂತೆ ಹೊಳೆಯುತ್ತಿತ್ತು. ಅವನು ತನ್ನಲ್ಲಿ ಅನುರಕ್ತನಾಗಿದ್ದಾನೆ ಎಂಬ ವಿಷಯವೂ ಅವಳಿಗೆ ತಿಳಿಯದಿರಲಿಲ್ಲ. ಕಂಗಳು ಹೃದಯದ ಗುಟ್ಟನ್ನು ಬಯಲಿಗೆಳೆಯುತ್ತವೆ. ಅಮೃತರಾಯನು ವಿನೋದಾರ್ಥವಾಗಿ ಈ ವಿಷಯವಾಗಿ ಚರ್ಚಿಸಿಯೂ ಇದ್ದನು. ಇಷ್ಟೆಲ್ಲಾ ಆಗಿದ್ದರೂ ಪ್ರೇಮಾಗೆ ದಾನನಾಥನ ವಿಷಯದಲ್ಲಿದ್ದ ಸ್ವಲ್ಪ ಅಭಿಮಾನವೂ ಕೂಡ ಅವನು ಅಮೃತರಾಯನ ಪ್ರಾಣಸಖನಾಗಿದ್ದಾನೆಂಬ ಒಂದೇ ಒಂದು ಕಾರಣದಿಂದ. ಅವರಲ್ಲಿ ಗಾಢವಾದ ಮೈತ್ರಿ ಇತ್ತು. ಅವನು ಧನಿಕನಾಗಿರಲಿಲ್ಲ. ಆದರೆ ಇದು ದೋಷವೆಂದು ಹೇಳುವಂತಿರಲಿಲ್ಲ. ಏಕೆಂದರೆ ಪ್ರೇಮಾ ವಿಲಾಸಿನಿಯಾಗಿರಲಿಲ್ಲ. ಅವಳ ಮನಸ್ಸು ಅಮೃತರಾಯನ ಕಡೆಗೇ ಓಡುತ್ತಿತ್ತು; ದಾನನಾಥನ ಕಡೆಯಿಂದ ಹಿಮ್ಮೆಟ್ಟುತ್ತಿತ್ತು. ಇದಕ್ಕೆ ಸರಿಯಾದ ಕಾರಣವನ್ನು ಸ್ಪಷ್ಟಪಡಿಸಲು ಪ್ರೇಮಾ ಅಸಮರ್ಥಳಾಗಿದ್ದಳು. ಆದರೆ ಈ ಪರಿಸ್ಥಿತಿಯಲ್ಲಿ ಅವಳಿಗೆ ಬೇರೆ ಉಪಾಯವೇ ಇರಲಿಲ್ಲ. ಇದೂ ಅಲ್ಲದೆ ಅವಳು ಇದುವರೆಗೂ ದಾನನಾಥನನ್ನು ಎಂದೂ ಈ ದೃಷ್ಟಿಯಿಂದ ನೋಡಿಯೇ ಇರಲಿಲ್ಲ. ಅವಳು ಮನಸ್ಸಿನಲ್ಲಿ ಒಂದು ಸಂಕಲ್ಪ ಮಾಡಿಕೊಂಡಿದ್ದಳು. ಈಗ ಹೃದಯದಲ್ಲಿನ ಆ ಸ್ಥಾನವು ಬರಿದಾದ ನಂತರ ದಾನನಾಥನನ್ನೇ ಅಲ್ಲಿ ಪ್ರತಿಷ್ಠಿಸಲು ಅವಳಿಗೆ ಯಾವ ನಷ್ಟವೂ ಕಾಣಿಸಲಿಲ್ಲ. ಬಹಳ ಆಳವಾಗಿ ಆಲೋಚಿಸಿದ ನಂತರ, ತಾನು ದಾನನಾಥನನ್ನು ಪ್ರೇಮಿಸಬಲ್ಲೆನೆಂಬ ಲಘು ಭಾವನೆಯೂ ಅವಳ ಮನಸ್ಸಿನಲ್ಲಿ ಸುಳಿಯಿತು. ಬದರೀಪ್ರಸಾದರು ವಿವಾಹದ ವಿಷಯದಲ್ಲಿ ಅವಳ ಅನುಮತಿಯು ಅವಶ್ಯಕ

ವೆಂದು ತಿಳಿದಿದ್ದನು. ಎಷ್ಟೋ ವಿಷಯಗಳಲ್ಲಿ ಅವರು ಬಹಳ ಉದಾರಿಗಳಾಗಿದ್ದರು. ಪ್ರೇಮಾಳ ಅನುಮತಿಯನ್ನು ಪಡೆಯುತ್ತಲೇ ಅವರು ದಾನನಾಥನ ಬಳಿಗೆ ಸಂದೇಶವನ್ನು ಕಳುಹಿಸಿದರು.

ದಾನನಾಥನು ಈಗ ಇಕ್ಕಟ್ಟಿಗೆ ಸಿಕ್ಕಿಕೊಂಡನು. ಈ ಸಂದೇಶವನ್ನು ಪಡೆದು ಅವನಿಗೆ ಮೇರೆ ಮೀರಿದಷ್ಟು ಆನಂದವಾಗಬೇಕಾಗಿತ್ತು; ಆದರೆ ಹೀಗಾಗಲಿಲ್ಲ. ಅವನು ತನ್ನ ಸಮ್ಮತಿಯನ್ನು ಬರೆದು ಕಳುಹಿಸಲು ಒಂದು ವಾರಕ್ಕಿಂತ ಹೆಚ್ಚು ಕಾಲ ಬೇಕಾಯಿತು. ಅವನ ಮನಸ್ಸಿನಲ್ಲಿ ವಿಧವಿಧವಾದ ಸಂಶಯ ತರಂಗಗಳೇಳುತ್ತಿದ್ದವು—"ನಾನು ಪ್ರೇಮಾಳನ್ನು ಪ್ರಸನ್ನಗೊಳಿಸ ಬಲ್ಲೆನೆ? ಅವಳ ಮನವನ್ನು ಒಲಿಸಿಕೊಳ್ಳಬಲ್ಲೆನೆ? ಹಾಗೆ ಮಾಡದಿದ್ದರೆ ಜೀವನವೇ ಭಾರವಾಗಬಹುದು." ಅವನ ಮನಸ್ಸು ಈ ಪ್ರಶ್ನೆಗಳಿಗೆಲ್ಲಾ ಸಂತೋಷಜನಕವಾದ ಉತ್ತರ ಕೊಡುತ್ತಿತ್ತು. ಪ್ರೇಮದಲ್ಲಿ ಪ್ರೇಮವನ್ನು ಆಕರ್ಷಿಸುವ ಶಕ್ತಿ ಇದ್ದರೆ, ಅವನು ನಿಸ್ಸಂದೇಹವಾಗಿಯೂ ಜಯಶೀಲನಾಗ ಬಲ್ಲ. ಆದರೆ ಔಚಿತ್ಯದ ಒರೆಗಲ್ಲಿನಲ್ಲಿ ಒರೆಹಚ್ಚಿ ನೋಡಿದರೆ, ಅವನಿಗೆ ತನ್ನ ವ್ಯವಹಾರವು ಮೈತ್ರಿಗೆ ಮಾತ್ರವೇ ಅಲ್ಲ. ಸೌಜನ್ಯತೆಗೂ ಪ್ರತಿಕೂಲವಾಗಿ ಕಾಣುತ್ತಿತ್ತು. ತನ್ನ ಪ್ರಾಣಕ್ಕಿಂತಲೂ ಪ್ರಿಯನಾದ ಗೆಳೆಯನ ತ್ಯಾಗದಿಂದ ತಾನು ಲಾಭ ಪಡೆಯುವ ವಿಚಾರವು ಅವನನ್ನು ಕಾತುರಗೊಳಿಸುತ್ತಿತ್ತು. ತನ್ನ ಮನೆಗೆ ಬೆಂಕಿ ಬಿದ್ದಿದೆ, ತಾನು ಅದರಲ್ಲಿ ಬೆಂದು ಹೋಗುತ್ತಿದ್ದೇನೆಯೋ ಎನಿಸುತಿತ್ತು ಅವನಿಗೆ. ತಾನು ಪ್ರೇಮಾಳನ್ನು ಪ್ರೀತಿಸುವಷ್ಟು ಅಮೃತರಾಯನು ಅವಳನ್ನು ಪ್ರೀತಿಸುವದಿಲ್ಲವೆಂಬಂಶವೂ ಅವನಿಗೆ ತಿಳಿದಿತ್ತು. ಅವಳಿಲ್ಲದ ಅವನ ಜೀವನವು ಶೂನ್ಯ ಮತ್ತು ಉದ್ದೇಶರಹಿತವೆಂಬಂತೆ ಕಾಣುತ್ತಿತ್ತು. ಅವನು ಕುಟುಂಬ ಪ್ರೇಮಿ; ಸೇವಾ, ಪ್ರಚಾರ ಮತ್ತು ಚಳವಳಿಗಳು ಅವನ ಸ್ವಭಾವಕ್ಕೆ ಅಂಟಿರಲಿಲ್ಲ. ಅವನಿಗೆ ಕೀರ್ತಿಯ ಅಭಿಲಾಷೆಯೂ ಇರಲಿಲ್ಲ, ಆದರೆ ಅವನು ಪೂರ್ಣ ನಿಷ್ಕಾಮಿಯೆಂದು ಹೇಳುವಂತೆಯೂ ಇರಲಿಲ್ಲ.

ಬಹಳ ಆಲೋಚಿಸಿದನಂತರ ಕಡೆಯ ಸಾರಿ ಈ ವಿಷಯವಾಗಿ ಪರೀಕ್ಷಿಸಿ ನೋಡಬೇಕೆಂಬ ಅಂತಿಮ ನಿರ್ಧಾರಕ್ಕೆ ಬಂದನು. ಈಗಲೂ ಅವನು ತನ್ನ

ಅಭಿಮತವನ್ನು ಬದಲಾಯಿಸಿದರೆ, ಇದರಿಂದ ಅವನಿಗೆ ಸಂತೋಷವಾಗುತ್ತಿ ತ್ತೆಂಬುದರಲ್ಲಿ ಸಂದೇಹವೇ ಇರಲಿಲ್ಲ. ಜೀವನದ ಸುಖವು ಅಭಿಲಾಷೆಯಲ್ಲಿಯೇ ಅಡಗಿರುತ್ತದೆ. ಈ ಅಭಿಲಾಷೆಯು ಪೂರ್ಣವಾಯಿತೆಂದರೆ ಬೇರೊಂದು ಎದು ರಿಗೆ ಬಂದು ನಿಲ್ಲುವುದು ಖಂಡಿತ. ಯಾವುದಾದರೊಂದು ಅಭಿಲಾಷೆಯಿರು ವುದು ನಿಶ್ಚಿತವಾದ್ದರಿಂದ ಈಗಿರುವುದೇ ಏಕಾಗಬಾರದು? ಇದಕ್ಕಿಂತ ಸುಂದರ ಮತ್ತು ಆಹ್ಲಾದಕರವಾದ ಸುಖ ಮತ್ತಾವುದಿರುವುದು? ಇದೂ ಅಲ್ಲದೆ ಜೀವನದ ಈ ಅಭಿನಯವು ಎಲ್ಲಿಯಾದರೂ ವಿಯೋಗದಲ್ಲಿ ಕೊನೆಗಾ ಣುವುದೇನೋ ಎಂಬ ಭಯವೂ ಇತ್ತು. ಪ್ರಥಮ ಪ್ರೇಮವು ಅಮರವಾದು ದೆಂಬುದು ಅವನಿಗೆ ಚೆನ್ನಾಗಿ ತಿಳಿದಿತ್ತು.

ಇತ್ತೀಚೆಗೆ ಕಾಲೇಜು ಮುಚ್ಚಿತ್ತು. ಆದರೆ ದಾನನಾಥನು ಡಾಕ್ಟ ರೇಟ್ ಪಡೆಯಲು ಒಂದು ಗ್ರಂಥರಚನೆಯಲ್ಲಿ ತೊಡಗಿದ್ದನು. ಭೋಜನ ವನ್ನು ಮುಗಿಸಿಕೊಂಡು ಕಾಲೇಜಿಗೆ ಹೊರಟು ಹೋಗುತ್ತಿದ್ದನು. ಅವನು ಪುಸ್ತಕಾಲಯಕ್ಕೆ ಹೋಗಿ ಕುಳಿತನೆಂದರೆ, ಅಲ್ಲಿನ ಅನುಕೂಲತೆಗಳು ಅವನಿಗೆ ಲಭಿಸುವಂತಿರಲಿಲ್ಲ. ಇಂದು ಹಗಲೆಲ್ಲಾ ಅವನು ಪುಸ್ತಕಾಲಯಕ್ಕೆ ಹೋಗಿ ಕುಳಿತಿದ್ದನು; ಆದರೆ ಒಂದು ಅಕ್ಷರ ಬರೆಯಲಿಲ್ಲ, ಒಂದು ಸಾಲು ಓದಲಿಲ್ಲ. ಬಹಳ ದಿನಗಳಿಂದ ಮುಂದಕ್ಕೆ ಹಾಕುತ್ತಿದ್ದ ದುಸ್ತರ ಕೆಲಸವನ್ನು ಈ ದಿನ ಮಾಡಬೇಕೆಂದು ಅವನು ನಿಶ್ಚಯಿಸಿದನು. ಏನೇನು ಮಾತುಗಳಾಗ ಬಹುದೋ ಎಂದು ಯೋಚಿಸುತ್ತಾ ಅವನು ಅಮೃತರಾಯನ ಬಂಗಲೆಯ ಕಡೆಗೆ ನಡೆದನು. ಸೂರ್ಯದೇವನು ಗಿಡಮರಗಳ ಮೇಲೆ ತನ್ನ ಕೊನೆಯ ಸುವರ್ಣ ರಶ್ಮಿಗಳನ್ನು ಎರಚುತ್ತಾ ನಡೆದಿದ್ದನು. ಮನೆಯ ಮುಂದೆ ಕುದುರೆ ಗಾಡಿ ಸಿದ್ಧವಾಗಿ ನಿಂತಿತ್ತು; ಆದರೆ ಅಮೃತರಾಯನ ಸುಳಿವೇ ಇರಲಿಲ್ಲ. ಆಳನ್ನು ಕೇಳುವಲ್ಲಿ, ಅವನು ಕೊಠಡಿಯಲ್ಲಿರುವುದಾಗಿ ತಿಳಿಯಿತು. ರೂಮಿನ ಪರದೆಯನ್ನು ಸರಿಸುತ್ತಾ ಹೇಳಿದನು— "ಭೇಷ್! ಎಂತಹ ಮನುಷ್ಯನಯ್ಯಾ! ನಿನಗೆ ಶಕೆಯೂ ಆಗುವುದಿಲ್ಲವೇ? ಇಲ್ಲಿ ಉಸಿರಾಡಿಸುವುದೂ ಕಷ್ಟವಾಗಿದೆ. ನೀನು ಇಲ್ಲಿ ಕುಳಿತುಕೊಂಡು ತಪಸ್ಸು ಮಾಡುತ್ತಿದ್ದೀಯೆ." ಸೂರ್ಯರಶ್ಮಿಯ ಸೂಕ್ಷ್ಮರೇಖೆಯೊಂದು ಕಿಂಡಿಯ ಮೂಲಕ ಅಮೃತರಾಯನ ಮುಖದ ಮೇಲೆ ಬಿತ್ತು. ಅಮೃತರಾಯನು ಬೆಚ್ಚಿ ಬಿದ್ದನು. ಅವನ ಮುಖವು ಹಳದಿವರ್ಣಕ್ಕೆ

ತಿರುಗುತ್ತಾ ಬಂತು. ಎಂಟು ಹತ್ತು ದಿನಗಳ ಮುಂಚೆ ಅವನ ಮುಖದಲ್ಲಿ ರಾಜಿಸುತ್ತಿದ್ದ ಕಾಂತಿಯ ಒಂದಂಶವೂ ಅಲ್ಲಿರಲಿಲ್ಲ. ಗಾಬರಿಯಿಂದ ಕೇಳಿದನು— "ನಿನ್ನ ಸ್ಥಿತಿ ಹೀಗೇಕೆ ಆಗಿದೆ ? ಏನಾದರೂ ಬಿಸಿಲ ಝಳ ತಾಕಿತೇ? ನಿನ್ನ ದೇಹಸ್ಥಿತಿ ಹೇಗಿದೆ ?"

ಅಮೃತರಾಯನು ದಾನನಾಥನನ್ನು ಆಲಿಂಗಿಸಿಕೊಂಡು ಹೇಳಿದನು— "ನೀನು ನನ್ನನ್ನು ನೋಡಿ, ಇಂದು ನೀನು ತುಂಬಾ ಆನಂದದಲ್ಲಿದ್ದೀಯೆ ಎಂದು ಹೇಳಿದ ದಿನವೂ ಉಂಟೆ ? ನಿನಗೆ ನಾನು ಯಾವಾಗಲೂ ರೋಗಿಯಂತೆಯೇ ಕಾಣಿಸುವುದು. ಪ್ರತಿಸಲವೂ ಮೊದಲಿಗಿಂತ ಹೆಚ್ಚೇ. ನಾನು ಹೇಗೆ ಬದುಕಿರುವೆನೋ, ದೇವರಿಗೇ ಗೊತ್ತು."

ದಾನನಾಥನು ನಕ್ಕನು, ಆದರೆ ಅಮೃತರಾಯ ನಗಲಿಲ್ಲ. ಗಾಂಭೀರ್ಯ ಧ್ವನಿಯಲ್ಲಿ ಹೇಳಿದನು— "ಪ್ರಪಂಚದಲ್ಲಿರುವ ಸಿದ್ಧಾಂತಗಳನ್ನೆಲ್ಲಾ ಜಾಲಾಡಿಸಿದ್ದೀಯೆ. ಈಗಲೂ ನೀನು ಆರೋಗ್ಯರಕ್ಷಣೆಯ ವಿಷಯವಾಗಿ ಮಾತನಾಡತೊಡಗಿದೆಯೆಂದರೆ, ಪಂಡಿತರೂ ಕೂಡ ನಾಚಿಕೆಪಡುವರು. ಆದರೆ ಸಾಯಂಕಾಲದ ವೇಳೆಯಲ್ಲಿ ಶುದ್ಧ ವಾಯುವಿನಲ್ಲಿ ಸುತ್ತಾಡುವುದೂ ನಿನ್ನಿಂದ ಸಾಧ್ಯವಿಲ್ಲವೆ ?"

ದಾನನಾಥನು ನಗುತ್ತ ಹೇಳಿದನು— "ನನ್ನ ಬಳಿ ಸಾರೋಟಿದ್ದರೆ ದಿನವೆಲ್ಲಾ ಸುತ್ತುತ್ತಿದ್ದೆ. ಕುದುರೆಗೂ ತಾನು ಎಂಥವನಿಗೆ ಗಂಟುಬಿದ್ದೆನೆಂಬುದರ ಅರಿವಾಗುತ್ತಿತ್ತು. ಕಾಲು ನಡಿಗೆಯ ವಿಹಾರದಿಂದ ನನಗೆ ಆನಂದವಾಗುವುದಿಲ್ಲ. ಈಗ ಸಿಗರೇಟ್-ಚುಟ್ಟಾಗಳೇನಾದರೂ ಇದ್ದರೆ ಕೊಡುವೆಯೋ ಅಥವಾ ಮುದಿಗೊಡ್ಡುಗಳಂತೆ ಬಯ್ಯುತ್ತಲೇ ಇರುವೆಯೋ ? ನೀನು ಜಗತ್ತಿನಲ್ಲಿ ಇನ್ನೂ ದೊಡ್ಡ ದೊಡ್ಡ ಕೆಲಸಗಳನ್ನು ಮಾಡಬೇಕಾಗಿದೆ, ದೇಹರಕ್ಷಣೆಯ ಕಡೆಗೆ ಹೆಚ್ಚು ನಿಗಾ ಕೊಡು. ನೀನೊಬ್ಬನೇ ಪ್ರಪಂಚವನ್ನು ಉದ್ಧಾರ ಮಾಡುವೆನೆಂದು ಪಣ ತೊಟ್ಟಿರುವಂತೆ ಕಾಣುತ್ತೆ. ಇಲ್ಲೇನಿದೆ, ಒಂದು ದಿವಸ ಸುಮ್ಮನೆ ಹೊರಟು ಹೋಗುವುದು ತಾನೆ ! ನಾನು ಸಂಯಮಿಯಾಗಿರಬೇಕೆಂದು ಇಷ್ಟ; ಆದರೆ ಅದನ್ನು ನಿಭಾಯಿಸಲು ಎಲ್ಲಿ ಸಾಧ್ಯ ! ಎಷ್ಟೋ ಸಾರಿ ದಂಡೆಯೊತ್ತುವುದು, ಗದೆ ತಿರುಗಿಸುವುದು ಮತ್ತು ಡಂಬಲ್ ಒತ್ತುವ ಅಂಗಸಾಧನೆಯ ವಿವಿಧ ಕ್ರಿಯೆಗಳನ್ನು ಆರಂಭಿಸಿದೆ; ಆದರೆ ಅವುಗಳನ್ನು ಮುಂದು

ವರಿಸಿಕೊಂಡು ಹೋಗಲು ನನ್ನಿಂದ ಎಂದೂ ಸಾಧ್ಯವಾಗಲಿಲ್ಲ. ನಾನು ಆರೋಗ್ಯಶಾಲಿಯಾಗಿರಲು ಹುಟ್ಟಿಲ್ಲವೆಂದೇ ಕೊನೆಗೆ ತಿಳಿದುಕೊಂಡೆ. ಹೀಗಿರುವಲ್ಲಿ ಅದಕ್ಕಾಗಿ ನಾನೇಕೆ ವ್ಯರ್ಥವಾಗಿ ಒದ್ದಾಡಲಿ? ರೋಗಿಗಳ ಆಯುಸ್ಸು ದೀರ್ಘವಾಗಿರುತ್ತೆ ಎಂಬುದು ಮಾತ್ರ ನನಗೆ ಗೊತ್ತು. ನೀನು ವರ್ಷಕ್ಕೊಮ್ಮೆ ಮಲೇರಿಯಾ ಬಂದಾಗ ಸತ್ತು ಸತ್ತು ಬದುಕುತ್ತೀಯೆ. ನಿನಗೆ ಜ್ವರ ಬಂತು ಎಂದರೆ ತಕ್ಷಣ ೧೦೬ ಡಿಗ್ರಿಗೇ ಏರೋದು. ನನಗಾದರೋ ಜ್ವರ ಬರುವುದೇ ಇಲ್ಲ, ಬಂದರೂ ಕೂಡ ೧೦೧ ಡಿಗ್ರಿಗಿಂತ ಅಧಿಕವಾಗಿರಲಾರದು. ನೋಡುತ್ತಿರು, ನೀನೇ ನನಗಿಂತ ಮೊದಲು ಈ ಲೋಕ ಬಿಡುವವನು. ನಿನ್ನ ಮಡಿಲಿನಲ್ಲಿಯೇ ತಲೆಯಿಟ್ಟು ಪ್ರಾಣ ಬಿಡಬೇಕೆಂಬುದು ನನ್ನ ಹಾರ್ದಿಕ ಇಚ್ಛೆ! ನಿನ್ನ ಕಣ್ಮುಂದೆಯೇ ನಾನು ಕಣ್ಮುಚ್ಚಿದೆನೆಂದರೆ, ನೀನು ಖಂಡಿತವಾಗಿಯೂ ನನಗಾಗಿ ಸ್ಮಾರಕವನ್ನು ನಿರ್ಮಿಸಬೇಕು. ನಿನಗಾಗಿ ಸ್ಮಾರಕ ನಿರ್ಮಿಸುವವರು ಬಹಳ ಮಂದಿ ಹುಟ್ಟಿಕೊಳ್ಳುವರು; ಆದರೆ ನನಗೆ ನೀನೊಬ್ಬನೇ ಆಧಾರ. ನನ್ನ ಮಹತ್ವವನ್ನು ನಿನ್ನನ್ನು ಬಿಟ್ಟು ಅನ್ಯರಾರೂ ಅರಿಯರು."

ಈ ಉಚ್ಛೃಂಕಲ ಶಬ್ದಗಳಲ್ಲಿ ವಿನೋದದೊಡನೆ ಎಷ್ಟು ಆತ್ಮೀಯತೆ ಎಷ್ಟು ಗಾಢ ಸ್ನೇಹ ಅಡಗಿತ್ತು! ಕೇಳುತ್ತಾ ಕೇಳುತ್ತಾ ಇಬ್ಬರು ಗೆಳೆಯರ ಕಣ್ಣುಗಳೂ ಒದ್ದೆಯಾದುವು. ದಾನನಾಥನೇನೋ ನಸುನಕ್ಕನು. ಆದರೆ ಅಮೃತರಾಯನ ಮುಖವು ಗಂಭೀರವಾಯಿತು. ದಾನನಾಥನು ನಗುತ್ತಿದ್ದರೂ ಅವನ ವಿನೋದದ ಶೈಲಿಯು ಯಾವುದೋ ಆಂತರಿಕ ವೇದನೆಯನ್ನು ಹೊರಸೂಸುತ್ತಿತ್ತು.

ಅಮೃತರಾಯನು ಕೇಳಿದನು—"ಲಾಲಾ ಬದರೀಪ್ರಸಾದರ ಮನೆಯಿಂದ ಯಾವುದಾದರೂ ವಿಶೇಷ ವಾರ್ತೆ ತಿಳಿಯಿತೇ? ನೀನಂತೂ ಬಹಳ ದಿನಗಳಿಂದ ಇತ್ತ ಕಡೆ ಬಂದೇ ಇಲ್ಲ. ಅಲ್ಲಿ ನಿನ್ನ ಪ್ರಭಾವ ಹೆಚ್ಚುತ್ತಿದೆಯೆಂದು ನಾನೂ ಆ ಕಡೆ ಹೋಗಲಿಲ್ಲ."

ಅಮೃತರಾಯನು ಈ ಪ್ರಸ್ತಾಪ ಮಾಡಿದ್ದು ದಾನನಾಥನಿಗೆ ಮಹೋಪಕಾರವಾದಂತಾಯಿತು. ಇಲ್ಲದಿದ್ದರೆ ಗಂಟೆಗಟ್ಟಲೆ ಹರಟೆ ಹೊಡೆಯುತ್ತಿದ್ದರೂ ಅವನ ಬಾಯಿಂದ ಈ ಮಾತು ಹೊರಡುತ್ತಲೇ ಇರಲಿಲ್ಲ. ಈಗಲೂ ಅವನ ಮುಖಭಾವನೆಯಿಂದ ಈ ವಿಷಯ ಇಲ್ಲಿ ಚರ್ಚೆಗೆ ಬಂದುದು ಅನುಚಿತವೆಂದು

ವ್ಯಕ್ತವಾಗುತ್ತಿತ್ತು. ಬಹಳ ಸಂಕೋಚದಿಂದ ಉತ್ತರಿಸಿದನು— "ಹೌದು, ಸಂದೇಶವೇನೋ ಬಂದಿದೆ; ಆದರೆ ನಾನು ಅದಕ್ಕೆ ತಕ್ಕ ಉತ್ತರ ಕಳುಹಿಸಿದೆ."

ಅಮೃತರಾಯನು ಗಾಬರಿಯಿಂದ ಕೇಳಿದನು— "ಏನು ಉತ್ತರವಿತ್ತೆ?"

ದಾನ:— "ನನ್ನ ಮನಸ್ಸಿಗೆ ಬಂದದನ್ನು ಹೇಳಿ ಕಳುಹಿಸಿದೆ."

"ನಿನ್ನ ಮನಸ್ಸಿನ ಅಭಿಪ್ರಾಯವೇನು ಎಂಬುದನ್ನು ನಾನೂ ಕೇಳಬಹುದೇ?"

"ನನಗೆ ಒಪ್ಪಿಗೆಯಿಲ್ಲ ಅಂತ. ಅಷ್ಟೆ."

"ಇದೇಕಯ್ಯಾ, ಪ್ರೇಮಾ ನಿನಗನುರೂಪಳಲ್ಲವೇ?"

"ಆ ವಿಷಯವೇನೂ ಇಲ್ಲ, ನಾನೇ ಅವಳಿಗನುರೂಪನಲ್ಲ."

ಅಮೃತರಾಯನು ತೀವ್ರ ಸ್ವರದಲ್ಲಿ ಹೇಳಿದನು— "ಅವಳಿಗೆ ಅನುರೂಪನಲ್ಲದಿದ್ದರೆ ಇಷ್ಟು ದಿನಗಳ ವರೆಗೆ ಅವಳಿಗಾಗಿ ತಪಸ್ಸು ಮಾಡುತ್ತಿರುವುದೇಕೆ? ಈ ಮಧ್ಯೆ ನಾನು ಪ್ರವೇಶಿಸದಿದ್ದರೆ ನಿಸ್ಸಂದೇಹವಾಗಿಯೂ ಅವಳೊಡನೆ ನಿನ್ನ ಲಗ್ನವಾಗುತ್ತಿರಲಿಲ್ಲವೇ? ನೀನು ಅವಳಿಗಾಗಿ ಹಂಬಲಿಸುತ್ತಾ ನಿನ್ನ ಜೀವನವನ್ನೇ ಹಾಳು ಮಾಡಿಕೊಳ್ಳುತ್ತಿರುವೆಯೆಂದು ನನಗನ್ನಿಸುತ್ತಿತ್ತು. ನೀನು ಎಷ್ಟೋ ಸಂಬಂಧಗಳನ್ನು ತಿರಸ್ಕರಿಸಿದೆ. ನಿನ್ನ ಮಾರ್ಗದಿಂದ ಹಿಮ್ಮೆಟ್ಟದ ಹೊರತು ನಿನ್ನ ಮನಸ್ಸಿಗೆ ಶಾಂತಿ ದೊರಕದು ಎಂದು ನನಗೆ ಮನವರಿಕೆಯಾಯಿತು. ಅವಳ ವಿಯೋಗದ ದುಃಖದಿಂದಲೇ ಕೃಶನಾಗಿ ಎಂದಾದರೂ ಒಂದು ದಿನ ನೀನು ನನ್ನನ್ನು ಏಕಾಂಗಿಯಾಗಿ ಬಿಟ್ಟು ಕಣ್ಮರೆಯಾಗುವೆಯೇನೋ ಎಂಬ ಭಯವೂ ಆಯಿತು ನನಗೆ. ನಾನು ನನ್ನ ಹೃದಯಾಂತರಾಳದಲ್ಲಿ ಶೋಧಿಸಿ ನೋಡಲು—ನಾನು ಈ ಪೆಟ್ಟನ್ನು ಸಹಿಸಿಕೊಳ್ಳಬಲ್ಲೆ; ಆದರೆ ನೀನು ಮಾತ್ರ ಸಹಿಸಲಾರೆ ಎಂಬ ಅನುಭವವೂ ಆಯಿತು. ನೋಡು ಮಿತ್ರ, ನಿನಗಾಗಿಯೇ ನಾನು ನನ್ನ ಮನಸ್ಸನ್ನು ಇಷ್ಟು ದೃಢಪಡಿಸಿಕೊಂಡೆನು; ನೀನು ಮಾತ್ರ ನನ್ನ ಕಣ್ಣಿಗೆ ಬೀಳದೆ ಕದ್ದು ತಿರುಗುತ್ತಿರುವೆ. ಈಗೇನಾದರೂ ನೀನು ಮೀನ-ಮೇಷ ಅನ್ನುವುದಾದರೆ, ನಾನು ನಿನ್ನನ್ನು ಕೊಂದೇ ಬಿಡುವೆನು. ನಾನು ಹೇಳುವುದನ್ನು ಕೇಳು, ಸುಮ್ಮನೆ ನನ್ನ ಕುದುರೆ ಗಾಡಿಯ ಮೇಲೆ ಕುಳಿತುಕೋ ಮತ್ತು ಹಾಗೆಯೇ ಲಾಲಾಪ್ರಸಾದರ ಮನೆಗೆ ಹೋಗಿ ಈ ವಿಷ

ಯವನ್ನು ನಿಶ್ಚಿತ ಮಾಡಿಕೊಂಡು ಬಾ."

ದಾನನಾಥನು ವಿದ್ಯುತ್ತಿನ ಗುಂಡಿಯನ್ನು ಅದುಮುತ್ತಾ ಹೇಳಿದನು—"ಈ ಕಾರ್ಯವು ನೀನು ತಿಳಿದಿರುವಷ್ಟು ಸುಲಭವಲ್ಲ. ನನಗೇಕೋ ಕಷ್ಟವಾಗಿಯೇ ತೋರುತ್ತೆ."

ಅಮೃತರಾಯನು ಸ್ನೇಹಿತನ ಮುಖವನ್ನು ಸಸ್ನೇಹ ದೃಷ್ಟಿಯಿಂದ ನೋಡುತ್ತಾ ಹೇಳಿದನು— "ಇದನ್ನು ನಾನು ಬಲ್ಲೆ. ಖಂಡಿತವಾಗಿಯೂ ಇದು ಸುಲಭವಲ್ಲ. ನಾನೇ ಮೊದಲು ಕಂಟಕಸ್ವರೂಪನಾಗಿದ್ದೆನು. ಈಗಲೂ ನಾನೇ ಬಾಧಕ; ಆದರೆ ನಾನು ಒಂದು ಸಾರಿ ಯಾವುದಾದರೂ ನಿರ್ಣಯ ಮಾಡಿದೆನೆಂದರೆ, ಅದು ಶಾಶ್ವತದಾದುದೆಂದು ತಿಳಿ. ಈಗ ವಿಧಾತನೇ ಭೂಮಿಗಿಳಿದು ಬಂದರೂ, ನನ್ನ ಪ್ರತಿಜ್ಞೆಯನ್ನು ಭಂಗಪಡಿಸಲಾರ. ಪ್ರೇಮಾಳೇ ಏಕೆ ಬೇರೆ ಯಾವ ಕನ್ಯೆಯನ್ನೂ ಮದುವೆಯಾಗುವ ಅಧಿಕಾರವು ನನಗಿಲ್ಲ ಎನಿಸುತ್ತದೆ. ಪರಮಾತ್ಮನು ಈ ಅಧಿಕಾರವನ್ನು ನನ್ನ ಕೈಯಿಂದ ಕಸಿದುಕೊಂಡನು. ಪ್ರೇಮಾಳಂತಹ ಅಲಭ್ಯ ವಸ್ತುವು ಪ್ರಾಪ್ತವಾಗಿದ್ದರೂ ಅದನ್ನು ಬಿಟ್ಟುಬಿಡುವ ತೀರ್ಮಾನದಿಂದ ಆಗುತ್ತಿರುವ ದುಃಖವನ್ನು ನಾನೇ ಬಲ್ಲೆ. ನಿನಗೂ ಸ್ವಲ್ಪ ತಿಳಿದಿರಬಹುದು. ಆದರೆ ಈ ದುಃಖದಿಂದ ನನ್ನ ಪ್ರಾಣವೇ ಹೋಗಲಿ—ಹೀಗಾಗುವ ಸಂಭವವಿಲ್ಲ, ಆದರೂ ಕೂಡ ನನ್ನ ಈ ವಿಧುರ ಜೀವನವನ್ನು ಪ್ರವೇಶಿಸಲು ಪ್ರೇಮಾಗೆ ಅವಕಾಶ ಕೊಡುವುದಿಲ್ಲ. ಈಗಲಾದರೂ ನೀನು ನನ್ನ ವಿಷಯದಲ್ಲಿ ನಿಶ್ಚಿಂತನಾದೆಯಲ್ಲವೆ ?"

ದಾನನಾಥನು ಈಗಲೂ ನಿಶ್ಚಿಂತನಾಗಿರಲಿಲ್ಲ. ಅವನ ಮನಸ್ಸಿನಲ್ಲಿ ಒಂದಲ್ಲ—ನೂರಾರು ವಿಘ್ನಗಳು ತಾಂಡವವಾಡುತ್ತಿದ್ದುವು. ಆದರೆ ಈ ನವೀನ ಶಂಕೆಯನ್ನು ಕೇಳಿ ಅಮೃತರಾಯನು ಹಾಸ್ಯ ಮಾಡುವನೆಂದು ತಿಳಿದು ತಾನೇ ನಗುತ್ತಾ ಹೇಳಿದನು— "ನನ್ನಂಥ ಪೋಲಿಯನ್ನು ಪ್ರೇಮಾ ಎಂದಾದರೂ ಸ್ವೀಕರಿಸುವಳೆ ? ಇದನ್ನೇನಾದರೂ ಯೋಚಿಸಿರುವೆಯಾ ?"

ಅಮೃತರಾಯನು ಗಹಗಹಿಸಿ ನಗುತ್ತಾ ಹೇಳಿದನು— "ಭೇಷ್ ! ನೀನು ಎಂತಹ ವಿಚಿತ್ರ ವ್ಯಕ್ತಿ ! ನಿನಗೆ ಎಂತಹ ಯುಕ್ತಿ ಹೊಳೆದಿದೆ ! ನನಗೂ ಒಪ್ಪಿಗೆ. ಅಯ್ಯೋ ಮೂರ್ಖ ಶಿಖಾಮಣಿ, ಲಾಲಾ ಬದರೀಪ್ರಸಾದರು ಯಾವಾಗ ನಿನಗೆ ಆಹ್ವಾನವಿತ್ತರೋ, ಆಗಲೇ ಅವರು ಪ್ರೇಮಾಳ ಒಪ್ಪಿಗೆ

ಯನ್ನು ಪಡೆದಿದ್ದಾರೆ ಎಂಬ ಅರ್ಥವಾಗುವುದಿಲ್ಲವೆ ? ಇದನ್ನು ನಿರ್ಣಯಿಸದೆ ಅವರು ನಿನಗೆ ಆಹ್ವಾನ ಕಳುಹುತ್ತಿರಲಿಲ್ಲ. ತಮ್ಮ ಮುದ್ದು ಕುವರಿಗೆ ಉನ್ನತ ಶಿಕ್ಷಣ ಕೊಡಿಸಿದುದರ ಪ್ರಾಯಶ್ಚಿತ್ತವನ್ನು ಅವರೂ ಮಾಡಿಕೊಳ್ಳಲೇ ಬೇಕು. ಕೆಲವು ವಿಷಯಗಳಲ್ಲಿ ಅವರು ನಮಗಿಂತ ಉದಾರಿಗಳು; ಮತ್ತೆ ಕೆಲವು ವಿಚಾರ ಗಳಲ್ಲಂತೂ ಅವರು ಶತಮೂರ್ಖರು. ಬುರಕಾ ಪದ್ಧತಿಯೆಂದರೆ ಅವರಿಗೆ ಎಲ್ಲಿಯೂ ಇಲ್ಲದ ಕೋಪ—ಇದು ನಿನಗೂ ಗೊತ್ತು. ವಿಧವಾ ವಿವಾಹವು ಅವರ ದೃಷ್ಟಿಯಲ್ಲಿ ಮಹಾ ಘೋರವಾದ ಸಾಮಾಜಿಕ ಅನಾಚಾರ. ಹೀಗಿರು ವಲ್ಲಿ ನಿನ್ನ ಈ ಶಂಕೆಯು ನಿರಾಧಾರವಾದುದು. ಪ್ರೇಮಾಳಿಗೆ ನಿನ್ನಲ್ಲಿ ಪ್ರೇಮ ವಿಲ್ಲವೇನೋ ಎಂಬ ಸಂದೇಹವುಂಟಾಗುವದೇನೋ ಸಹಜ; ಆದರೆ ಇಂತಹ ಶಂಕೆಗೆಡೆಗೊಡುವುದೇ ಪ್ರೇಮಾಳಿಗೆ ದೊಡ್ಡ ಅನ್ಯಾಯ ಮಾಡಿದಂತಾಗುತ್ತದೆ. ಅವಳು ತನ್ನ ಕುಲ-ಶೀಲಗಳಿಗಾಗಿ ಜೀವ ತೆರಬಲ್ಲ ನಿಜವಾದ ಆರ್ಯರಮಣಿ. ಪತಿಪ್ರೇಮವೇ ಅವಳು ತಿಳದುಕೊಂಡ ಪ್ರೇಮದ ನಿಜಸ್ವರೂಪ ಮತ್ತು ಅರ್ಥ. ಪ್ರೇಮದ ಬೇರಾವ ರೂಪವನ್ನೂ ಅವಳು ಅರಿಯಳು ಮತ್ತು ಅರಿತುಕೊಳ್ಳುವ ಗೋಜಿಗೂ ಹೋಗಲಾರಳು. ಅವಳು ನನ್ನನ್ನು ತನ್ನ ಭಾವೀ ಪತಿಯೆಂದು ತಿಳಿದಿದ್ದರಿಂದಲೇ ಅವಳಿಗೆ ನನ್ನಲ್ಲಿ ಪ್ರೇಮವಂಕುರಿಸಿತ್ತು. ಸರಿ, ಅವಳ ಪ್ರೇಮವು ಅವಳ ಕರ್ತವ್ಯಕ್ಕಾಧೀನವೆಂದು ತಿಳಿದುಕೊ. ನೀನು ಮನಸ್ಸಿನಲ್ಲಿ ವ್ಯರ್ಥವಾದ ಶಂಕೆಗಳಿಗೆ ಅವಕಾಶ ಕೊಟ್ಟು ದಿನಗಳೆಯುತ್ತಿರುವೆ. ಈ ಲಗ್ನ ಕಾಲವು ಕಳೆದು ಹೋಯಿತೆಂದರೆ ಪುನಃ ವರ್ಷವೆಲ್ಲಾ ಉಮ್ಮೇದುವಾರನಂತೆ ಓಡಾಡಬೇಕಾಗುವುದು.”

ದಾನನಾಥನು ಚಿಂತಾಮಗ್ನನಾದನು. ಅವನ ಸಂಶಯಗಳಿಗೆ ಸಮಾ ಧಾನವೇನೋ ದೊರಕಿತ್ತು; ಆದರೆ ಅವನು ಬಹಿರಂಗ ಪಡಿಸಲಾರದ ಎಷ್ಟೋ ವಿಷಯಗಳು ಅವನ ಮನಸ್ಸಿನಲ್ಲಿ ಅಡಗಿಕೊಂಡಿದ್ದವು. ಅವುಗಳ ಸ್ವರೂಪವು ಅವ್ಯಕ್ತವೂ ಲಕ್ಷ್ಯಹೀನವೂ ಆಗಿತ್ತು. ಸಂಶಯವು ತರ್ಕದಿಂದ ಕಡಿಮೆಯಾ ಗುವುದೇ ಹೊರತು ನಿರ್ಮೂಲವಾಗುವುದಿಲ್ಲ. ಸ್ನೇಹಿತನಿಗೆ ತಾನು ತೋರು ತ್ತಿರುವ ಕೃತಘ್ನತೆಯ ಭಾವನೆಯು ಅವನ ಮನಸ್ಸಿನಲ್ಲಿ ಸ್ಥಾಯಿಯಾಗಿ ಬೇರು ಬಿಟ್ಟಿತ್ತು. ಅದನ್ನು ಅಲ್ಲಿಂದ ಕದಲಿಸುವುದು ಕಷ್ಟಸಾಧ್ಯವಾಗಿತ್ತು.

ಇದ್ದಕ್ಕಿದ್ದಂತೆಯೇ ಅಮೃತರಾಯನು ಗಂಟೆ ಬಾರಿಸಿದನು. ಒಬ್ಬ

ವೃದ್ಧನು ಎದುರಿಗೆ ಬಂದು ನಿಂತನು. ಅಮೃತರಾಯನು ಲಾಲಾ ಬದರೀ ಪ್ರಸಾದರ ಹೆಸರಿಗೆ ಒಂದು ಪತ್ರ ಬರೆದು ದಾನನಾಥನಿಗೆ ಹೇಳಿದನು— "ಇದರ ಮೇಲೆ ನಿನ್ನ ಸಹಿ ಹಾಕು."

ದಾನನಾಥನು ಕಿಟಕಿಯ ಎದುರಿಗೆ ನಿಂತುಕೊಂಡು ಸಿಗರೇಟು ಸೇದುತ್ತಿದ್ದನು. ಕೇಳಿದ— "ಎಂಥ ಪತ್ರವಯ್ಯಾ?"

"ಎದುರಿಗೇ ಇದೆಯಲ್ಲ, ಓದಿ ನೋಡು."

"ನೀನು ನನ್ನ ಕೊರಳು ಕೊಯ್ಯುತ್ತಿರುವೆ."

"ಸಾಕು, ಸುಮ್ಮನೆ ನಿನ್ನ ರುಜು ಮಾಡು. ನಾನು ಒಂದು ಸಭೆಗೆ ಹೋಗಬೇಕಾಗಿದೆ. ವಿಳಂಬವಾಗುತ್ತಿದೆ."

"ಹಾಗಾದರೆ ಜೀವನದ ನೋವು ಸಂಕಟಗಳೆಲ್ಲಾ ಒಂದೇ ಸಲ ನಾಶವಾಗುವಂತೆ ಗುಂಡಿಕ್ಕಿ ನನ್ನನ್ನು ಕೊಂದು ಹಾಕು."

"ಸಾಕು, ಸಾಕು ಈಗ ಯಾವ ತಕರಾರೂ ಮಾಡಬೇಡ. ಹಾಗೇನಾದರೂ ಮಾಡಿದೆಯೆಂದರೆ, ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊ, ನಾನು ಎಂದೂ ನಿನ್ನ ಮುಖ ನೋಡುವುದಿಲ್ಲ."

ಈ ಬೆದರಿಕೆ ತನ್ನ ಕಾಯಕ ಮಾಡಿಯೇ ಬಿಟ್ಟಿತು. ದಾನನಾಥನು ಪತ್ರಕ್ಕೆ ತನ್ನ ಸಹಿ ಹಾಕಿದನು. ಅನಂತರ ರೇಗಿ ಹೇಳಿದನು— "ನೀನೇ ನೋಡ್ತಿರು. ಈ ದಿನ ಪಾಷಾಣ ತಿಂದು ನಾನು ಸಾಯದಿದ್ದರೆ ಏಕೆ? ಈ ಪತ್ರ ಇಟ್ಟಲ್ಲಿಯೇ ಇರುವುದು. ಬೆಳಿಗ್ಗೆ "ರಾಮ ನಾಮ" ಜಪ ಮಾಡಬೇಕಾಗುವುದು."

ಅಮೃತರಾಯನು ಪತ್ರವನ್ನು ಲಕ್ಕೋಟೆಗೆ ಹಾಕಿ ಅಂಟಿಸಿ, ಆ ಮುದುಕನ ಕೈಗಿತ್ತನು. ಬದರೀ ಪ್ರಸಾದರ ಹೆಸರು ಕೇಳುತ್ತಲೇ ಮುದುಕನು ನಸುನಗುತ್ತಾ ಪತ್ರವನ್ನು ತೆಗೆದುಕೊಂಡು ಹೊರಟು ಹೋದನು.

ಆಗ ಅಮೃತರಾಯನು ಸ್ಮಿತವದನನಾಗಿ ಹೇಳಿದನು— "ನಿನ್ನಲ್ಲಿ ಪಾಷಾಣವಿಲ್ಲದಿದ್ದರೆ ನಾನೇ ತಂದುಕೊಡುವೆನು. ಒಂದು ಸಲ ಯಾವುದೋ ಔಷಧಿಗೆ ಸೇರಿಸಲು ತಂದಿದ್ದೆ."

ದಾನನಾಥನು ಕೋಪದಿಂದ ಕಿಡಿಕಿಡಿಯಾಗಿ ಹೇಳಿದನು— "ನಾನು ನಿನ್ನ ತಲೆ ಸೀಳಿ ಬಿಡುವೆನು. ನೀನು ಎಲ್ಲಾ ಕಾಲದಲ್ಲಿಯೂ ನನ್ನ ಮೇಲೆ

ಅಧಿಕಾರ ಮಾಡುತ್ತಲೇ ಬಂದಿರುವೆ, ಈಗಲೂ ಮಾಡಬೇಕೆಂಬ ಇಷ್ಟವೋ? ಆದರೆ ಈಗ ನನ್ನ ಮೇಲೆ ನಿನ್ನ ಅಧಿಕಾರವೇನೂ ನಡೆಯಲಾರದು. ನನಗೂ ಅಲ್ಪ ಸ್ವಲ್ಪ ಬೆಲೆಯಿದೆಯೆಂದು ತಿಳಿದುಕೋ."

ಅಮೃತರಾಯನಿಗೆ ನಗು ತಡೆಯಲಾಗಲಿಲ್ಲ.

## ೭

ಲಾಲಾ ಬದರೀಪ್ರಸಾದರಿಗೆ ದಾನನಾಥನ ಪತ್ರವೇನೋ ತಲುಪಿತು. ಅದರಿಂದ ಅವರಿಗೆ ಅಪಮಾನವಾದುದು ಮಾತ್ರವಲ್ಲದೆ ಅವರ ಹೃದಯಕ್ಕೆ ದೊಡ್ಡ ಪೆಟ್ಟೊ ಬಿದ್ದಂತಾಯಿತು. ಅವರಿಗೆ ಅಮೃತರಾಯನ ಬರವಣಿಗೆ ಗೊತ್ತಿತ್ತು. ಆ ಪತ್ರದಲ್ಲಿದ್ದ ವಿನಯ, ಸೌಜನ್ಯತೆ ಮತ್ತು ಪ್ರತಿಜ್ಞೆಗಳೆಲ್ಲವೂ ಆ ಲಿಪಿಯಲ್ಲಿಯೆ ಲೋಪವಾದುವು. ಅವರ ಕೋಪಾಗ್ನಿಯಿಂದ ಅವರ ಮೆದುಳು ಕೊತ ಕೊತ ಕುದಿಯಲಾರಂಭಿಸಿತು. ಅಮೃತರಾಯನಿಂದ ಈ ಕಾಗದ ಬರೆಸಲು ದಾನ ನಾಥನ ಕೈಗಳೇನು ಮುರಿದು ಹೋಗಿದ್ದುವೆ? ಅವನು ಇಲ್ಲಿಗೆ ಬಾರದಂತೆ ಅವನ ಕಾಲಿಗೆ ಸಂಕೋಲೆ ಹಾಕಿದ್ದವರಾರು? ಆ ಅಮೃತರಾಯನೂ ಎಂಥ ನಿರ್ಲಜ್ಜ! ಅವನಿಗೆ ಇಂತಹ ಪತ್ರವನ್ನು ಬರೆಯಲು ಮನಸ್ಸಾದರೂ ಹೇಗೆ ಬಂತು? ಸ್ವಲ್ಪವೂ ನಾಚಿಕೆಯಾಗಲಿಲ್ಲವೆ?

ಅಮೃತರಾಯನು ಆವೇಶದಲ್ಲಿ ಮಾಡಿದ ಪ್ರತಿಜ್ಞೆಯು ಪ್ರಾಯಶಃ ಶಿಥಿಲ ವಾಗುವುದೆಂಬ ಆಶೆಯು ಇದುವರೆಗೂ ಲಾಲಾ ಬದರೀ ಪ್ರಸಾದರಿಗಿತ್ತು. ಬರಹವನ್ನು ನೋಡಿ ಮೊದಲು ಅವರು ಅಮೃತರಾಯನು ಕ್ಷಮಾಯಾಚನೆ ಮಾಡಿರಬಹುದೆಂದು ತಿಳಿದರು; ಆದರೆ ಪತ್ರವನ್ನು ಓದುತ್ತಲೇ ಆ ಆಶಾ ತಂತುವೂ ಕೂಡ ಕಿತ್ತು ಹೋಯಿತು. ದಾನನಾಥನ ಪತ್ರವೇ ಅವರ ಕೈ ಸೇರಿದ್ದರೆ, ಅವರು ಅಮೃತರಾಯನನ್ನು ಕರೆಸಿ, ಅವನಿಗೆ ಅದನ್ನು ತೋರಿಸಿ, ಅವನಲ್ಲಿ ಸ್ಪರ್ಧಾ ಭಾವನೆಯನ್ನು ಕೆರಳಿಸಿ . ಅವನನ್ನು ತಮ್ಮ ಕೈವಶ ಮಾಡಿ ಕೊಳ್ಳುತ್ತಿದ್ದರು. ಈ ಆಶೆಯೂ ನಿರಾಶೆಯಲ್ಲಿ ಪರ್ಯವಸಾನಗೊಂಡಿತು.

ಅಮೃತರಾಯನ ಬರಹವು ಉರಿಯುವ ಬೆಂಕಿಯ ಮೇಲೆ ಉಪ್ಪು ಸುರುವಿದಂತಹ ಕೆಲಸ ಮಾಡಿತು. ಕೋಪದಿಂದ ಕಂಪಿಸುತ್ತಿರುವ ಕೈಯಿಂದಲೇ ಅವರು ಈ ಪತ್ರ ಬರೆವರು :—

" ಲಾಲಾ ದಾನನಾಥರೆ, ತಾವು ಅಮೃತರಾಯನಿಂದ ಈ ಪತ್ರ ಬರೆಸಿ ನನಗೂ ಪ್ರೇಮಾಗೂ ಎಂತಹ ಗೌರವವನ್ನು ತೋರಿಸಿರುವಿರೋ, ಅದರ ಕಲ್ಪನೆಯೂ ತಮಗಾಗಿರಲಾರದು. ನಾನು ಅದನ್ನು ಹರಿದೆಸೆದು ತಮಗೆ ಉತ್ತರ ಕೊಡದಿದ್ದರೆ ಉಚಿತವಾಗುತ್ತಿತ್ತೇನೊ. ಆದರೆ................ !

ಇಲ್ಲಿಯ ವರೆಗೂ ಬರೆದು ಮುಗಿಸಿದ್ದರು, ಅಷ್ಟರಲ್ಲಿಯೇ ದೇವಕಿಯು ಅಲ್ಲಿಗೆ ಬಂದು ಕೇಳಿದಳು— "ಅಮೃತರಾಯ ಏನು ಬರೆದಿದ್ದಾನೆ?" ಬದರೀ ಪ್ರಸಾದನು ಕಾಗದದ ಕಡೆ ತಲೆ ಬಗ್ಗಿಸಿಕೊಂಡೇ ಹೇಳಿದರು— " ಅಮೃತ ರಾಯನಿಂದ ಯಾವ ಪತ್ರವೂ ಬಂದಿಲ್ಲ."

ದೇವಕಿ:— "ಅಲ್ರಿ, ಪತ್ರ ಬರದೆಯೇನು ! ನಾನು ಮಹಡಿಯ ಮೇಲಿನಿಂದ ನೋಡಿದೆ, ಅವರಕಡೆಯ ಸೇವಕನೊಬ್ಬ ಪತ್ರ ತೆಗೆದುಕೊಂಡು ಹಾರಿ ಹಾರಿ ಬರುತ್ತಿದ್ದ."

ಬದರೀ:— "ಹೌದು, ಆಳು ಅವರ ಕಡೆಯವನೇ ಸರಿ. ಆದರೆ ಪತ್ರ ದಾನನಾಥನದು. ಅದಕ್ಕೇ ಉತ್ತರ ಬರೆಯುತ್ತಿದ್ದೇನೆ. ಈ ಮಹಾಶಯನು ಅಮೃತರಾಯನಿಂದ ಪತ್ರ ಬರೆಸಿ ಕೆಳಗೆ ತನ್ನ ರುಜು ಹಾಕಿದ್ದಾನೆ. ತನ್ನ ಕೈಯಿಂದಲೇ ಬರೆಯಲು ನಾಚಿಕೆಯಾಗುತ್ತಿತ್ತೇನೊ. ಅಸಭ್ಯ, ಪೋಕರಿ........"

ದೇವಕಿ:— "ಪತ್ರದಲ್ಲಿ ಏನು ಇತ್ತು ಅಂದ್ರಿ ?"

ಬದರೀ:— " ಇಲ್ಲೇ ಬಿದ್ದಿದೆ. ನೀನೇ ಏಕೆ ನೋಡಬಾರದು ?"

ದೇವಕಿಯು ಪತ್ರವನ್ನೋದಿ ಹೇಳಿದಳು— "ಇದರಲ್ಲಿ ಇಷ್ಟು ಕೋಪವನ್ನುಂಟು ಮಾಡುವ ವಿಷಯ ಯಾವುದಿದೆ ? ಮಹಾಸ್ವಾಮಿಯವರು ಇದಕ್ಕೆ ಏನು ಉತ್ತರ ಬರೆದಿರುವಿರೋ ಅದನ್ನು ನಾನೂ ಸ್ವಲ್ಪ ನೋಡಬಹುದೇ ?"

ಬದರೀ:— "ಇಗೋ ತೆಗೆದುಕೊ. ನೋಡು, ಈಗ ತಾನೇ ಪ್ರಾರಂಭಿಸಿದ್ದೇನೆ. ಅವನ ಪುಂಡಾಟವೆಲ್ಲಾ ಒಂದೇ ಸಾರಿಗೆ ಅಡಗಿ ಹೋಗುವಂತೆ ಅವನನ್ನು ತರಾಟಿಗೆ ತೆಗೆದುಕೊಳ್ಳುತ್ತೇನೆ."

ದೇವಕಿಯು ಬದರೀಪ್ರಸಾದರ ಪತ್ರವನ್ನೋದಿ, ಅದನ್ನು ಹರಿದು ಎಸೆದು ಬಿಟ್ಟಳು. ಬದರೀಪ್ರಸಾದರು ಗರ್ಜಿಸಿ ಕೇಳಿದರು— "ಹರಿದು ಹಾಕಿದ್ದೇಕೆ? ನನ್ನ ಪತ್ರವನ್ನು ಹರಿದು ಹಾಕಲು ನೀನಾರು?"

ದೇವಕಿ:— "ಇಂತಹ ಪತ್ರವನ್ನು ಬರೆಯಲು ನೀವಾರು? ಅಮೃತ ರಾಯನನ್ನು ಕಳೆದುಕೊಂಡರೂ ಸಂತೋಷವಾಗಲಿಲ್ಲವೆ, ನಿಮಗೆ? ಈಗ ದಾನನಾಥನನ್ನೂ ಕಳೆದುಕೊಳ್ಳಬೇಕೆಂದು ಯೋಚಿಸುತ್ತಿರುವಿರೋ? ನಿಮ್ಮ ಪತ್ರದಿಂದಾಗುವ ಫಲವಾದರೂ ಇಷ್ಟೆ, ದಾನು ಇನ್ನೆಂದಿಗೂ ನಿಮಗೆ ತನ್ನ ಮುಖ ತೋರಿಸುವುದಿಲ್ಲ. ಹಾಳಾಗುವುದು ನನ್ನ ಮಗಳ ಜೀವಮಾನ ತಾನೆ? ಇದರಿಂದ ನಿಮಗಾವ ಹಾನಿಯೂ ಆಗಲಾರದು."

ಬದರೀ:— "ಹೌದು, ಹುಡುಗಿ ನಿನ್ನವಳೇ. ನನಗೆ ಯಾರೂ, ಏನೂ ಆಗಬೇಕಾದ್ದಿಲ್ಲ!"

ದೇವಕಿ:— "ತಮಗೂ ಏನಾದರೂ ಸಂಬಂಧವಿದ್ದರೆ ಅವಳನ್ನು ಬಾವಿಗೆ ತಳ್ಳಲು ಈ ರೀತಿ ಸಿದ್ಧರಾಗುತ್ತಿರಲಿಲ್ಲ. ಇಲ್ಲಿ ಪ್ರೇಮಾಗೆ ತಕ್ಕ ವರ ಬೇರೆ ಯಾರಿದ್ದಾರೆ, ಸ್ವಲ್ಪ ಹೇಳಿರಿ, ನಾನೂ ಕೇಳುವೆ."

ಬದರೀ:— "ಪ್ರಪಂಚದಲ್ಲಿ ವರಗಳಿಗೇನು ಕಡಿಮೆಯಿಲ್ಲ, ಕಾಸಿಗೊಂದು ಕೊಸರಿಗೆರಡು!"

ದೇವಕಿ:— "ಸಮೀಪದಲ್ಲಿರುವ ಎರಡು ಮೂರು ನಗರಗಳಲ್ಲೇನೋ ಯಾರೂ ಕಾಣಿಸ್ತಾ ಇಲ್ಲ. ಹೌದು, ಹೊರಗಿನ ವಿಷಯವನ್ನು ನಾನು ಏನೂ ಹೇಳಲಾರೆ. ಬುತ್ತಿ ಕಟ್ಟಿಕೊಂಡು ಹುಡುಕಲು ಹೊರಟರೆ ಗೊತ್ತಾಗುತ್ತೆ. ಓಡಾಟದಲ್ಲಿಯೇ ಅನೇಕ ವರ್ಷಗಳು ಕಳೆದು ಹೋಗುವುವು. ಇದೂ ಅಲ್ಲದೆ ಪರಿಚಯವಿಲ್ಲದೇ ಇರುವವರ ಮನೆ ಹುಡುಗೀನ ಮದುವೆ ಮಾಡಿಕೊಳ್ಳೋರು ಯಾರು? ಇಷ್ಟಾದರೂ ಪ್ರೇಮಾ ಒಪ್ಪಬೇಕಲ್ಲ!"

ಬದರೀ:— "ಅವನು ಸ್ವಹಸ್ತದಿಂದಲೇ ಪತ್ರ ಏಕೆ ಬರೆಯಲಿಲ್ಲ? ನಾನು ಹೇಳುವುದು ಇಷ್ಟೆ. ಇದರಿಂದ ನನಗೆಷ್ಟು ಅಗೌರವವಾಯಿತೆಂಬುದನ್ನಾದರೂ ಅವನು ತಿಳಿಯಬಾರದೆ! ಎಲ್ಲಾ ಪರೀಕ್ಷೆಗಳನ್ನೂ ಪಾಸು ಮಾಡಿ ಕುಳಿತಿದ್ದಾನೆ. ಡಾಕ್ಟರ್ ಬೇರೆ ಆಗಬೇಕು ಅಂತಿದಾನೆ. ಅವನಿಗೆ ಇಷ್ಟೂ ತಿಳಿಯದೆ?

ವಿಷಯ ಸ್ಪಷ್ಟವಾಗಿಯೇ ಇದೆ. ಇಬ್ಬರೂ ಸೇರಿ ನನ್ನನ್ನು ಅಪಮಾನಪಡಿಸ ಬೇಕೆಂದಿದ್ದಾರೆ."

ದೇವಕಿ:— "ಹೌದು, ಮೊದಲೇ ಪೋಲಿಗಳು, ನಿಮ್ಮನ್ನು ಅವಮಾನ ಪಡಿಸುವುದನ್ನು ಬಿಟ್ಟರೆ ಅವರಿಗೆ ಬೇರೆ ಕೆಲಸವೇ ಇಲ್ಲ. ಇಷ್ಟು ಸುಲಭವಾದ ವಿಷಯ ನಿಮ್ಮ ಬುದ್ಧಿಗೆ ಹೊಳೆಯುವುದಿಲ್ಲವಲ್ಲ! ಪರಮಾತ್ಮನು ನಿಮ್ಮ ಮೆದು ಳಿಗೆ ಬುದ್ಧಿಶಕ್ತಿಯನ್ನು ತುಂಬುವಾಗ ನಿಮ್ಮ ಸ್ಥಿತಿಯೇನಾಗಿತ್ತೋ ನಾನರಿಯೆ. ಐವತ್ತು ವರ್ಷ ವಯಸ್ಸಾದರೂ ಎಂತಹ ಮಂದಬುದ್ಧಿಗೆ ಹೊಳೆಯುವ ವಿಷ ಯವೂ ನಿಮಗೆ ಗೊತ್ತಾಗುವುದಿಲ್ಲವಲ್ಲಾ!

ಬದರೀಪ್ರಸಾದರು ನಕ್ಕು ಹೇಳಿದರು— "ಆ ಸಮಯದಲ್ಲಿ ನಾನು ನಿನ್ನನ್ನು ಅರಸಿಕೊಂಡು ಹೋಗಿದ್ದೆ."

ದೇವಕಿಯು ಮಧ್ಯ ವಯಸ್ಸಿನವಳಾಗಿದ್ದಾಗ್ಯೂ ಕೂಡ ಹಾಸ್ಯಪ್ರವೃತ್ತಿಯ ವಳಾಗಿದ್ದಳು. ಹೇಳಿದಳು— "ಭೇಷ್, ಚೆನ್ನಾಗಿ ಹೇಳಿದಿರಿ. ನಾನು ಮೊದಲೇ ಅಲ್ಲಿಗೆ ಬಂದು ಬುದ್ಧಿಯ ಹೆಚ್ಚು ಭಾಗವನ್ನು ಲೂಟಿ ಮಾಡಿದ್ದೆ. ಅದಿರಲಿ, ಅವರಿಬ್ಬರಲ್ಲಿ ಎಷ್ಟು ಗಾಢವಾದ ಮೈತ್ರಿಯಿದೆ ಎಂಬುಗು ನಿಮಗೂ ಗೊತ್ತು. ದಾನನಾಥನು ಸಂಕೋಚದಿಂದ ಸ್ವತಃ ಬರೆಯದಿರಬಹುದು. ಅಮೃತರಾಯನು, ಲಾಲಾಜಿಯವರು ಎಲ್ಲಿಯಾದರೂ ಬೇರೆ ವರನನ್ನು ಗೊತ್ತು ಮಾಡಿದರೆ ಗತಿಯೇನು ಎಂದು ಯೋಚಿಸಿ, ಈ ಪತ್ರ ಬರೆದು ಬಲವಂತದಿಂದ ದಾನನಾಥನಿಂದ ಸಹಿ ಹಾಕಿಸಿರಬಹುದು."

ಬದರೀಪ್ರಸಾದರು ಸಂಕೋಚ ಪಡುತ್ತಾ ಹೇಳಿದರು— "ಇದಿಷ್ಟು ನನಗೂ ಗೊತ್ತಿದೆ. ನನ್ನನ್ನೇನು ಹಳ್ಳಿಯವನೆಂದು ತಿಳಿದಿದ್ದೀಯೋ?"

ದೇವಕಿ:— "ಹಾಗಾದರೆ ಇಷ್ಟು ಕೋಪಿಸಿಕೊಳ್ಳುವ ಅಗತ್ಯವೇನಿತ್ತು? ಅವನನ್ನು ಕರೆಸಿ ನನಗೆ ಒಪ್ಪಿಗೆಯಿದೆ ಎಂದು ತಿಳಿಸಿಬಿಡಿರಿ. ಪಾಪ ಆ ಅಸಹಾಯಕಳಾದ ಅವನ ವೃದ್ಧ ಮಾತೆಗೆ ಭಾಗ್ಯೋದಯವಾದಂತಾಗುವುದು. ನನಗೇಕೋ ಅವಳನ್ನು ನೋಡಿ ಕನಿಕರವಾಗುತ್ತದೆ."

ಬದರೀ:— "ನಾನು ಮೊದಲೇ ಪ್ರೇಮಾನ್ನ ದಾನನಾಥನಿಗೆ ಕೊಟ್ಟು ಲಗ್ನ ಮಾಡಲಿಲ್ಲವಲ್ಲ ಎಂದು ಈಗ ನನಗೆ ದುಃಖವಾಗುತ್ತದೆ. ಇಷ್ಟು ದಿವಸ ಗಳ ವರೆಗೆ ವ್ಯರ್ಥವಾಗಿ ನಾನೇಕೆ ಅಮೃತರಾಯನನ್ನು ನಿರೀಕ್ಷಿಸಿಕೊಂಡಿದ್ದೆ?

ಕೊನೆಗೂ ದಾನನಾಥನನ್ನೇ ಆಶ್ರಯಿಸಬೇಕಾಯಿತಲ್ಲ, ನಾನು !"

ದೇವಕಿ:— "ಭವಿಷ್ಯವನ್ನು ಬಲ್ಲವರಾರು ? ದಾನು ನಮ್ಮ ಪ್ರೇಮಾಳಿಗಾಗಿ ಕಠಿಣ ತಪಸ್ಸನ್ನೇ ಮಾಡಿದನೆಂಬುದೂ ನಿಜ. ಅವನು ಇಷ್ಟಪಟ್ಟಿದ್ದರೆ ಅವನ ವಿವಾಹ ಎಂದೋ ಆಗಿ ಹೋಗುತ್ತಿತ್ತು. ಎಲ್ಲೆಲ್ಲಿಂದ ಅವನಿಗೆ ಕನ್ಯಾ ಸಂದೇಶಗಳು ಬಂದಿರಲಿಲ್ಲ, ಮಗನಿಗಾಗಿ ತಾಯಿಯೆಷ್ಟು ಗೋಳಾಡಿದಳು, ಸಂಬಂಧಿಕರೆಲ್ಲಾ ಎಷ್ಟೊಂದು ಸಮಾಧಾನ ಮಾಡಿದರು; ಆದರೆ ಅವನು ಒಂದನ್ನೂ ಒಪ್ಪಲಿಲ್ಲ. ಪ್ರೇಮಾ ಅವನ ಮನಸ್ಸಿನಲ್ಲಿ ನೆಲಸಿ ಬಿಟ್ಟಿದ್ದಾಳೆ."

ಬದರೀ:— "ಆದರೆ ಪ್ರೇಮಾ ಅವನನ್ನು ಒಪ್ಪುವಳೋ ಇಲ್ಲವೋ ಎಂಬುದನ್ನು ಮೊದಲು ನಿಶ್ಚಯಿಸಿಕೊ. ನಾನು ಸಮ್ಮತಿಯನ್ನಿತ್ತ ಮೇಲೆ ಪ್ರೇಮಾ ಎಲ್ಲಿಯಾದರೂ ಅಸಮ್ಮತಿಯನ್ನು ಸೂಚಿಸಿ ಬಿಟ್ಟಾಳು. ಈ ವಿಚಾರದಲ್ಲಿ ಅವಳ ಅನುಮತಿಯನ್ನು ಪಡೆಯಲೇ ಬೇಕು."

ದೇವಕಿ:— "ಪುನಃ ನನ್ನನ್ನು ರೇಗಿಸುವುದಕ್ಕೆ ಆರಂಭಿಸಿದಿರೋ ! ಅವಳು ಒಪ್ಪದಿರುವಂತಹ ಅವಗುಣವೇನೂ ದಾನನಾಥನಲ್ಲಿ ಕಂಡು ಬರುತ್ತಿಲ್ಲ. ಲಕ್ಷಕ್ಕೊಬ್ಬ ಇಂತಹ ಹುಡುಗ ಸಿಕ್ಕುವುದು ದುರ್ಲಭ. ಒಂದುವೇಳೆ ಪ್ರೇಮಾ ಅಮೃತರಾಯನನ್ನು ಬಿಟ್ಟು ಯಾರನ್ನೂ ವರಿಸುವುದಿಲ್ಲ; ಅವಿವಾಹಿತಳಾಗಿಯೇ ಇರುವೆನೆಂದು ಹಠ ಮಾಡಬಹುದು. ಆದರೆ ಜೀವನ ಪರ್ಯಂತ ಅವಳು ಅವನ ಹೆಸರು ಹೇಳಿಕೊಂಡು ಹಾಗೆಯೇ ಇರಲು ಸಾಧ್ಯವೆ ? ಅಮೃತರಾಯನಂತೂ ಈಗ ಯಾವಳೋ ವಿಧವೆಯನ್ನು ಲಗ್ನ ಮಾಡಿಕೊಳ್ಳುವನು ಅಥವಾ ಮಾಡಿಕೊಳ್ಳದೆ ಇರಲೂ ಬಹುದು. ಅವನ ದೃಷ್ಟಿಕೋನವೇ ಈಗ ಭಿನ್ನವಾಗಿದೆ. ನನ್ನ ಮಾತು ಕೇಳಿ, ಈಗ' ದಾನೂಗೆ ಪತ್ರ ಬರೆದು ಬಿಡಿ. ಪ್ರೇಮಾಳನ್ನು ಕೇಳುವ ಅಗತ್ಯವೇ ಇಲ್ಲ. ಮನಸ್ಸು ಹಿಡಿತಕ್ಕೆ ಸಿಕ್ಕದಂತಹ ವಸ್ತುವೇನೂ ಅಲ್ಲ. ಮೊದಲು ನನಗೂ ನಮ್ಮ ನೆರೆಮನೆಯಲ್ಲಿದ್ದ ವಕೀಲರನ್ನು ಲಗ್ನ ಮಾಡಿಕೊಳ್ಳಲು ಇಷ್ಟವಿತ್ತು. ಕೋಟು ಷರಾಯಿ ಧರಿಸಿಕೊಂಡು ಕಛೇರಿಗೆ ಹೋಗುತ್ತಿದ್ದ ಅವರನ್ನು ನೋಡಿ ಮುಗ್ಧಳಾಗುತ್ತಿದ್ದೆ; ಆದರೆ ನಿಮ್ಮ ಅದೃಷ್ಟ ಚೆನ್ನಾಗಿತ್ತು, ನನ್ನ ತಾಯಿ ತಂದೆಯರು ನಿಮ್ಮ ಕೊರಳಿಗೇ ಕಟ್ಟಿದರು, ನನ್ನನ್ನು. ಆಮೇಲೆ ಅವರ ಯೋಚನೆ ಬಂದಿದ್ದರೆ ಕೇಳಿರಿ. ರೂಪ-ಗುಣಗಳಲ್ಲಿಯೇ ಆಗಲಿ, ವಿದ್ಯಾ-ಬುದ್ಧಿಗಳಲ್ಲಿಯೇ ಆಗಲಿ, ಧನ-ಸಂಪತ್ತಿನಲ್ಲಾಗಲಿ,

ನೀವು ಅವರಿಗೆ ಸರಿಸಮಾನರಾಗಿರಲಿಲ್ಲ. ಆದರೆ ಆಣೆಯಿಟ್ಟು ಹೇಳುತ್ತೇನೆ, ಮದುವೆಯಾದ ಮೇಲೆ ಮರವೆಯಿಂದಲಾದರೂ ಅವರನ್ನು ಜ್ಞಾಪಿಸಿಕೊಂಡಿದ್ದರೆ, ಕೇಳಿ."

ಬದರೀ:— "ಸರಿ, ಸರಿ, ಇದಕ್ಕೋ, ನೀನು ಪದೇಪದೇ ತೌರುಮನೆಗೆ ಹೋಗುತ್ತಿದ್ದುದು ! ಈಗ ತಿಳಿಯಿತು ನನಗೆ."

ದೇವಕಿ:— "ನನ್ನನ್ನು ರೇಗಿಸಿದಿರಿ ಅಂದ್ರೆ ನಾನು ಏನಾದರೂ ಹೇಳದೆ ಇರಲಾರೆ,"

ಬದರೀ:—"ನೀನು ಯಾವಾಗ ನಿನ್ನ ವಿಷಯ ತಿಳಿಸಿಬಿಟ್ಟೆಯೋ, ನಾನೂ ನನ್ನ ವಿಷಯವನ್ನೂ ಹಾಗೆಯೆ ಹೇಳೇ ಬಿಡುತ್ತೇನೆ. ನಾನೂ ಒಬ್ಬ ಮುಸಲ್ಮಾನ ಕನ್ಯೆಯಲ್ಲಿ ಅನುರಕ್ತನಾಗಿದ್ದೆ. ಮತಾಂತರ ಹೊಂದುವುದಕ್ಕೂ ಸಿದ್ಧನಿದ್ದೆ. ರೂಪ ಲಾವಣ್ಯಗಳಲ್ಲಿ ಅವಳು ಅಪ್ಸರೆಯಂತಿದ್ದಳು. ನೀನು ಅವಳ ಎಡಗಾಲು ಧೂಳು ಒರೆಸುವುದಕ್ಕೂ ತಕ್ಕವಳಲ್ಲ. ಅವಳ ಜ್ಞಾಪಕ ಇನ್ನೂ ನನ್ನ ಹೃದಯದಿಂದ ಅಳಿಸಿ ಹೋಗಿಲ್ಲ."

ದೇವಕಿ:— "ಎಲ್ಲಾ ಸುಳ್ಳಿನ ಕಂತೆ! ನಿಮಗಿಂತ ಠಕ್ಕುಗಾರರು ಮತ್ತಾರಿರುವರು, ಹೇಳಿ ಸ್ವಲ್ಪ. ನಾನು ಮೊಟ್ಟಮೊದಲು ಈ ಮನೆಗೆ ಕಾಲಿಟ್ಟಾಗ, ತಿಂಗಳು-ಎರಡು ತಿಂಗಳು ಕಳೆದು ಹೋದರೂ ನನ್ನೊಡನೆ ಮಾತನಾಡುವುದಕ್ಕೂ ನಾಚುತ್ತಿದ್ದಿರಿ. ಇಂಥವರು ಮುಸಲ್ಮಾನರ ಹುಡುಗೀನ ಪ್ರೀತಿಸುತ್ತಿದ್ದರು ಎಂದರೆ ಯಾರು ತಾನೆ ನಂಬಬೇಕು ! ಅವಳು ನಿಮ್ಮನ್ನು ಪೇಟೆಯಲ್ಲಿ ಮಾರಿಬಿಡುತ್ತಿದ್ದಳು. ಹೌದು, ನಿಮ್ಮ ಪುರುಷ ಜಾತಿಯ ಸ್ವಭಾವ ನನಗಷ್ಟು ಪರಿಚಯವಿಲ್ಲ. ನೀವು ಹೇಳುವ ಮಾತು ನಿಜವಿದ್ದರೂ ಇರಬಹುದು. "

ಬದರೀ:— "ಎಲ್ಲಿ, ಪ್ರೇಮಾನ್ನ ಸ್ವಲ್ಪ ಹಾಗೆ ಇಲ್ಲಿಗೆ ಕರೆದುಕೊಂಡು ಬಾ. ಅವಳ ಅಭಿಪ್ರಾಯವನ್ನು ಕೇಳುವುದೇ ಸರಿಯೆನಿಸುತ್ತೆ."

ದೇವಕಿ:— (ಗೊಣಗುಟ್ಟುತ್ತಾ) "ಅವಳನ್ನು ನೀವು ಕೇಳುವುದೇನೋ, ಅವಳು ಹೇಳುವುದೇನೋ—ನನಗೊಂದೂ ಅರ್ಥವಾಗೋದಿಲ್ಲ. ನನ್ನೊಡನೆ ಈ ವಿಷಯ ಚರ್ಚೆಗೆ ಬಂದಾಗಲೆಲ್ಲಾ, ಅವಳು ಆಜೀವನ ಅವಿವಾಹಿತಳಾಗಿರುವುದಾಗಿ ಹೇಳಿರುತ್ತಾಳೆ. ಪುನಃ ಅವಳು ಹೇಳುವುದೂ ಅದೇ. ಆದರೆ ನನಗೆ

ಮಾತ್ರ ಇಷ್ಟು ಗೊತ್ತು. ನೀವು ಅವಳನ್ನು ಯಾರಿಗೆ ಕೊಟ್ಟು ಲಗ್ನ ಮಾಡಲು ಏರ್ಪಾಡು ಮಾಡುವಿರೋ ಅವಳು ಅದನ್ನು ಒಪ್ಪದಿರಲಾರಳು. ಸದ್ಗೃಹಸ್ಥರ ಮನೆಯಲ್ಲಿ ಹೆಣ್ಣು ಅವಿವಾಹಿತಳಾಗಿರಲು ಸಾಧ್ಯವಿಲ್ಲವೆಂಬುದು ಅವಳಿಗೆ ಗೊತ್ತಿದೆ."

ಬದರೀ:—"ಶೋಕಸಂತಪ್ತಳಾಗಿ ಪ್ರಾಣವನ್ನೇ ನೀಗಿದರೆ ಗತಿಯೇನು?"

ದೇವಕಿ:— "ಇಲ್ಲಾ, ನಾನು ಹೀಗೆಂದೂ ಭಾವಿಸುವುದಿಲ್ಲ. ಕರ್ತವ್ಯ ಜ್ಞಾನವು ಅವಳಿಗೆ ಪೂರ್ಣವಿದೆ. ಅವಳಿಗೆ ದುಃಖವೇನೋ ಇದ್ದೇ ಇದೆ. ಯಾರನ್ನು ತನ್ನ ಮನದಲ್ಲಿಯೇ ಜೀವನಸರ್ವಸ್ವವೆಂದು ತಿಳಿದಿದ್ದಳೋ, ಅವ ನನ್ನು ಹೃದಯ ಮಂದಿರದಿಂದ ಕಿತ್ತೊಗೆಯುವುದು ಅಷ್ಟು ಸುಲಭವೆ? ಅವಳ ಹೃದಯದ ಈ ಘಾಯ ಮಾಯಲು ವರ್ಷಗಳೇ ಹಿಡಿಯಬಹುದು. ಈವರ್ಷ ಯಾವ ರೀತಿಯಿಂದಲೂ ಅವಳು ಲಗ್ನಕ್ಕೆ ಒಪ್ಪಲಾರಳು."

ಬದರೀ:— "ಸರಿ, ನಾನೇ ಒಂದು ಸಲ ಅವಳನ್ನು ಕೇಳಿ ನೋಡು ವೆನು. ಈ ಓದಿದ ಹುಡುಗಿಯರ ಸ್ವಭಾವವೇ ಒಂದು ರೀತಿ. ಅವರ ಪ್ರೇಮ ಮತ್ತು ಕರ್ತವ್ಯಗಳಲ್ಲಿ ಭಿನ್ನತೆ ತಲೆದೋರಿತೆಂದರೆ ಅವರ ಸಮಸ್ತ ಜೀವನವೂ ದುಃಖಮಯವಾಗುವುದು. ಅವರು ಪ್ರೇಮ ಮತ್ತು ಕರ್ತವ್ಯಗಳಿಗಾಗಿ ತ್ಯಾಗ ಮಾಡುವುದನ್ನರಿಯರು, ಅಥವಾ ಇಷ್ಟಪಡುವುದೂ ಇಲ್ಲ. ಆದರೆ ಪ್ರೇಮ ಮತ್ತು ಕರ್ತವ್ಯಗಳ ಮಿಲನದಿಂದ ಅವರ ಜೀವನವು ಆದರ್ಶಪ್ರಾಯವಾಗು ವುದು. ಪ್ರೇಮಾಳ ಸ್ವಭಾವವೂ ಹೀಗೆ ಅಂತ ಕಾಣುತ್ತೆ. ನನ್ನದೇನೂ ಅಡ್ಡಿ ಯಿಲ್ಲವೆಂಬುದಾಗಿ ನಾನು ದಾನೂಗೆ ಬರೆಯುತ್ತೇನೆ; ಆದರೆ ಪ್ರೇಮಾಳನ್ನು ಕೇಳಿಯೇ ಒಂದು ನಿರ್ಧಾರಕ್ಕೆ ಬರಬೇಕಾಗಿದೆ."

ಆ ಸಮಯಕ್ಕೆ ಸರಿಯಾಗಿ ಕಮಲಾಪ್ರಸಾದನು ಬಂದು ಹೇಳಿದನು— "ತಾವು ಈ ಹೊಸ ಸಮಾಚಾರವನ್ನು ಕೇಳಿದಿರಾ? ಅಮೃತರಾಯನು ಒಂದು 'ವನಿತಾಶ್ರಮ' ವನ್ನು ಆರಂಭಿಸುವುದರಲ್ಲಿದ್ದಾನೆ. ಇದು ಅವನ ಸಂಪಾದ ನೆಗೆ ಒಂದು ಹೊಸ ಮಾರ್ಗ."

ಬದರೀಪ್ರಸಾದರು ಹುಬ್ಬುಗಂಟಿಕ್ಕಿಕೊಂಡು ಕೇಳಿದರು—"ಇದು ಸಂಪಾ ದನೆಯ ರೀತಿಯೆ? ನನಗರ್ಥವಾಗಲಿಲ್ಲ."

ಕಮಲಾ:— "ಅದೇ, ಗೊತ್ತಿಲ್ಲವೆ, ದೇಶದ ನಾಯಕರು ಮಾಡುವ

ಕೆಲಸ. ವನಿತಾಶ್ರಮದಲ್ಲಿ ವಿಧವೆಯರ ಪಾಲನೆ ಪೋಷಣೆಯ ಏರ್ಪಾಡು ಮಾಡಲಾಗುವುದು. ಅವರ ವಿದ್ಯಾಭ್ಯಾಸಕ್ಕೂ ತಕ್ಕ ವ್ಯವಸ್ಥೆ ಮಾಡಲಾಗು ವುದು. ಚಂದಾ ಮೂಲಕ ನಿಧಿಯನ್ನು ಸಂಗ್ರಹಿಸಲಾಗುವುದು. ಸ್ನೇಹಿತ ರೆಲ್ಲರೂ ಸೇರಿ ಆ ಹಣವನ್ನು ಸೂರೆ ಮಾಡುವರು. ಎಲ್ಲಿಂದ ಎಷ್ಟು ಹಣ ಬಂತು ಎಂಬುದು ಯಾರಿಗೂ ಗೊತ್ತಾಗುವುದಿಲ್ಲ. ತಿಂಗಳು ತಿಂಗಳಿಗೂ ಸುಳ್ಳು ಲೆಕ್ಕ ಪ್ರಕಟಿಸಿದರಾಯಿತು. ದೊಡ್ಡ ದೊಡ್ಡ ಶ್ರೀಮಂತರು ಹೆಚ್ಚು ಹೆಚ್ಚು ಚಂದಾ ಕೊಡಲು ವಾಗ್ದಾನ ಮಾಡಿದ್ದಾರೆಂದು ಕೇಳಿದೆ. ಸುಮಾರು ಐದು ಲಕ್ಷ ರೂಪಾಯಿಗಳಾಗಬಹುದೆಂದು ಅಂದಾಜು ಮಾಡಲಾಗಿದೆ. ಇದ ರಲ್ಲಿ ಕನಿಷ್ಠ ಪಕ್ಷ ಐವತ್ತು ಸಾವಿರ ರೂಪಾಯಿಗಳು ಗೆಳೆಯರಿಂದಲೇ ಬರ ಬಹುದು. ವಕಾಲತ್ತಿನಿಂದ ಇಷ್ಟು ಅಲ್ಪ ಸಮಯದಲ್ಲಿ ಇಷ್ಟೊಂದು ದೊಡ್ಡ ಗಂಟು ಎಲ್ಲಿ ಸಿಕ್ಕುತ್ತಿತ್ತು !"

ಬದರೀ:— "ಐವತ್ತುಸಾವಿರ ಸಂಪಾದಿಸಿದರೆ ಅದೇನು ಮಹಾ, ಒಂದು ಲಕ್ಷಕ್ಕೆ ಕಡಿಮೆ ಗಿಟ್ಟಿಸಲಾರನೆಂದೇ ನನ್ನ ಎಣಿಕೆ."

ಕಮಲಾ:— "ಇಂತಹ ಯುಕ್ತಿಗಳು ನಮ್ಮ ಬುರುಡೆಯಲ್ಲಿ ಸುಳಿಯು ವುದೇ ಇಲ್ಲ."

ಬದರೀ:— "ಹೋಗಿ ಕೆಲವು ದಿನಗಳ ವರೆಗೆ ಅವನಲ್ಲಿ ಶಿಷ್ಯನಾಗಿರು. ಇದನ್ನು ಬಿಟ್ಟರೆ ಬೇರೆ ಉಪಾಯವೇ ಇಲ್ಲ."

ಕಮಲಾ:— "ಹಾಗಾದರೆ ನಾನು ಸುಳ್ಳು ಹೇಳುತ್ತಿರುವೆನೆಂದು ತಿಳಿ ದಿರಾ ?"

ಬದರೀ:— "ಇಲ್ಲ, ಸ್ವಲ್ಪವೂ ಇಲ್ಲ. ನೀನು ಎಂದೂ ಸುಳ್ಳು ಹೇಳಿಯೇ ಇಲ್ಲ. ಈ ದಿನ ಹೊಸದಾಗಿ ಏಕೆ ಸುಳ್ಳು ಹೇಳುವೆ ? ಸಾಕ್ಷಾತ್ ಸತ್ಯಾವ ತಾರಿಯೇ ನೀನಲ್ಲವೇ ?"

ದೇವಕಿ:— "ಅವನು ಹೇಳಿರುವುದು ಸತ್ಯವೆ. ಹೋಮ ಮಾಡುವಾಗ ಕೈ ಸುಡುವುದು ಸಹಜ. ಆ ನಿಷ್ಕಳಂಕ ಪ್ರಾಣಿ ತನ್ನ ಸರ್ವಸ್ವವನ್ನೂ ಪರೋಪ ಕಾರಕ್ಕಾಗಿ ತ್ಯಾಗ ಮಾಡಿ ಕುಳಿತಿದ್ದಾನೆ. ನಿಮ್ಮ ದೃಷ್ಟಿಯಲ್ಲಿ ಅವನ ಈ ಮಹತ್ಕಾರ್ಯವು ಜನರನ್ನು ಮೋಸಗೊಳಿಸಲು ಅವನು ಹೂಡಿರುವ ಕಪಟ ನಾಟಕದಂತೆ ಕಾಣುತ್ತಿದೆ. ತಾವಂತೂ ಏನೂ ಮಾಡಲಾರಿರಿ; ಆದರೆ ಇತರರ

ಸತ್ಕಾರ್ಯವನ್ನು ಭಂಗಪಡಿಸಲು ಸದಾ ಸಿದ್ಧರಿರುತ್ತೀರಿ. ಅವನಿಗೆ ದೇವರು ಯಾವ ಭಾಗದಲ್ಲಿ ಕಡಿಮೆ ಮಾಡಿದ್ದಾನೆ, ನೀವೇ ಯೋಚಿಸಿ. ಈ ಮಾಯಾ ಜಾಲವನ್ನು ರಚಿಸುವ ಅವಶ್ಯಕತೆಯೇ ಅವನಿಗಿಲ್ಲ."

ಕಮಲಾ:— "ಸರಿ, ನಾನೇ ಸುಳ್ಳುಗಾರ. ಇದಕ್ಕೇಕೆ ಜಗಳವಾಡ ಬೇಕು? ಇನ್ನು ಕೆಲವೇ ದಿನಗಳಲ್ಲಿ ಗುಟ್ಟು ತಾನಾಗಿಯೇ ರಟ್ಟಾಗುವುದು. ತಮ್ಮಂಥ ಸರಳ ಜೀವಿಗಳು ಈ ಪ್ರಪಂಚದಲ್ಲಿ ಇಲ್ಲದೇ ಹೋಗಿದ್ದರೆ, ಇಂತಹ ಧೂರ್ತರು ಮಹಡಿ ಮನೆ ಕಟ್ಟಿಸಲು ಸಾಧ್ಯವಾಗುತ್ತಿತ್ತೆ?"

ದೇವಕಿ:— "ಸಾಕೋ, ಸುಮ್ಮನಾದರೂ ಇರಬಾರದೇನೋ. ಇಂತಹ ಮಾತುಗಳನ್ನಾಡಲು ನಿನಗೆ ನಾಚಿಕೆಯಾಗುವುದಿಲ್ಲವೆ? ಎಲ್ಲಿಯಾದರೂ ಪ್ರೇಮಾಳ ಎದುರಿಗೆ ಇಂತಹ ನಿರಾಧಾರವಾದ ಮಾತುಗಳನ್ನಾಡಿಯೆ, ಜೋಕೆ! ನೀನು ಒಂದು ಸಾರಿ ಅಮೃತರಾಯನನ್ನು ಮೋಸಗಾರನೆಂದು ಕರೆದಿದ್ದಾಗ, ಅವಳು ಮೂರು ದಿನಗಳ ತನಕ ಊಟ ಮಾಡಿಯೇ ಇರಲಿಲ್ಲ, ಇದು ನಿನಗೂ ಜ್ಞಾಪಕವಿರಬಹುದು."

ಕಮಲಾ:— "ಇಲ್ಲಿ ಈ ವಿಷಯಗಳಿಗೆ ಹೆದರುವವರು ಯಾರೂ ಇಲ್ಲ. 'ಕಂಡದ್ದನ್ನು ಹೇಳಿದರೆ ಕೆಂಡದಂಥ ಕೋಪ' ಎಂಬಂತೆ ನನ್ನ ಸತ್ಯ ವಚನಗಳು ಎಲ್ಲರಿಗೂ ಅಪ್ರಿಯವಾಗಿಯೇ ಕಾಣುತ್ತವೆ. ಇತರರಿಗೆ ಒಳಿತಾಗಲಿ ಅಥವಾ ಕೆಡುಕಾಗಲಿ, ನಾನು ಸತ್ಯವಾದ ವಿಷಯವನ್ನು ಮುಚ್ಚಿಡಲಾರೆ. ಅವನು ನಮ್ಮನ್ನು ಅಪಮಾನಪಡಿಸುತ್ತಿರುವಾಗ ನಾವೇಕೆ ಅವನನ್ನು ಗೌರವಿಸಬೇಕು? ಅವನ ದುಷ್ಕೃತ್ಯಗಳನ್ನೆಲ್ಲಾ ಬಚ್ಚಿಡಲು ಅವನಿಗೂ ನಮಗೂ ಇರುವ ಬಾಂಧ ವ್ಯವಾದರೂ ಏನು? ನಾನಂತೂ ಅವನು ನಗರದಲ್ಲಿ ಯಾರಿಗೂ ಮುಖ ತೋರಿಸದಂತೆ ಅಪಮಾನ ಮಾಡಿಯೇ ತೀರುತ್ತೇನೆ."

ಹೀಗೆ ಹೇಳುತ್ತಾ ಕಮಲಾಪ್ರಸಾದನು ಹೊರಟುಹೋದನು. ಆ ಸಮ ಯಕ್ಕೆ ಸರಿಯಾಗಿ ಪ್ರೇಮಾ ಕೊಠಡಿಯನ್ನು ಪ್ರವೇಶಿಸಿದಳು. ಅವಳ ಕಣ್ಣೆವೆ ಗಳು ಒದ್ದೆಯಾಗಿದ್ದುವು. ಅವಳು ಇದುವರೆಗೂ ಅಳುತ್ತಿದ್ದಳೆಂಬುದನ್ನು ಅವಳ ಕಣ್ಣುಗಳೇ ಹೇಳುತ್ತಿದ್ದವು. ಅವಳ ಕೋಮಲ ಶರೀರವು ಗುರುತಿಸ ಲಾರದಷ್ಟು ಕೃಶವಾಗಿತ್ತು. ಅವಳ ಮುಖಮಂಡಲವು ಯಾವಳೋ ವಿರಹಿ ಣಿಯ ಪೂರ್ವ ಸ್ಮೃತಿಯಂತೆ ಮಲಿನವಾಗಿತ್ತು. ಅವಳು ಬಂದವಳೆ ನುಡಿ

ದಳು— “ ಅಣ್ಣಾ, ತಾವು ಸ್ವಲ್ಪ ಬಾಬು ದಾನನಾಥರನ್ನು ಕರೆಸಿ, ವ್ಯರ್ಥವಾಗಿ ಭಾವಂದಿರ ಮೇಲೆ ಸುಳ್ಳು ಆರೋಪ ಹೊರಿಸಬಾರದೆಂದು ಅವರಿಗೆ ತಿಳಿಯ ಹೇಳಿರಿ.”

ಬದರೀಪ್ರಸಾದರು ವಿಸ್ಮಿತರಾಗಿ ಹೇಳಿದರು— “ದಾನನಾಥ! ಅವನೇಕೆ ಅಮೃತರಾಯನ ಮೇಲೆ ಆರೋಪಣೆ ಮಾಡಿಯಾನು! ಅವರಿಬ್ಬರಲ್ಲಿರುವ ಮೈತ್ರಿಯನ್ನು ನಾನೆಲ್ಲಿಯೂ ನೋಡಿಯೇ ಇಲ್ಲ.”

ಪ್ರೇಮಾ:— “ನನಗೂ ನಂಬಿಕೆಯಾಗಲೊಲ್ಲದು; ಆದರೆ ಅಣ್ಣ ಹಾಗೆ ಹೇಳುತ್ತಿದ್ದಾನೆ. ವನಿತಾ ಸಮಾಜವನ್ನು ಸ್ಥಾಪಿಸಬೇಕೆಂಬ ವಿಚಾರವು ಭಾವನ ಮನಸ್ಸಿನಲ್ಲಿ ಬಹಳ ದಿನಗಳಿಂದಲೂ ಇತ್ತು. ಅನೇಕ ಸಲ ಈ ವಿಷಯವಾಗಿ ಮಾತುಕತೆಗಳಾಗಿವೆ. ಆದರೆ ಬಾಬು ದಾನನಾಥರು ಈಗ ಅವರು ಈ ನೆವದಿಂದ ಧನಾರ್ಜನೆ ಮಾಡಿ ಜಮೀನ್ದಾರನಾಗಲು ಹವಣಿಸುತ್ತಿದ್ದಾರೆಂದು ಹೇಳಿಕೊಂಡು ತಿರುಗುತ್ತಿದ್ದಾರೆ.”

ಬದರೀ:— “ಕಮಲಾ ಹಾಗೆ ಹೇಳುತ್ತಿದ್ದ.”

ಪ್ರೇಮಾ:— “ಹೌದು, ಅವನೇ ಹಾಗೆ ಹೇಳುತ್ತಿದ್ದುದು ದಾನನಾಥನು ದ್ವೇಷಬುದ್ಧಿಯಿಂದ ಹಾಗೆ ಹೇಳಿದ್ದರೆ ಆಶ್ಚರ್ಯವೇನೂ ಇಲ್ಲ. ನೀವು ಸ್ವಲ್ಪ ಅವರನ್ನು ಕರೆಸಿ ವಿಚಾರಿಸಿ.”

ಬದರೀ:— “ಕಮಲಾ ಹೇಳುತ್ತಿರುವುದು ಸುಳ್ಳು, ಶುದ್ಧ ಸುಳ್ಳು! ದಾನೂನ ವಿಷಯ ನನಗೆ ಚೆನ್ನಾಗಿ ಗೊತ್ತು. ಅವನಂತಹ ಸಜ್ಜನರು ಬಹಳ ವಿರಳ. ಈಗೇನಾದರೂ ಅಮೃತರಾಯನಿಗಾಗಿ ಪ್ರಾಣಾರ್ಪಣ ಮಾಡುವ ಸಂದರ್ಭ ಒದಗಿದರೆ. ದಾನು ಸಂತೋಷದಿಂದ ತನ್ನ ಪ್ರಾಣವನ್ನೇ ಬಲಿಗೊಡುವನು ಎಂಬ ಪೂರ್ಣ ನಂಬಿಕೆ ನನಗಿದೆ. ಅವನು ಮನುಷ್ಯನಲ್ಲ, ರತ್ನ! ನನ್ನನ್ನು ಕಂಡಾಗಲೆಲ್ಲಾ, ಬಹಳ ನಮ್ರತೆಯಿಂದ ನನ್ನ ಕಾಲು ಮುಟ್ಟಿ ನಮಸ್ಕರಿಸುತ್ತಾನೆ.”

ದೇವಕಿ:— “ಎಂತಹ ಸ್ಮಿತವದನ! ನಾನು ಅವನನ್ನು ನೋಡಿದಾಗಲೆಲ್ಲಾ ನಗುಮುಖದಿಂದಲೇ ಇರುತ್ತಾನೆ. ಮಕ್ಕಳಂತಹ ಮನಸ್ಸು. ಅವನ ತಾಯಿಯಂತೂ—ನಾನು ಸತ್ತು ಹೋದರೆ ದಾನೂನ ಊಟ ಮಾಡಿಸುವರಾರು? ಮಲಗಿಸುವರಾರು?—ಎಂದು ಯಾವಾಗಲೂ ಗೋಳಾಡುತ್ತಿರು

ತ್ತಾಳೆ. ದಿನವೆಲ್ಲಾ ಹಸಿವಿನಿಂದಿದ್ದರೂ, ಊಟ ಮಾಡಬೇಕು ಎಂತ ಯಾರೊಡನೆಯೂ ಬಾಯಿ ಬಿಡುವುದಿಲ್ಲ. ಯಾರಾದರೂ ಬಲವಂತದಿಂದ ಕರೆದು ಊಟ ಮಾಡಿಸುವುದಾದರೆ, ನಿದಾನವಾಗಿ ಊಟ ಮಾಡುವನು. ಬಹಳ ಸರಳ ಜೀವಿ. ಅಭಿಮಾನವಂತೂ ಅವನನ್ನು ಸೋಂಕಿಯೇ ಇಲ್ಲ."

ಬದರೀ:— "ಈ ಸಾರೆ ಅವನು ಡಾಕ್ಟರಾಗುವನು."

ಲಾಲಾ ಬದರೀಪ್ರಸಾದರು ಮನಸ್ಸಿನಲ್ಲಿ ಯಾವುದಾದರೂ ಸಂಶಯ ತಲೆದೋರಿದರೆ ಅದಕ್ಕಾಗಿ ಕೊರಗುವ ವ್ಯಕ್ತಿಯಾಗಿರಲಿಲ್ಲ. ಎಂದಾದರೊಂದು ದಿನ ಪ್ರೇಮಾಳ ಲಗ್ನವನ್ನು ನಿಶ್ಚಯಿಸುವುದು ಅವರ ಮನಶ್ಶಾಂತಿಗೆ ಅತ್ಯಾವಶ್ಯಕವಾಗಿತ್ತು. ದಾನನಾಥನ ಪತ್ರಾಂಕಿತ ವಿಷಯವನ್ನು ಪ್ರಸ್ತಾಪಿಸಲು ಇಂತಹ ಒಳ್ಳೆಯ ಸಮಯವು ತಾನಾಗಿಯೇ ಒದಗಿ ಬರಲು ಆನಂದದ ಭರದಲ್ಲಿ ತಡೆಯಲಾರದೆ ಹೇಳಿದರು— "ಇಲ್ಲಿ ನೋಡು ಪ್ರೇಮಾ, ದಾನು ಈಗ ತಾನೇ ಈ ಪತ್ರ ಕಳುಹಿಸಿ ಕೊಟ್ಟಿದ್ದಾನೆ. ನಾನು ನಿನ್ನೊಡನೆ ಈ ವಿಷಯವನ್ನು ಚರ್ಚಿಸಲು ಹೊರಡುವುದರಲ್ಲಿದ್ದೆ. ಅಷ್ಟರಲ್ಲಿ ನೀನೇ ಬಂದುಬಿಟ್ಟೆ."

ಪತ್ರದ ಅಭಿಪ್ರಾಯವೇನು ಎಂಬುದನ್ನು ಪ್ರೇಮಾ ತಕ್ಷಣವೇ ಅರಿತಳು. ಅವಳ ಹೃದಯದ ಬಡಿತ ಹೆಚ್ಚಾಯಿತು. ಅವಳು ನಡುಗುತ್ತಿರುವ ಕೈಗಳಿಂದ ಪತ್ರವನ್ನು ತೆಗೆದುಕೊಂಡಳು. ಆದರೆ ಇದೆಂತಹ ರಹಸ್ಯ! ಬರವಣಿಗೆ ಅಮೃತರಾಯನದೆಂದು ಸ್ಪಷ್ಟವಾಗಿದೆ. ಅವಳ ಕಣ್ಣುಗಳಲ್ಲಿ ನೀರು ತುಂಬಿತು. ಕವರಿನ ಮೇಲೆ ಈ ಬರವಣಿಗೆಯನ್ನು ನೋಡಿದಾಗ ಹಿಂದೆ ಎಂದಾದರೊಂದು ದಿನ ಅವಳ ಮನಸ್ಸು ಎಷ್ಟು ಉಬ್ಬುತ್ತಿತ್ತು!

ಆದರೆ ಇಂದು? ಅದೇ ಬರವಣಿಗೆಯು ಅವಳ ಕಣ್ಣುಗಳನ್ನು ಮುಳ್ಳಿನಂತೆ ಚುಚ್ಚಲಾರಂಭಿಸಿತು. ಒಂದೊಂದಕ್ಷರವೂ ಚೇಳಿನಂತೆ ಅವಳ ಹೃದಯವನ್ನು ಕುಟುಕತೊಡಗಿತು. ಅವಳು ಪತ್ರವನ್ನು ಬಿಚ್ಚಿ ನೋಡಿದಳು, ಅದೇ ಅಕ್ಷರವಾಗಿತ್ತು. ಮಾನಸಿಕ ಶಾಂತಿಯ ಸಂಕೇತದಂತಿರುವ ಅದೇ ಸುಂದರ ಸ್ಪಷ್ಟ ಚಿರಪರಿಚಿತ ಬರಹವಾಗಿತ್ತು. ಪತ್ರದ ಆಶಯವು ಪ್ರೇಮಾಗೆ ತಿಳಿದುದೇ ಆಗಿತ್ತು. ಅವಳು ಇದಕ್ಕೆ ಮೊದಲಿನಿಂದಲೇ ಸಿದ್ಧಳಿದ್ದಳು. ದಾನನಾಥನು ಈ ಸುಸಮಯವನ್ನು ಕಳೆದುಕೊಳ್ಳಲಾರನೆಂದು ಪ್ರೇಮಾಳಿಗೆ ಖಚಿತವಾಗಿತ್ತು. ಧನ್ಯವಾದದೊಡನೆ ಸ್ಪಷ್ಟವಾಗಿ ನಿರಾಕರಿಸುವುದೇ ಪತ್ರಕ್ಕೆ ತಾನು ಕೊಡುವ

ಉತ್ತರವೆಂದು ಅವಳು ಮೊದಲೇ ಆಲೋಚಿಸಿಟ್ಟಳು. ಆದರೆ ಈ ಪತ್ರವು ಅಮೃತರಾಯನ ಲೇಖಣಿಯ ಮೂಲಕ ಹೊರಬೀಳುವುದೆಂಬುದರ ಕಲ್ಪನೆಯೂ ಅವಳಿಗಿರಲಿಲ್ಲ. ಅಮೃತರಾಯನು ಇಂತಹ ನಿರ್ದಯನೇ ಎಂಬುದರ ಪರಿವೆಯೇ ಅವಳಿಗಿರಲಿಲ್ಲ. ಯಾವ ಹೃದಯವು ಅಮೃತರಾಯನೊಡನೆ ವಿಪತ್ತಿನ ಕಠೋರ ಆಘಾತಗಳ ಮತ್ತು ಬಾಧೆಗಳ ದುಸ್ಸಹ ಯಾತನೆಗಳನ್ನು ಸಹಿಸಲು ಸಿದ್ಧವಾಗಿದ್ದಿತೋ, ಅದೇ ಇಂದು ಈ ಅವಹೇಳನದ ವೇದನೆಯನ್ನು ಸಹಿಸಲು ಸಿದ್ಧವಾಗಲಿಲ್ಲ. ಪ್ರೇಮಾ ವರ್ಷಾಂತರಗಳಿಂದ ಅಮೃತರಾಯನಲ್ಲಿಟ್ಟಿದ್ದ ಅತುಲ ಪ್ರೇಮ ಮತ್ತು ನಿಸ್ಸೀಮ ಭಕ್ತಿಗಳು ಒಂದು ಶೀತಳವಾದ ನಿಟ್ಟುಸಿರಿನ ಮೂಲಕ ಶೂನ್ಯವನ್ನು ಸೇರಿದುವು. ದೇಹದ ಅಂಗಾಂಗಗಳೆಲ್ಲವು ಶಿಥಿಲವಾಗುವಂತೆ ಅವಳಿಗೆ ಭಾಸವಾಯಿತು. ಅವಳ ಹೃದಯವು ಕಲ್ಲಾದಂತೆ ತೋರಿತು. ಅವಳಿಗೆ ತಾನೇನು ಮಾತನಾಡುವೆನೆಂಬುದರ ಅರಿವೇ ಇಲ್ಲವಾಯಿತು. ಅವಳ ಬಾಯಿಂದ ಈ ಶಬ್ದಗಳು ಹೊರಬಿದ್ದುವು— "ತಮಗಿಷ್ಟ ಬಂದಂತೆ ಮಾಡಿರಿ; ಅದೆಲ್ಲವೂ ನನಗೆ ಒಪ್ಪಿಗೆ. ಬಾವಿಗೆ ಬೀಳುವುದೇ ನಿಶ್ಚಯವಾಗಿರುವಾಗ, ಅದು ಒಳ್ಳೆಯದಾದರೇನು, ಕೆಟ್ಟದ್ದಾದರೇನು, ಅದರಲ್ಲಿ ಯಾವ ಭೇದವೂ ಇಲ್ಲ—ಎಂಬುದಾಗಿ ಹೇಳುವುದರಲ್ಲಿದ್ದಳು. ಅಷ್ಟರಲ್ಲಿಯೇ ಯಾರೋ ಅವಳನ್ನು ಎಚ್ಚರಗೊಳಿಸಿದಂತಾಯ್ತು. ಅವಳು ತಕ್ಷಣವೇ ಪತ್ರವನ್ನು ಅಲ್ಲಿಯೇ ಎಸೆದು ತನ್ನ ಕೊಠಡಿಗೆ ಬಂದಳು. ಮತ್ತು ಕಿಟಕಿಯ ಮುಂದೆ ನಿಂತುಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಸಂಜೆಯ ವೇಳೆ. ಆಕಾಶದಲ್ಲಿ ನಕ್ಷತ್ರಗಳು ಒಂದೊಂದಾಗಿ ಇಣುಕಿ ನೋಡುತ್ತಿದ್ದವು. ಪ್ರೇಮಾಳ ಹೃದಯಾಕಾಶದಲ್ಲಿ ಕೂಡ ಅದೇ ರೀತಿ ಹಳೆಯ ನೆನಪುಗಳು ಒಂದೊಂದಾಗಿ ಜಾಗ್ರತವಾಗತೊಡಗಿದವು. ನೋಡುತ್ತಿದ್ದಂತೆಯೇ ಗಗನಮಂಡಲವೆಲ್ಲಾ ನಕ್ಷತ್ರಗಳಿಂದ ದೇದೀಪ್ಯಮಾನವಾಯಿತು. ಪ್ರೇಮಾಳ ಹೃದಯಾಕಾಶವೂ ಕೂಡ ವಿವಿಧ ಸ್ಮೃತಿಗಳಿಂದ ಆಚ್ಛಾದಿತವಾಯಿತು. ಆದರೆ ಈ ಅಸಂಖ್ಯ ತಾರೆಗಳಿಗಿಂತಲೂ, ಆಕಾಶದ ಅಂಧಕಾರವು ಮತ್ತಷ್ಟು ಗಹನವಾಗಿದ್ದಿತಲ್ಲವೆ?

# ೮

ವೈಶಾಖದಲ್ಲಿ ಪ್ರೇಮಾಳ ಮದುವೆ ದಾನನಾಥನೊಡನೆ ಆಯಿತು. ಸಂಭ್ರಮವೋ ಸಂಭ್ರಮ! ನಗರದ ಶ್ರೀಮಂತರೆಲ್ಲಾ ಆಹ್ವಾನಿತರಾಗಿದ್ದರು. ಲಾಲಾ ಬದರೀಪ್ರಸಾದರು ಧಾರಾಳವಾಗಿ ಖರ್ಚು ಮಾಡಿದರು. ಆದರೆ ದಾನನಾಥನ ಕಡೆಯಿಂದ ಯಾವ ಏರ್ಪಾಡೂ ಇರಲಿಲ್ಲ. ಅಮೃತರಾಯನು ನಿಧಿ ಸಂಗ್ರಹಕ್ಕಾಗಿ ಬಿಹಾರದ ಕಡೆಗೆ ಹೊರಟು ಹೋಗಿದ್ದನು. ಯಾವ ವಿಧವಾದ ಆಡಂಬರಕ್ಕೂ ಅವಕಾಶ ಕೊಡಕೂಡದೆಂದು ಹೇಳಿ ಹೋಗಿದ್ದನು. ದಾನನಾಥನು ಅವನ ಇಷ್ಟಕ್ಕೆ ವಿರೋಧವಾಗಿ ನಡೆಯಲು ಸಿದ್ಧನಾಗಲಿಲ್ಲ.

ಇತ್ತ ಪೂರ್ಣಾ ತನ್ನ ಮನೆಗೇ ಬಂದುದು ಸುಮಿತ್ರೆಗೆ—ಕುರುಡಿಗೆ ಕಣ್ಣು ಬಂದಂತಾಯಿತು. ಅವಳೊಡನೆ ಎಷ್ಟು ಮಾತನಾಡಿದರೂ ಅವಳಿಗೆ ತೃಪ್ತಿಯಾಗಲೊಲ್ಲದು. ಅರ್ಧ ರಾತ್ರಿಯ ವರೆಗೂ ಕುಳಿತುಕೊಂಡು ಅವಳಿಗೆ ತನ್ನ ದುಃಖದ ಕಥೆಯನ್ನು ಹೇಳುತ್ತಿದ್ದಳು. ಜೀವನದಲ್ಲಿ ಅವಳಿಗೆ ಗೆಳತಿಯರಾರೂ ಇರಲಿಲ್ಲ. ಗಂಡನ ನಿರ್ದಯ ವರ್ತನೆಯು ಅವಳ ಮನಸ್ಸನ್ನು ಸದಾ ಕೊರೆಯುತ್ತಿತ್ತು. ಈ ನಿಷ್ಕರುಣೆಗೆ ಕಾರಣವೇನೆಂಬುದು ಅವಳಿಗೆ ಬಿಡಿಸಲಾರದ ಸಮಸ್ಯೆಯಾಗಿತ್ತು. ಅವಳು ಹೇಳಿಸಿಕೊಳ್ಳುವಷ್ಟು ಸುಂದರಿಯೇನೂ ಆಗಿರಲಿಲ್ಲ. ಆದರೆ ರೂಪಹೀನೆಯೆಂದು ಹೇಳುವಂತಿರಲಿಲ್ಲ. ಆದರೆ ಶೃಂಗಾರ ಪ್ರಿಯಳು. ಗಂಡನ ಮನ ಸೆಳೆಯಲು ದಿನವೂ ಹೊಸ ಹೊಸ ಅಲಂಕಾರ ಮಾಡಿಕೊಳ್ಳುತ್ತಿದ್ದಳು. ಅವಳ ಈ ಅಭೀಷ್ಟವು ಪೂರ್ಣವಾಗದಿದ್ದರೆ ಅವಳ ಹೃದಯಾಂತರಾಳದಲ್ಲಿ ಜ್ವಾಲೆಗಳೇಳುತ್ತಿದ್ದವು. ತುಪ್ಪವನ್ನು ಎರಚುವುದರಿಂದಲೇ ಅವಳ ಹೃದಯಾಗ್ನಿಯು ಪ್ರಜ್ವಲಿಸುತ್ತಿತ್ತು. ಕಮಲಾಪ್ರಸಾದನು ಅವಳೊಡನೆ ಪ್ರೇಮಾಲಾಪಕ್ಕೆ ತೊಡಗಿದನೆಂದರೆ, ಅವಳ ಹೃದಯಕ್ಕೆ ಕಠಾರಿಯಿಂದ ಚುಚ್ಚಿದಂತಾಗುತ್ತಿತ್ತು. ಘಾಯದ ಮೇಲೆ ಉಪ್ಪು ಸುರಿದರೆ ನೋವು ಕಡಿಮೆಯಾಗುವುದೆ? ಮೂರು ವರ್ಷಗಳ ಕೆಳಗೆ ಅವಳು ಕಮಲಾ ಪ್ರಸಾದನ ಕೈ ಹಿಡಿದಾಗ ತನ್ನ ಜನ್ಮ ಸಾರ್ಥಕವಾಯಿತೆಂದು ತಿಳಿದಿದ್ದಳು. ಎರಡು ಮೂರು ತಿಂಗಳು ಸುಖವಾಗಿಯೇ ಕಳೆದು ಹೋದುವು. ಆದರೆ ಪರಸ್ಪರರ ವಿರೋಧ ಪ್ರಕೃತಿಯ ಅನುಭವವಾಗುತ್ತಾ ಹೋದಂತೆಲ್ಲಾ ಅವರು ಒಬ್ಬರಿಂದೊಬ್ಬರು

ದೂರ ಸರಿಯಲಾರಂಭಿಸಿದರು. ಸುಮಿತ್ರೆಯು ಔದಾರ್ಯದ ಗಣಿಯಂತಿದ್ದರೆ, ಕಮಲಾಪ್ರಸಾದನು ಪ್ರಥಮ ದರ್ಜೆಯ ಲೋಭಿಯಾಗಿದ್ದನು. ಅವಳು ಹಣ ವನ್ನು ಹೆಂಚಿನ ಚೂರಿನಂತೆ ನೋಡುತ್ತಿದ್ದರೆ, ಕಮಲಾ ಒಂದು ಕವಡೆಯನ್ನೂ ಜೋಪಾನ ಮಾಡುವುದರಲ್ಲಿ ನಿಸ್ಸೀಮನಾಗಿದ್ದನು. ಸುಮಿತ್ರಾ ಕೈತಡೆಯದೆ ಭಿಕ್ಷುಕರಿಗೆ ದಾನ ಮಾಡುತ್ತಿದ್ದಳು. ಒಂದು ಸಲ ಅವಳ ತೌರುಮನೆಯಿಂದ ಒಬ್ಬ ಬ್ರಾಹ್ಮಣಿಯು ಯಾವುದೋ ಶುಭ ಸಮಾಚಾರ ತಂದಿದ್ದಳು. ಆಗ ಅವಳು ಆಕೆಗೆ ಒಂದು ಹೊಸ ರೇಷ್ಮೆಯ ಸೀರೆಯನ್ನೇ ಕೊಟ್ಟು ಬಿಟ್ಟಿದ್ದಳು. ಅತ್ತ ಕಮಲಾಪ್ರಸಾದನ ಸ್ಥಿತಿಯು ವಿಚಿತ್ರವಾಗಿತ್ತು. ಭಿಕ್ಷುಕರ ಧ್ವನಿಯನ್ನು ಕೇಳುತ್ತಲೇ ರೇಗಿ ಬೀಳುತ್ತಿದ್ದನು. ರೂಲರ್ ಎತ್ತಿಕೊಂಡು ಹೊಡೆಯಲು ಹೋಗುತ್ತಿದ್ದಳು. ಇಬ್ಬರು ಮೂವರನ್ನು ಚೆನ್ನಾಗಿ ಹೊಡೆದೇ ಬಿಟ್ಟಿದ್ದನು. ಮನೆ ಬಾಗಿಲಿಗೆ ಒಂದಾವರ್ತಿ ಬಂದ ಭಿಕ್ಷುಕನಿಗೂ ಕಮಲಾಪ್ರಸಾದನಿಗೂ ಮನಸ್ತಾಪವಾಯಿತೆಂದರೆ, ಅವನಿಗೆ ಇನ್ನೊಂದು ಸಲ ಅಲ್ಲಿಗೆ ಬರುವ ಸಾಹಸ ವಾಗುತ್ತಿರಲಿಲ್ಲ. ಸುಮಿತ್ರೆಯು ನಮ್ರತೆ, ವಿನಯ ಮತ್ತು ಕರುಣೆಯ ಜೀವಂತ ಮೂರ್ತಿಯಾಗಿದ್ದಳು. ಕಮಲಾಪ್ರಸಾದನು ದುರಹಂಕಾರಿ, ಸ್ವೇಚ್ಛಾಹಾರಿ ಮತ್ತು ಸ್ವಾರ್ಥಿಯೆಂದು ಹೆಸರು ಪಡೆದಿದ್ದನು. ಒಂದು ವೃಕ್ಷದ ಜೀವನಾಡಿ ಯಾಗಿದ್ದರೆ, ಮತ್ತೊಂದು ಭೂಮಿಯ ಮೇಲೆ ಅತ್ತಿತ್ತ ಹರಿದಾಡುವ ಕೊಂಬೆ ಯಂತಿತ್ತು. ಅವರಲ್ಲಿ ಸೇರಿಕೆಯಾಗುವುದಾದರೂ ಹೇಗೆ? ದಾಂಪತ್ಯ ಜೀವನದ ಸುಖಕ್ಕೆ ಆಧಾರವಾದ ಧರ್ಮಜ್ಞಾನವು ಇಬ್ಬರಲ್ಲಿ ಯಾರಿಗೂ ಇರಲಿಲ್ಲ.

ಪೂರ್ಣಾ ಬಂದಿದ್ದರಿಂದ ಕಮಲಾ ಮತ್ತು ಸುಮಿತ್ರಾ ಒಬ್ಬರು ಮತ್ತೊಬ್ಬ ರಿಂದ ಮತ್ತಷ್ಟು ದೂರವಾದರು. ಸುಮಿತ್ರೆಯ ಹೃದಯದ ಮೇಲೆ ಹೇರಿದ್ದ ಹೊರೆಯನ್ನು ಯಾರೋ ಕೆಳಗಿಳಿಸಿದಂತಾಯಿತು. ಮೊದಲು ಅವಳು ದಿನ ವೆಲ್ಲಾ ವಿರಕ್ತಾವಸ್ಥೆಯಲ್ಲಿ ಮಂಚದ ಮೇಲೆ ಬಿದ್ದುಕೊಂಡಿರುತ್ತಿದ್ದಳು, ಈಗ ಅವಳು ಯಾವಾಗಲೂ ಹಸನ್ಮುಖಿಯಾಗಿ ಮಾತನಾಡುತ್ತಿದ್ದಳು. ಕಮಲಾ ಪ್ರಸಾದನ ಯೋಚನೆಯನ್ನೇ ಅವಳು ಬಿಟ್ಟುಬಿಟ್ಟಳು. ಅವನು ಯಾವಾಗ ಮನೆಗೆ ಬರುತ್ತಾನೆ, ಯಾವಾಗ ಹೋಗುತ್ತಾನೆ, ಯಾವಾಗ ಊಟ ಮಾಡು ತ್ತಾನೆ, ಯಾವಾಗ ನಿದ್ರಿಸುತ್ತಾನೆಂಬುದರ ಚಿಂತೆಯೇ ಅವಳಿಗಿಲ್ಲವಾಯಿತು.

ಕಮಲಾಪ್ರಸಾದನು ಲಂಪಟನೇನೂ ಆಗಿರಲಿಲ್ಲ. ಅವನಲ್ಲಿ ಎಷ್ಟೇ ದುರ್ಗುಣಗಳಿದ್ದರೂ ಇದೊಂದು ದೋಷ ಅವನಲ್ಲಿರಲಿಲ್ಲವೆಂದೇ ಜನರು ತಿಳಿದಿದ್ದರು. ಪರಸ್ತ್ರೀಯರನ್ನು ಕಣ್ಣೆತ್ತಿ ನೋಡಿದುದನ್ನೇ ಯಾರೂ ಕಂಡಿರಲಿಲ್ಲ. ಹೀಗಿರುವಲ್ಲಿ ಪೂರ್ಣಾಳ ರೂಪವು ಅವನನ್ನು ಹೇಗೆ ಮೋಹಗೊಳಿಸಿತೆಂಬುದರ ರಹಸ್ಯವನ್ನು ಯಾರೂ ಅರಿಯರು. ಪ್ರಾಯಶಃ ಪೂರ್ಣಾಳ ಸರಳತೆ, ದೀನತೆ ಮತ್ತು ಅಸಹಾಯಕತೆಗಳು ಅವನಲ್ಲಿ ಕಾಮವಾಸನೆಯಲ್ಲಿ ಕೆರಳಿಸಿರಬಹುದು. ಅವನ ಲೋಭಿತನ, ಹೇಡಿತನಗಳು ಅವನ ಸದಾಚಾರಕ್ಕೆ ಆಧಾರವಾಗಿದ್ದುವು. ಭೋಗವಿಲಾಸವು ಅಗ್ಗವಾಗಿ ಸಿಕ್ಕುವ ವಸ್ತುವಲ್ಲ. ಕಿಸೆಯಿಂದ ಧಾರಾಳವಾಗಿ ಹಣ ಖರ್ಚು ಮಾಡಿದರೂ ಕೂಡ ಪ್ರತಿಘಳಿಗೆಯಲ್ಲೂ ಯಾವುದಾದರೂ ವಿಪತ್ತಿಗೆ ಸಿಕ್ಕುಬೀಳುವ ಸಂಭವವಿರುವ ಇಂತಹ ಕೆಲಸಕ್ಕೆ ಕಮಲಾಪ್ರಸಾದನಂತಹ ಚತುರ ವ್ಯಕ್ತಿಯು ಎಂದೂ ಕೈಹಾಕುತ್ತಿರಲಿಲ್ಲ. ಪೂರ್ಣಾಳ ವಿಷಯದಲ್ಲಿ ಅವನಿಗೆ ಯಾವ ವಿಧವಾದ ಭಯವೂ ಇರಲಿಲ್ಲ; ಏಟು ತಿನ್ನಬೇಕಾಗುವುದೆಂಬ ಭಯವೂ ಇರಲಿಲ್ಲ. ತನ್ನ ಮನೆಗೇ ಅವಳನ್ನು ಕರೆತಂದು ಸಂಶಯಗಳಿಗೆ ಅವಕಾಶವಿಲ್ಲದಂತೆ ಮಾಡಿದ್ದನು. ಈಗ ತನ್ನ ಮಾರ್ಗವು ನಿರ್ವಿಘ್ನವಾಗಿದೆಯೆಂದೇ ಅವನು ಅರಿತಿದ್ದನು. ಮನೆಯವರ ಕಣ್ಣಿಗೆ ಬೀಳದಂತೆ ಇದ್ದರಾಯಿತು—ಎಂದುಕೊಂಡಿದ್ದನು. ಅದೂ ಅವನಿಗೆ ಅಷ್ಟೇನೂ ಕಠಿಣವಾಗಿರಲಿಲ್ಲ. ಆದರೆ ಇಲ್ಲಿಯೂ ಒಂದು ಅಡ್ಡಿ ಬಂದೇ ಬಿಟ್ಟಿತು. ಆ ಅಡ್ಡಿಯೇ ಸುಮಿತ್ರೆ. ಸುಮಿತ್ರೆಯು ಪೂರ್ಣಾಳನ್ನು ಒಂದು ಕ್ಷಣಕಾಲವೂ ಬಿಟ್ಟಿರುತ್ತಿರಲಿಲ್ಲ. ಇಬ್ಬರೂ ಜೊತೆಯಲ್ಲಿಯೇ ಊಟ ಮಾಡುತ್ತಿದ್ದರು. ಮಹಡಿಯ ಮೇಲೆ ಇಬ್ಬರೂ ಜೊತೆಯಾಗಿಯೇ ವಿಹರಿಸುತ್ತಿದ್ದರು. ಹಗಲೂ ಜೊತೆಯಾಗಿರುತ್ತಿದ್ದರು, ರಾತ್ರಿಯೂ ಜೊತೆಯಾಗುತ್ತಿದ್ದರು. ಕೆಲವು ವೇಳೆ ಇಬ್ಬರೂ ಜೊತೆಯಲ್ಲಿಯೇ ಮಲಗುತ್ತಿದ್ದರು. ಕಮಲಾಪ್ರಸಾದನು ಶಯನಗ್ರಹವನ್ನು ಪ್ರವೇಶಿಸಿ ಸುಮಿತ್ರೆಯ ದಾರಿ ಕಾದು ಸಾಕಾಗಿ ನಿದ್ದೆ ಹೋಗುತ್ತಿದ್ದನು. ಅವಳು ಅವನ ಬಳಿಗೆ ಬಂದುದೇ ಗೊತ್ತಾಗುತ್ತಿರಲಿಲ್ಲ. ಪೂರ್ಣಾಳೊಡನೆ ಏಕಾಂತದಲ್ಲಿ ಏನಾದರೂ ಮಾತನಾಡಲು ಅವನಿಗೆ ಅವಕಾಶವೇ ಸಿಕ್ಕುತ್ತಿರಲಿಲ್ಲ. ಅವಳು ಮನಸ್ಸಿನಲ್ಲಿಯೇ ಸುಮಿತ್ರೆಯನ್ನು ಶಪಿಸುತ್ತಿದ್ದಳು. ಕೊನೆಗೆ ಒಂದು ದಿನ ಅವನಿಂದ ತಡೆಯಲಾಗಲಿಲ್ಲ. ರಾತ್ರಿ ಸುಮಿತ್ರಾ ಶಯನಗೃಹವನ್ನು

ಪ್ರವೇಶಿಸುತ್ತಲೇ ಹೇಳಿದ— "ನೀನು ಹಗಲು ರಾತ್ರಿಯೆಲ್ಲಾ ಪೂರ್ಣಾಳ ಬಳಿ ಏಕೆ ಕುಳಿತಿರುತ್ತೀಯೆ? ಇದೆಲ್ಲಿಯ ಪೀಡೆ ನನಗೆ ಗಂಟುಬಿತ್ತು ಎಂದು ಅವಳು ಮನಸ್ಸಿನಲ್ಲಿ ಯೋಚಿಸುತ್ತಿರಬಹುದು. ನಿನ್ನ ಮಾತಿನಿಂದ ಅವಳಿಗೆ ಆನಂದವನ್ನುಂಟು ಮಾಡುವ ಚತುರೆಯೂ ಅಲ್ಲ, ನೀನು. ನಿನ್ನ ದಡ್ಡತನಕ್ಕಾಗಿ ಅವಳು ನಗುತ್ತಿರಬಹುದು."

ಸುಮಿತ್ರೆ ಹೇಳಿದಳು— "ಒಂಟಿಯಾಗಿ ಬಿದ್ದುಕೊಂಡು ನಾನೇನು ಮಾಡಲಿ? ನಾನು ಸುಖವಾಗಿ ಮಲಗುವುದೂ ಅವಳು ಏಕಾಂಗಿಯಾಗಿ ಅಳುತ್ತಿರುವುದೂ ನನಗೆ ಸರಿಬೀಳುವುದಿಲ್ಲ. ನಾನು ಹೊರಡಲು ಎದ್ದರೆ ಸರಿ, ಓಡಿ ಬಂದು ನನ್ನನ್ನು ಅಪ್ಪಿಕೊಂಡು ಬಿಡುತ್ತಾಳೆ, ಬಿಡುವುದೇ ಇಲ್ಲ. ಮನಸ್ಸಿನಲ್ಲಿ ನನ್ನ ಅವಿವೇಕಕ್ಕಾಗಿ ನಗುತ್ತಾಳೋ ಇಲ್ಲವೋ, ಇದನ್ನು ಅರಿತವರು ಯಾರೂ ಇಲ್ಲ; ಆದರೆ ನನ್ನ ಸಹವಾಸ ಅವಳಿಗೆ ಸರಿಬೀಳುವುದಿಲ್ಲ ಎಂಬ ಮಾತು ಸುಳ್ಳು."

"ಅವಳಿಗೂ ನಿನಗೂ ಸಮಾನತೆಯಿಲ್ಲವೆಂಬ ಆಲೋಚನೆಯಾದರೂ ನಿನ್ನ ಮೆದುಳಿನಲ್ಲಿ ಸುಳಿಯುತ್ತದೆಯೆ? ಅವಳು ನಿನ್ನ ಗೆಳತಿಯಾಗಲು ಅರ್ಹಳಲ್ಲ."

"ನಾನು ಹಾಗೆ ಭಾವಿಸುವುದಿಲ್ಲ. ಇಂಥ ಭಾವನೆ ನನ್ನ ಮೆದುಳಿನಲ್ಲಿ ಸುಳಿಯದಿರುವುದೇ ಮೇಲು."

ಅಂದಿನಿಂದ ಸುಮಿತ್ರಾ ನೆರಳಿನಂತೆ ಪೂರ್ಣಾಳ ಜೊತೆ ಇರತೊಡಗಿದಳು.

ಕಮಲಾಪ್ರಸಾದನ ನಡವಳಿಕೆಯಲ್ಲಿ ಈಗ ಒಂದು ವಿಚಿತ್ರವಾದ ಪರಿವರ್ತನೆಯಾಗುತ್ತಿತ್ತು. ಈಗ ಸಿನೇಮಾ ನೋಡಬೇಕೆಂಬ ಷೋಕಿಯೂ ಅವನಲ್ಲಿರಲಿಲ್ಲ. ಆಳು ಕಾಳುಗಳನ್ನು ಹೆದರಿಸುವುದೂ ಕಡಿಮೆಯಾಯಿತು. ಸ್ವಲ್ಪ ಉದಾರಿಯೂ ಆದನು. ಒಂದು ದಿನ ಪೇಟೆಯಿಂದ ಬಂಗಾಳಿ ಮಿಠಾಯಿ ತಂದನು. ಅದನ್ನು ಸುಮಿತ್ರೆಯ ಕೈಯಲ್ಲಿಡುತ್ತಾ ಹೇಳಿದನು— "ಹಾಗೆಯೇ ನಿನ್ನ ಗೆಳತಿಗೂ ಸ್ವಲ್ಪ ರುಚಿ ತೋರಿಸು."

ಸುಮಿತ್ರೆಯು ಮಿಠಾಯಿ ತೆಗೆದುಕೊಂಡಳು; ಆದರೆ ಪೂರ್ಣಾಳೊಡನೆ ಅದರ ವಿಷಯವನ್ನೇ ಎತ್ತಲಿಲ್ಲ. ಮಾರನೆಯ ದಿನ ಕಮಲಾ ಕೇಳಿದ—

"ಪೂರ್ಣಾಗೆ ಮಿಠಾಯಿ ಬಹಳ ಒಪ್ಪಿಗೆಯಾಗಿರಬಹುದಲ್ಲವೆ ?" ಸುಮಿತ್ರಾ ಹೇಳಿದಳು— "ಖಂಡಿತವಾಗಿಯೂ ಇಲ್ಲ. ಮಿಠಾಯಿಯೆಂದರೆ ನನಗೆ ಇಷ್ಟವೆ ಇಲ್ಲ ಎಂದು ಹೇಳುತ್ತಿದ್ದಳು."

ಅನೇಕ ದಿನಗಳ ನಂತರ ಒಂದು ದಿನ ಕಮಲಾಪ್ರಸಾದನು ಎರಡು ರೇಷ್ಮೆಯ ಸೀರೆಗಳನ್ನು ತಂದನು ಮತ್ತು ಸಂಕೋಚವಿಲ್ಲದೆಯೇ ತನ್ನ ಶಯನ ಗೃಹವನ್ನು ಪ್ರವೇಶಿಸಿದನು. ಇಬ್ಬರು ಗೆಳತಿಯರು ಒಂದೇ ಮಂಚದ ಮೇಲೆ ಒರಗಿಕೊಂಡು ಮಾತನಾಡುತ್ತಿದ್ದರು. ಕಮಲಾಪ್ರಸಾದನನ್ನು ನೋಡುತ್ತಲೇ ಕಕ್ಕಾಬಿಕ್ಕಿಯಾಗಿ ಎದ್ದು ನಿಂತರು. ಪೂರ್ಣಾಳ ತಲೆಯ ಮೇಲೆ ಮುಸುಕು ಜಾರಿ ಹೋಗಿತ್ತು; ನಾಚಿಕೆಯಿಂದ ಅವಳ ದೇಹವಾದ್ಯಂತವೂ ಬೆವರಿತು. ಸುಮಿತ್ರೆಯು ಕುಪಿತ ನೇತ್ರಗಳಿಂದ ಗಂಡನ ಕಡೆಗೊಮ್ಮೆ ನೋಡಿದಳು.

ಕಮಲಾ ಹೇಳಿದ— "ಓಹೋ ! ಪೂರ್ಣಾನೂ ಇಲ್ಲೇ ಇದ್ದಾಳೇನು? ನನಗೆ ಗೊತ್ತಿರಲಿಲ್ಲ ಪೂರ್ಣಾ. ನನ್ನನ್ನು ಕ್ಷಮಿಸಿ ಬಿಡು. ಇಲ್ಲಿ ನೋಡು ಸುಮಿತ್ರಾ, ಎರಡು ಸೀರೆಗಳನ್ನು ತಂದಿದ್ದೇನೆ. ಬಹಳ ಅಗ್ಗದ ಬೆಲೆಗೆ ಸಿಕ್ಕಿದುವು. ಒಂದನ್ನು ನೀನು ತೆಗೆದುಕೋ, ಮತ್ತೊಂದನ್ನು ಪೂರ್ಣಾಗೆ ಕೊಟ್ಟು ಬಿಡು."

ಸುಮಿತ್ರೆಯು ಸೀರೆಗಳನ್ನು ಮುಟ್ಟದೆಯೇ ಹೇಳಿದಳು— "ಇಂದು ಇವುಗಳ ಅಗತ್ಯವೇನಿತ್ತು ? ನನ್ನಲ್ಲಿ ಸೀರೆಗಳಿಗೇನೂ ಕೊರತೆಯಿಲ್ಲ. ಪೂರ್ಣಾಗೆ ರೇಷ್ಮೆ ಸೀರೆಗಳನ್ನುಡಬೇಕೆಂಬ ಅಪೇಕ್ಷೆಯಾದರೆ, ನನ್ನ ಹೊಸ ಸೀರೆಗಳಲ್ಲಿಯೇ ಯಾವುದಾದರೂ ಒಂದನ್ನು ಕೊಡುವೆನು. ಏನು ಸೋದರಿ, ಇವುಗಳಲ್ಲಿ ನಿನಗೆ ಯಾವುದಾದರೂ ಬೇಕೆ ?"

ಪೂರ್ಣಾ ತಲೆಯಲ್ಲಾಡಿಸಿ ಹೇಳಿದಳು— "ಬೇಡ, ರೇಷ್ಮೆ ಸೀರೆ ತೆಗೆದುಕೊಂಡು ನಾನೇನು ಮಾಡಬೇಕು ?"

ಕಮಲಾ:— "ಏಕೆ? ರೇಷ್ಮೆ ಸೀರೆ ಯಾವಾಗಲೂ ಮಡಿ ತಾನೆ ?"

ಸುಮಿತ್ರಾ:— "ಮೈಲಿಗೆಯ ಪ್ರಶ್ನೆಯಿಲ್ಲ; ಆದರೆ ಅಲಂಕಾರದ ವಸ್ತುವಲ್ಲವೇ ? ಎಲ್ಲರಿಗಿಂತ ಮೊದಲು ನಿಮ್ಮ ಮಾತೃಶ್ರೀಯವರ ಕಣ್ಣುಗಳು ಕೆಂಪಾಗುವುವು !"

ಕಮಲಾ:— "ಆದರೆ ಈಗ ನಾನು ಇವುಗಳನ್ನು ಹಿಂದಕ್ಕೆ ಕೊಡಲಾರೆ,

ಬೆಲೆ ಕೇಳಿ ಹೆದರಿಬಿಟ್ಟೆನೆಂದು ಸೇಠ್ ಭಾವಿಸುವುದಿಲ್ಲವೆ ?"

ಸುಮಿತ್ರಾ:— "ಬಹಳ ಚೆನ್ನಾಗಿದ್ದರೆ ಪ್ರೇಮಾಳ ಮನೆಗೆ ಕಳುಹಿಸಿ ಕೊಡುವೆನು. ನೀವು ಕೊಂಡುಕೊಟ್ಟ ಸೀರೆಯನ್ನು ನೋಡಿ, ಅವಳು ತನ್ನ ಭಾಗ್ಯವನ್ನು ಸಾವಿರ ಸಾರಿ ಕೊಂಡಾಡುವಳು. ಇತ್ತೀಚೆಗೆ ಯಾವುದೋ ಬಿಟ್ಟಿ ಹಣ ನಿಮಗೆ ಸಿಕ್ಕಿರುವ ಹಾಗೆ ಕಾಣುತ್ತೆ. ಯಾರ ಕೊರಳು ಕೊಯಿದಿ ರುವಿರೊ, ನಿಜವಾಗಿ ಹೇಳಿರಿ. ನಿಮ್ಮ ಗಂಟಿನ ಹಣ ಖರ್ಚು ಮಾಡಿ ಇಂಥ ವ್ಯರ್ಥವಾದ ವಸ್ತುಗಳನ್ನು ನನಗೆಂದೂ ತಂದುಕೊಟ್ಟಿಲ್ಲ."

ಕಮಲಾಪ್ರಸಾದನು ಆಗ್ನೇಯ ನೇತ್ರಗಳಿಂದ ಸುಮಿತ್ರೆಯನ್ನು ನೋಡುತ್ತಾ ಹೇಳಿದನು— "ನಿಮ್ಮಪ್ಪನ ಕಬ್ಬಿಣದ ಪೆಟ್ಟಿಗೆ ಬೀಗ ಮುರಿದಿದ್ದೆ; ಹಾಗಿಲ್ಲದಿದ್ದರೆ ದರೋಡೆ ಮಾಡಲು ನಾನೆಲ್ಲಿಗೆ ಹೋಗಬೇಕಿತ್ತು ?"

ಸುಮಿತ್ರಾ:—"ನೀವು ಅವರನ್ನು ಕೇಳಿದ್ದರೆ ಕೊಟ್ಟೇಬಿಡುತ್ತಿದ್ದರು. ಬೀಗ ಮುರಿಯುವ ಪ್ರಸಂಗವೇ ಬರುತ್ತಿರಲಿಲ್ಲ. ನಿಮ್ಮ ಸ್ವಭಾವ ನೀವೆಲ್ಲಿ ಬಿಟ್ಟೀರಿ."

ಕಮಲಾಪ್ರಸಾದನು ಪೂರ್ಣಾಳ ಕಡೆಗೆ ತಿರುಗಿ ಹೇಳಿದನು— "ಇವಳ ಮಾತು ಕೇಳುತ್ತಿದ್ದೀಯೊ, ಪೂರ್ಣಾ. ಗಂಡನೊಡನೆ ಮಾತನಾಡುವ ರೀತಿಯೇ ಹೀಗಲ್ಲವೆ? ನೀನಾದರೂ ಅವಳಿಗೆ ಬುದ್ಧಿ ಹೇಳಬಾರದೆ? ಇನ್ನೇನೂ ಬೇಡ, ಮನುಷ್ಯ ನಿಷ್ಕಳಂಕ ಹೃದಯದಿಂದಲಾದರೂ ಮಾತ ನಾಡಬಾರದೆ? ನೀನು ಬಂದಾಗಿನಿಂದ ಇವಳ ಸ್ವಭಾವ ಗಗನಕ್ಕೇರಿದೆ."

ಪೂರ್ಣಾಳಿಗೆ ಸುಮಿತ್ರೆಯ ಈ ಕಠೋರ ವರ್ತನೆಯು ಕೆಡುಕೆನಿಸಿತು. ಏಕಾಂತದಲ್ಲಿ ಕಮಲಾಪ್ರಸಾದನು ಸುಮಿತ್ರೆಯ ಮೇಲೆ ರೇಗುತ್ತಿದ್ದನು; ಆದರೆ ಈಗ ಸುಮಿತ್ರೆಯೇ ಅವನ ಮೇಲೆ ಉರಿದು ಬೀಳುತ್ತಿದ್ದಳು. ಕಮಲಾಪ್ರಸಾದ ನೇನಾದರೂ ತನ್ನ ಮೇಲೆ ಕೋಪಿಸಿಕೊಂಡರೆ, ತಾನು ಈ ಮನೆ ಬಿಟ್ಟು ಹೋಗಬೇಕಾಗುವುದೆಂಬ ಭಯವೂ ಪೂರ್ಣಾಗೆ ಆಯಿತು. ಅವನ ಮನಸ್ಸಿಗೆ ಬೇಸರವನ್ನುಂಟು ಮಾಡಿ ಇಲ್ಲಿ ಒಂದು ದಿನವೂ ತನ್ನಿಂದ ಇರಲಾಗುವುದಿಲ್ಲ ವೆಂಬುದೂ ಅವಳಿಗೆ ಚೆನ್ನಾಗಿ ಗೊತ್ತಿತ್ತು. ಆದ್ದರಿಂದ ಅವಳು ಸುಮಿತ್ರೆ ಯನ್ನು ಸಮಾಧಾನ ಮಾಡಲೆತ್ನಿಸುತ್ತಿದ್ದಳು.

"ನಾನೇನೊ ಒಂದೇ ಸವನೆ ಸಮಾಧಾನ ಮಾಡುತ್ತಲೇ ಇರುತ್ತೇನೆ, ಅಣ್ಣಾ. ನಾನು ಸುಳ್ಳು ಹೇಳುತ್ತೇನೆಂದು ನಿಮಗನುಮಾನವಾದರೆ ಅಕ್ಕನನ್ನೇ

ಕೇಳಿರಿ." ಎಂದಳು ಪೂರ್ಣಾ.

ಸುಮಿತ್ರೆಯು ಉದ್ರೇಕಗೊಂಡವಳಂತೆ ನುಡಿದಳು— "ಪೂರ್ಣಾ ಬಂದಿದ್ದರಿಂದ ನನ್ನ ಗರ್ವ ಹೆಚ್ಚಾಗಿದೆ ಅಂದ್ರಲ್ಲ, ಅದನ್ನ ನನಗೆ ಸ್ಪಷ್ಟವಾಗಿ ತಿಳಿಸಿ. ನನ್ನನ್ನೇನು ಇವಳು ಸಿಂಹಾಸನವನ್ನೇರಿಸಿಲ್ಲ. ಸರಿ, ಆಗ ಏಕಾಂಗಿಯಾಗಿ ಬಿದ್ದುಕೊಂಡಿರುತ್ತಿದ್ದೆ. ಈಗ ಒಂದೆರಡು ಕ್ಷಣಕಾಲ ಇವಳ ಬಳಿ ಕುಳಿತಿರುತ್ತೇನೆ. ಇದೂ ನಿಮಗೆ ಸಹನೆಯಾಗುವುದಿಲ್ಲವೆ?"

ಕಮಲಾ:—"ನೀನು ವ್ಯರ್ಥವಾಗಿ ಮಾತು ಬೆಳಸುತ್ತಿರುವೆ, ಸುಮಿತ್ರಾ. ನೀನು ಇವಳ ಸಹವಾಸದಲ್ಲಿರಬೇಡವೆಂದು ನಾನು ಯಾವಾಗ ನಿನಗೆ ಹೇಳಿದ್ದೆ? ನಾನು ಎಂದೂ ಇಂತಹ ಮಾತನ್ನು ಆಡಿಯೇ ಇಲ್ಲ."

ಸುಮಿತ್ರಾ:— "ಹಾಗಾದರೆ 'ಪೂರ್ಣಾ ಬಂದಾಗಿನಿಂದ ನಿನ್ನ ಗರ್ವ ಗಗನಕ್ಕೇರಿದೆ' ಎಂದು ಹೇಳುವುದರ ಆಶಯವೇನು?"

ಕಮಲಾ:— "ಹಾಗಾದರೆ ನಾನು ಹೇಳುತ್ತಿರುವುದು ಸುಳ್ಳೆ? ಪೂರ್ಣಾ ತಾನೇ ನೋಡುತ್ತಿದ್ದಾಳೆ. ನೀನು ಇವಳ ಸತ್ಸಂಗದಿಂದ ಸ್ವಲ್ಪವಾದರೂ ನೀತಿಯನ್ನು ಕಲಿಯಬೇಕಾಗಿತ್ತು. ಇವಳನ್ನು ನಾನು ಇಲ್ಲಿಗೆ ಕರೆತಂದುದರ ಉದ್ದೇಶವೂ ಇದೇ ಆಗಿತ್ತು. ಆದರೆ ಇವಳ ಸದ್ಗುಣಗಳ ವಿರೋಧ ಪರಿಣಾಮವೇ ನಿನ್ನ ಮೇಲೆ ಆಗಿರುವಂತೆ ಕಾಣುತ್ತದೆ. ಪಾಪ, ಇವಳೇನೋ ನಿನಗೆ ತಿಳುವಳಿಕೆ ಕೊಡುತ್ತಿರಬಹುದು, ಆದರೆ ನೀನು ಕೇಳಬೇಕಲ್ಲ! ಯಾವಾಗ ನೀನು ನನ್ನನ್ನೇ ಲಕ್ಷಿಸುವುದಿಲ್ಲವೋ; ಆಗ ಇವಳನ್ನು ಲಕ್ಷಿಸುವೆಯೊ? ಪರಮಾತ್ಮ ಸಮಸ್ತ ದುಃಖಗಳನ್ನೂ ಕೊಡಲಿ, ಆದರೆ ಕೆಟ್ಟ ಸಹವಾಸವನ್ನುಮಾತ್ರ ಕೊಡದಿರಲಿ. ನೀನು ಇವುಗಳಲ್ಲಿ ಒಂದು ಸೀರೆ ಉಟ್ಟುಕೊ, ಪೂರ್ಣಾ, ಇನ್ನೊಂದನ್ನು ನಾನು ಪ್ರೇಮಾಗೆ ಕಳುಹಿಸಿಕೊಡುತ್ತೇನೆ."

ಸುಮಿತ್ರೆಯು ಎರಡೂ ಸೀರೆಗಳನ್ನು ಎತ್ತಿಕೊಂಡು ಬಾಗಿಲ ಕಡೆ ಎಸೆದುಬಿಟ್ಟಳು. ಎರಡೂ ಕಾಗದದಿಂದ ಸುತ್ತಿ ಇಡಲ್ಪಟ್ಟಿದ್ದುವು. ಅಂಗಳಕ್ಕೆ ಹೋಗಿ ಬಿದ್ದುವು. ಮನೆಗೆಲಸದವಳು ಆಗ ತಾನೆ ಅಂಗಳವನ್ನು ತೊಳೆಯುತ್ತಿದ್ದಳು. ಅವಳು ಓಡಿಹೋಗಿ ಅವುಗಳನ್ನು ಎತ್ತಿಕೊಳ್ಳುವಷ್ಟರಲ್ಲಿಯೇ ಕಾಗದ ಒದ್ದೆಯಾಯಿತು ಮತ್ತು ಸೀರೆಗಳ ಮೇಲೆ ಅಲ್ಲಲ್ಲಿ ಕಲೆಯುಂಟಾಯಿತು. ಪೂರ್ಣಾ ತಿರಸ್ಕಾರದಿಂದ ನುಡಿದಳು— "ಇದೇನು ಮಾಡಿದೆ, ಅಕ್ಕ? ನೋಡು ಸೀರೆ

ಗಳೆಲ್ಲಾ ಕೆಟ್ಟು ಹೋದುವು."

ಕಮಲಾ:— " ಇವಳ ಕೆಲಸಗಳನ್ನು ನೋಡುತ್ತಲೇ ಇರು ! ಇಷ್ಟಾದರೂ ನಾನೇ ಕೆಟ್ಟವನು. ಯುಗ ಯುಗಾಂತರಗಳ ದೋಷಗಳೆಲ್ಲಾ ನನ್ನಲ್ಲಿಯೇ ತುಂಬಿಕೊಂಡಿವೆ ! "

ಸುಮಿತ್ರಾ:–" ನಿಮ್ಮ ಸೀರೆಗಳನ್ನೇಕೆ ತೆಗೆದುಕೊಂಡು ಹೋಗುವುದಿಲ್ಲ?"

ಕಮಲಾ:— "ನಾನು ನಿನಗೆ ಕೊಡುತ್ತಿಲ್ಲ."

ಸುಮಿತ್ರಾ:— "ಪೂರ್ಣಾನೂ ತೆಗೆದುಕೊಳ್ಳುವುದಿಲ್ಲ."

ಕಮಲಾ:— "ಅವಳ ಪರವಾಗಿ ಮಾತನಾಡಲು ನೀನಾರು ? ನಿನ್ನನ್ನು ನೀನು ನೋಡಿಕೊಳ್ಳುವೆಯೋ ಅಥವಾ ಪ್ರಪಂಚದವರೆಲ್ಲರ ರಕ್ಷಣಾ ಭಾರವನ್ನು ನೀನೇ ಹೊತ್ತಿರುವೆಯೋ? ಹೇಳು ಪೂರ್ಣಾ, ನೀನು ಒಂದನ್ನು ಇಟ್ಟುಕೊಳ್ಳುವಿಯಷ್ಟೇ? ನೀನು ತಿರಸ್ಕರಿಸುವುದಾದರೆ, ನನಗೆ ತುಂಬಾ ವ್ಯಥೆಯಾಗುವುದು. "

ಪೂರ್ಣಾ ಧರ್ಮ ಸಂಕಟಕ್ಕೆ ಸಿಕ್ಕಿಬಿದ್ದಳು. ಅವಳು ಸೀರೆಯನ್ನು ಸ್ವೀಕರಿಸಿದರೆ ಸುಮಿತ್ರೆಯು ತಪ್ಪು ಅಭಿಪ್ರಾಯಪಡುವಳು; ಸ್ವೀಕರಿಸದಿದ್ದರೆ ಕಮಲಾಪ್ರಸಾದನಿಗೆ ಬೇಸರವಾಗುವುದು. ಸುಮಿತ್ರೆಯು ಏಕೆ ಇಷ್ಟು ದುರಾಗ್ರಹ ಮಾಡುತ್ತಿದ್ದಾಳೆ, ಏಕೆ ಇಷ್ಟು ರೇಗಿ ಬೀಳುತ್ತಿದ್ದಾಳೆ—ಎಂಬುದರ ಮೂಲ ಕಾರಣ ಅವಳಿಗೆ ತಿಳಿಯದಿರಲಿಲ್ಲ. ಎರಡು ಸಮಸ್ಯೆಗಳ ವಿಷಯವನ್ನು ಮನಸ್ಸಿನಲ್ಲಿಯೇ ಚರ್ಚಿಸಿ, ಸುಮಿತ್ರೆಯನ್ನು ಒಲಿಸಿಕೊಳ್ಳುವುದೇ ಶ್ರೇಯಸ್ಕರ ಎಂಬ ತೀರ್ಮಾನಕ್ಕೆ ಬಂದಳು ಅವಳು. ಕಮಲಾಪ್ರಸಾದನು ಕೋಪಿಸಿಕೊಳ್ಳುವುದರಿಂದ ಅವಳಿಗೆ ಯಾವ ಹಾನಿಯೂ ಆಗುವಂತಿರಲಿಲ್ಲ. ಹೆಚ್ಚು ಎಂದರೆ ಅವಳು ಈ ಮನೆ ಬಿಟ್ಟು ಹೊರಟು ಹೋಗಬೇಕಾಗಬಹುದು. ಸುಮಿತ್ರೆ ಕೋಪಿಸಿಕೊಂಡಳೆಂದರೆ, ಮುಂದಾಗುವ ಅನರ್ಥವನ್ನು ಊಹಿಸುವುದೂ ಕಷ್ಟ. ಅವಳ ಮನಸ್ಸಿನಲ್ಲಿ ಎಂಥೆಂಥ ಕುತ್ಸಿತ ಭಾವನೆಗಳೇಳುವುವೋ ಬಲ್ಲವರಾರು ?

"ಅಣ್ಣಾ, ರೇಷ್ಮೆ ಸೀರೆಗಳನ್ನುಡುವುದು ನನ್ನ ಪಾಲಿಗೆ ನಿಷೇಧ. ಇವುಗಳನ್ನು ತೆಗೆಗುಕೊಂಡು ನಾನೇನು ಮಾಡಲಿ. ನಿಮಗಿಷ್ಟವಾದರೆ ಯಾವುದಾದರೂ ಒರಟಾದ ಬಿಳಿಯ ಸೀರೆಯನ್ನು ತಂದು ಕೊಡಿರಿ. " ಎಂದಳು ಪೂರ್ಣಾ.

ಹೀಗೆ ಹೇಳಿ ಅವಳು ಕಮಲಾ ಪ್ರಸಾದನ ಕಡೆಗೆ ಅಸಹಾಯಕ ದೃಷ್ಟಿಯನ್ನು ಬೀರಿದಳು. ಆ ನೋಟದಲ್ಲಿ ಎಂತಹ ದೈನ್ಯ, ಕ್ಷಮಾಯಾಚನೆಯ ಭಾವನೆಗಳು ತುಂಬಿದ್ದುವು! "ತೆಗೆದುಕೊಳ್ಳುವ ಇಷ್ಟವೇನೋ ಇದೆ. ಆದರೆ ಹೇಗೆ ತೆಗೆದುಕೊಳ್ಳಲಿ? ಈಕೆಯನ್ನು ನೀವು ನೋಡುತ್ತಲೇ ಇರುವಿರಲ್ಲವೆ? ನನ್ನನ್ನು ಬಿಟ್ಟು ಓಡಿಸುವ ಇಚ್ಛೆಯೇನಾದರೂ ಇದೆಯೆ?" ಎಂದು ಹೇಳುತ್ತಿದೆಯೋ ಎಂಬಂತಿತ್ತು ಆ ನೋಟ.

ಕಮಲಾಪ್ರಸಾದನು ಯಾವ ಉತ್ತರವನ್ನೂ ಕೊಡಲಿಲ್ಲ. ಸೀರೆಗಳನ್ನು ಕೈಗೆತ್ತಿಕೊಂಡು ವೇಗವಾಗಿ ಹೆಜ್ಜೆ ಹಾಕುತ್ತಾ ಹೊರಗೆ ಹೊರಟು ಹೋದನು.

## ೬

ಸೀರೆಗಳನ್ನು ತಿರಸ್ಕರಿಸಿ, ಕಮಲಾಪ್ರಸಾದನ ಮನ ನೋಯಿಸಿದರೂ ಕೂಡ ಪೂರ್ಣಾಳ ಮನೋರಥವು ಸಿದ್ಧಿಸಲಿಲ್ಲ. ಸುಮಿತ್ರೆಯ ಹೃದಯದಲ್ಲಿ ಯಾವುದೋ ಕ್ರೂರ ಜಂತುವಿನೋಪಾದಿಯಲ್ಲಿ ನೆಲಸಿದ್ದ ಆ ಸಂದೇಹವನ್ನು ಸ್ವಲ್ಪವಾದರೂ ಕದಲಿಸುವುದು ಅವಳಿಂದಾಗಲಿಲ್ಲ ಪಾಪ, ಅವಳು ಇತ್ತಂಡಕ್ಕೆ ಸಿಕ್ಕಿ ನರಳಬೇಕಾಯಿತು. ಕಮಲಾಪ್ರಸಾದನಿಗೆ ಕೋಪ ಬಂದೇ ಬಿಟ್ಟಿತ್ತು. ಸುಮಿತ್ರಾ ಕೂಡ ಮುಖ ಊದಿಸಿಕೊಂಡಿದ್ದಳು. ಪೂರ್ಣಾ ಎಷ್ಟೋ ಸಾರಿ ಲೋಕಾಭಿರಾಮವಾಗಿ ಮಾತನಾಡುತ್ತಾ ಅವಳ ಮನಸ್ಸನ್ನು ಪ್ರಸನ್ನಗೊಳಿಸಲು ಪ್ರಯತ್ನಿಸಿದಳು; ಆದರೆ ಸುಮಿತ್ರೆಯ ಹುಬ್ಬು ಗಂಟಿಕ್ಕಿದವು; ಅವಳು ರೇಗುತ್ತಲೇ ಹೇಳಿದಳು— "ಈಗ ನನ್ನೊಡನೆ ಏನೂ ಹೇಳಬೇಡ ಪೂರ್ಣಾ. ನನಗೇನೂ ತೋಚುತ್ತಿಲ್ಲ. ನಾನು ಜನ್ಮತಃ ಹತಭಾಗಿನಿ; ಹಾಗಿಲ್ಲದಿದ್ದರೆ ನಾನೇಕೆ ಈ ಮನೆಗೆ ಕಾಲಿಡುತ್ತಿದ್ದೆ? ನೀನೇಕೆ ಬರುತ್ತಿದ್ದೆ? ನೀನು ಬಂದಾಗ ವಿಶೇಷವೇನೂ ಇಲ್ಲದಿದ್ದರೂ ಕೂಡ ನನ್ನ ದುಃಖ ಕಥೆಯನ್ನಾದರೂ ನಿನಗೆ ಹೇಳಿ ನನ್ನ ಮನಸ್ಸಿನ ಭಾರವನ್ನು ಕಡಿಮೆ ಮಾಡಿಕೊಳ್ಳಬೇಕೆಂದಿದ್ದೆ; ಆದರೆ ಆದದ್ದೇ ಬೇರೆ. ಇದರಲ್ಲಿ ನಿನ್ನ ತಪ್ಪೇನೂ ಇಲ್ಲ, ಎಲ್ಲವೂ

ನನ್ನ ಪ್ರಾರಬ್ಧ ಕರ್ಮ. ಈಗ ನೀನು ಹೋಗು, ಏಕಾಂತದಲ್ಲಿ ಅತ್ತು ಅತ್ತು ಹೃದಯದ ಬೇಗೆಯನ್ನು ಶಾಂತಗೊಳಿಸಲು ನನಗೆ ಅವಕಾಶ ಕೊಡು."

ಆಗ ಪೂರ್ಣಾ ಅಲ್ಲಿಂದ ಎದ್ದು ಹೋಗುವುದೇ ಕ್ಷೇಮವೆಂದರಿತಳು. ಅವಳು ಮೆಲ್ಲಗೆ ಎದ್ದು ಸದ್ದಿಲ್ಲದಂತೆ ತನ್ನ ಕೊಠಡಿಯನ್ನು ಸೇರಿದಳು. ಸುಮಿತ್ರೆ ಏಕಾಂತದಲ್ಲಿ ಅತ್ತಳೊ ಇಲ್ಲವೊ ಹೇಳುವುದು ಕಷ್ಟ. ಆದರೆ ಪೂರ್ಣಾ ಮಾತ್ರ ತನ್ನ ದೌರ್ಭಾಗ್ಯಕ್ಕಾಗಿ ಗಂಟೆಗಟ್ಟಲೆ ಅತ್ತಳು. ಇಲ್ಲಿಯ ತನಕ ಸುಮಿತ್ರೆಯನ್ನು ಸಂತಸಗೊಳಿಸುವ ಪ್ರಯತ್ನದಲ್ಲಿ ಅವಳಿಗೆ ಈ ದುರ್ಘಟನೆಯ ವಿವೇಚನೆಯೇ ಇರಲಿಲ್ಲ. ಈಗ ಧಾರಾಕಾರವಾಗಿ ಕಣ್ಣೀರು ಸುರಿಸುತ್ತಾ ಈ ವಿಷಯಗಳನ್ನೆಲ್ಲಾ ಮನಸ್ಸಿನಲ್ಲಿಯೇ ಮೆಲುಕು ಹಾಕಲಾರಂಭಿಸಿದಳು. ಕಮಲಾ ಪ್ರಸಾದನು ವಾಸ್ತವವಾಗಿ ಅವಳಿಗೊಂದು ಸೀರೆಯನ್ನು ತಂದಿದ್ದನೆ? ಏಕೆ ತಂದಿದ್ದನು? ಒಂದು ದಿನವನ್ನು ಬಿಟ್ಟರೆ ಮತ್ತೆಂದೂ ಅವಳು ಕಮಲಾಪ್ರಸಾದ ನೊಡನೆ ಮಾತನಾಡಿರಲಿಲ್ಲ. ಅಂದು ಕೂಡ ಅವಳಾಗಿಯೇ ಏನೂ ಮಾತ ನಾಡಿರಲಿಲ್ಲ. ಕಮಲಾಪ್ರಸಾದನ ಮಾತುಗಳನ್ನು ಕೇಳುತ್ತಿದ್ದಳು. ಹೌದು, ಅಲ್ಲಿಗೆ ಬರಲು ಒಪ್ಪಿದುದೇ ಅವಳ ಅಪರಾಧವಾಗಿತ್ತು; ಆದರೆ ಅವಳೇನು ಮಾಡಬಹುದಿತ್ತು? ಅವಳಿಗಿದ್ದ ಆಶ್ರಯವಾದರೂ ಏನು? ಅವಳಿಗೆ ಒಡ ಹುಟ್ಟಿದವರಾರೂ ಇದ್ದಂತೆ ಕಾಣಲಿಲ್ಲ. ಇವರ ನೆರವಿನಿಂದಲೇ ಜೀವಿಸುತ್ತಿದ್ದ ಅವಳು ಇಲ್ಲಿಗೆ ಬಂದುದರಲ್ಲಿ ತಪ್ಪೇನೂ ಇಲ್ಲ. ಅವಳು ಇಲ್ಲಿಗೆ ಬಂದಾರಭ್ಯ ಕಮಲಾಪ್ರಸಾದನೊಡನೆ ಮಾತನಾಡಿದವಳಲ್ಲ. ಹೀಗಿದ್ದರೂ ಕಮಲಾಪ್ರಸಾದ ನೇಕೆ ಅವಳಿಗೆ ರೇಷ್ಮೆ ಸೀರೆಯನ್ನು ತರಬೇಕು? ಮೊದಲನೆಯದಾಗಿ ಅವನು ಕಡುಲೋಭಿ; ಈ ಔದಾರ್ಯವು ಅವನಿಗೆ ಎಲ್ಲಿಂದ ಬಂದಿತು? ಸುಮಿತ್ರೆಯೂ ಕೂಡ ಸೀರೆ ಬೇಕೆಂದು ಬಲವಂತ ಮಾಡಿರಲಿಲ್ಲ. ಒಂದು ವೇಳೆ ಅವಳಿಗೆ ಸೀರೆ ತರಬೇಕಾಗಿದ್ದರೂ ಕೂಡ ನನಗೆ ತರುವ ಅಗತ್ಯವೇನಿತ್ತು? ನಾನೇನು ಅವನ ನಾದಿನಿಯೂ ಅಲ್ಲ; ಮೈದುನನ ಹೆಂಡತಿಯೂ ಅಲ್ಲ; ಭಾವನ ಹೆಂಡತಿ ಮೊದಲೇ ಅಲ್ಲ; ಕೇವಲ ಆಶ್ರಿತಳು.

ಹೀಗೆ ಯೋಚಿಸುತ್ತಾ ಯೋಚಿಸುತ್ತಾ ಇರುವಾಗ ಪೂರ್ಣಾಗೆ ತಟಕ್ಕನೆ ಏನೋ ಒಂದು ವಿಷಯ ಹೊಳೆದಂತಾಯಿತು. ಅದರ ಕಲ್ಪನೆಯೂ ಕೂಡ ಅವಳಿಗಿದ್ದಿಲ್ಲ. ಯಾವುದೋ ಭಯಂಕರ ಜಂತು ಅವಳೆದುರಿಗೆ ಬಂದಿದೆಯೋ

ಎನ್ನುವಂತೆ ಅವಳೊಮ್ಮೆ ನಡುಗಿದಳು. ಅವಳ ಸಮಸ್ತ ಅಂತಃಕರಣ, ಚೇತನ ಮತ್ತು ಆತ್ಮ—ಎಲ್ಲವೂ ಅಂಧಕಾರಮಯವಾದ ಶೂನ್ಯದಲ್ಲಿ ಸೇರಿ ಹೋಯಿತೋ ಎನ್ನುವಂತೆ ಭಾಸವಾಯಿತು ಅವಳಿಗೆ. ಅವಳ ಮೇಲೆ ಒಂದು ವಿಶಾಲ ಭವನವೇ ಕುಸಿದು ಬಿದ್ದಂತಾಗಿತ್ತು ಅವಳ ಸ್ಥಿತಿ. ಕಮಲಾಪ್ರಸಾದನು ಆದಕ್ಕಾಗಿಯೇ ಅಲ್ಲವೇ ಸೀರೆಯನ್ನು ತಂದದ್ದು ? ಸುಮಿತ್ರೆಗೆ ಯಾವ ವಿಧವಾದ ಸಂಶಯವೂ ಆಗದಿರಲೆಂದೇ ಅವಳಿಗೂ ಒಂದು ಸೀರೆಯನ್ನು ತಂದಿದ್ದನಲ್ಲವೆ? ವಿಷಯ ಇದೇ ಆಗಿದ್ದರೆ ಮಹಾ ಅನರ್ಥವೇ ಆಗುವುದು. ಇಂತಹ ಪರಿಸ್ಥಿತಿಯಲ್ಲಿ ಅವಳು ಒಂದು ಕ್ಷಣಕಾಲವಾದರೂ ಈ ಮನೆಯಲ್ಲಿ ಇರಬಲ್ಲಳೇ? ಅವಳು ಕೂಲಿ ಮಾಡುವಳು; ಕುಟ್ಟಿ ಬೀಸುವ ಕೆಲಸ ಮಾಡುವಳು; ಹೊಲಿಗೆ ಕೆಲಸ ಮಾಡುವಳು; ಭಿಕ್ಷೆ ಬೇಡುವಳು; ಆದರೆ ಇಲ್ಲಿ ಮಾತ್ರ ಇರಲಾರಳು. ಈ ಸಂಶಯವೇ ಇಷ್ಟು ದಿನಗಳ ವರೆಗೆ ಸುಮಿತ್ರೆಯನ್ನು ಅವಳ ಗೆಳತಿಯಾಗಿ ಮಾಡಿತ್ತೇನೊ. ಹಾಗಿದ್ದರೆ ಸುಮಿತ್ರೆಯು ಸ್ಪಷ್ಟವಾಗಿ ಅವಳಿಗೇಕೆ ಹೇಳಲಿಲ್ಲ; ಮೊದಲನೆಯ ದಿನದಿಂದಲೇ ಅವಳಿಗೆ ಕಾರಣವಿಲ್ಲದೆಯೇ ಈ ಸಂಶಯವುಂಟಾಯಿತೆ ? ನಾನು ಇಲ್ಲಿಗೆ ಬರುವ ಆಶಯವು ಸುಮಿತ್ರೆಗೆ ಕುತ್ಸಿತವಾಗಿ ಕಂಡಿತೆ? ಅವಳ ದೃಷ್ಟಿಯಲ್ಲಿ ನಾನು ಇಲ್ಲಿಗೆ ಪ್ರೇಮಲೀಲೆಗೋಸ್ಕರವೇ ಬಂದಿರುವೆನೆ ? ಇದರ ಮುಂದೆ ಪೂರ್ಣಾ ಮತ್ತೇನೂ ಯೋಚಿಸಲಾರದವಳಾದಳು. ದೀರ್ಘವಾದ ನಿಟ್ಟುಸಿರೊಂದನ್ನು ಬಿಟ್ಟು ಅವಳು ಜಮಖಾನದ ಮೇಲೆ ಒರಗಿಕೊಂಡಳು. ಅವಳ ಆಗಿನ ಸ್ಥಿತಿಯು ಮೃತ್ಯುದೇವತೆಯನ್ನು ಆಹ್ವಾನಿಸುತ್ತಿರುವಳೋ ಎಂಬಂತೆ ಕಾಣುತ್ತಿತ್ತು. ಹೇ ಪರಮಾತ್ಮ! ವೈಧವ್ಯವು ಕಳಂಕದ ಎರಡನೆಯ ಹೆಸರೆ !!

ಆದರೆ ಈ ಮನೆಯನ್ನು ಬಿಡಲೇಬೇಕೆಂದು ಸಂಕಲ್ಪ ಮಾಡಿದರೂ ಕೂಡ ಪೂರ್ಣಾ ಹೊರಡಲಸಮರ್ಥಳಾದಳು. ಅವಳು ಹೋಗುವುದಾದರೂ ಎಲ್ಲಿಗೆ? ಇಷ್ಟು ಜಾಗ್ರತೆ ಹೊರಟು ಹೋಗುವುದು ಈ ಸಂಶಯವನ್ನು ಮತ್ತಷ್ಟು ದೃಢಪಡಿಸುವುದು. ವಿಧವೆಯ ಮೇಲೆ ದೋಷಾರೋಪಣೆ ಮಾಡುವುದು ಎಷ್ಟು ಸುಲಭ! ಜನರು ಅವಳ ವಿಷಯದಲ್ಲಿ ಅತ್ಯಂತ ಕೀಳುಭಾವನೆಗಳನ್ನು ಪ್ರಚಾರ ಮಾಡುವುದಕ್ಕೂ ಹೇಸರು: ದುರ್ವ್ಯಸನವೇ ವೈಧವ್ಯದ ಸ್ವಾಭಾವಿಕ ಲಕ್ಷಣ. ವಿಧವೆಯಾಗುವುದು ಮನಸ್ಸಿನ ಎಲ್ಲಾ ದುರ್ವ್ಯಸನಗಳನ್ನೂ, ಎಲ್ಲಾ ದೌರ್ಬಲ್ಯ

ವನ್ನೂ ಉದ್ರೇಕಗೊಳಿಸುವುದಕ್ಕಾಗಿಯೇನು ? ಪೂರ್ಣಾ ಒಂದು ಪಕ್ಕದಿಂದ ಮತ್ತೊಂದು ಪಕ್ಕಕ್ಕೆ ಹೊರಳಿ ಮಲಗಿಕೊಂಡಳು.

ಊಟಕ್ಕೆ ಹೋಗುವ ವೇಳೆಯಲ್ಲಿ ಸುಮಿತ್ರಾ ಪೂರ್ಣಾನ ಜೊತೆ ಕರೆದು ಕೊಂಡು ಹೋಗುತ್ತಿದ್ದಳು. ಇಂದೂ ಕೂಡ ಅವಳು ಬಂದು ಕೊಠಡಿಯ ಬಾಗಿಲ ಹತ್ತಿರ ನಿಂತು ಕೂಗಿದಳು. ಪೂರ್ಣಾ ಬಹಳ ವಿನಯದಿಂದ ಹೇಳಿ ದಳು— " ಅಕ್ಕ, ಇಂದೇಕೋ ನನಗೆ ಹಸಿವಿಲ್ಲ. " ಸುಮಿತ್ರೆಯು ಪುನಃ ಒತ್ತಾಯ ಮಾಡಲಿಲ್ಲ; ಹೊರಟು ಹೋದಳು.

ರಾತ್ರಿ ಹನ್ನೆರಡು ಗಂಟೆಗೆ ಮುಂಚೆ ಕಮಲಾಪ್ರಸಾದನು ಎಂದೂ ಶಯನಗೃಹಕ್ಕೆ ಕಾಲಿಡುತ್ತಿರಲಿಲ್ಲ; ಆದರೆ ಇಂದು ಒಂದು ಗಂಟೆ ಹೊಡೆಯಿತು, ಎರಡು ಹೊಡೆಯಿತು; ಆದಾಗ್ಯೂ ಅವನು ಬರುವ ಸುಳಿವೇ ಇರಲಿಲ್ಲ. ಮೂರು ಗಂಟೆ ಹೊಡೆದನಂತರ ಬಾಗಿಲು ಮುಚ್ಚಿದ ಸದ್ದು ಅವಳ ಕಿವಿಗೆ ಬಿತ್ತು. ಸುಮಿತ್ರೆಯು ಒಳಗಿನಿಂದ ಕದ ಮುಚ್ಚಿ ಅಗಳಿ ಹಾಕಿಕೊಂಡಿದ್ದಳು. ಪ್ರಾಯಶಃ ಈಗ ಅವಳಿಗೂ ಅವನು ಬರುವನೆಂಬ ಆಶೆಯಿರಲಿಲ್ಲ. ಆದರೆ ಪೂರ್ಣಾ ಇಲ್ಲಿಯ ತನಕ ಅವಳ ನಿರೀಕ್ಷಣೆಯಲ್ಲಿದ್ದಳು. ಉಳಿದ ರಾತ್ರಿಯೂ ಕೂಡ ನಿರೀಕ್ಷಣೆಯಲ್ಲಿಯೇ ಕಳೆದು ಹೋಯಿತು. ಕಮಲಾಪ್ರಸಾದನು ಬರಲೇ ಇಲ್ಲ.

ಈಗ ಸಮಸ್ಯೆಯು ಮತ್ತಷ್ಟು ಜಟಿಲವಾಯಿತು. ಮನೆಯಲ್ಲೆಲ್ಲಾ ಇದೇ ವಿಷಯ ಚರ್ಚೆಯಾಗುವುದು. ಜನರು ಬಗೆಬಗೆಯಾಗಿ ಮಾತನಾಡಿ ಕೊಳ್ಳುವರು. ಪ್ರತಿಯೊಬ್ಬ ವ್ಯಕ್ತಿಯೂ ಅದಕ್ಕೊಂದು ಹೊಸ ರೂಪವನ್ನೇ ಕೊಟ್ಟು ಬಣ್ಣವೇರುವಂತೆ ಮಾತನಾಡುವನು. ಆ ರಹಸ್ಯಮಯವಾದ ಕಿವಿ ಮಾತು ಮತ್ತು ಸಂಕೇತಗಳ ಕಲ್ಪನಾ ಮಾತ್ರದಿಂದಲೇ ಅವಳ ಹೃದಯದ ಬಡಿತವು ಕ್ಷಣ ಕಾಲ ನಿಂತಂತೆ ತೋರಿತು. ಅವಳು ಮನಸ್ಸಿನಲ್ಲಿಯೇ ಭಗ ವಂತನನ್ನು ಧ್ಯಾನ ಮಾಡಿದಳು— "ಕರುಣಾಳು ಭಗವಂತ, ಈಗ ನೀನೇ ನನಗೆ ಆಶ್ರಯದಾತನು. ನನ್ನ ಮಾನರಕ್ಷಣೆಯ ಭಾರವು ನಿನಗೇ ಸೇರಿದೆ."

ಪೂರ್ಣಾ ದಿನವೆಲ್ಲಾ ಕಮಲಾಪ್ರಸಾದನೊಡನೆ ನಾಲ್ಕಾರು ಮಾತನಾ ಡಲು ಸಮಯ ಕಾಯುತ್ತಿದ್ದಳು; ಆದರೆ ಅವನು ಮನೆಯೊಳಕ್ಕೆ ಪ್ರವೇಶಿಸಲೇ ಇಲ್ಲ. ಗಂಡಸರ ಬೈಠಕಖಾನೆಗೆ ಹೋಗಲು ಅವಳಿಗೆ ನಾಚಿಕೆಯಾಯಿತು.

ಇಂದು ಇಷ್ಟವಿಲ್ಲದಿದ್ದರೂ ಕೂಡ ಅವಳು ಊಟ ಮಾಡಲೇ ಬೇಕಾಯಿತು. ತಾನು ಉಪವಾಸ ಮಾಡಿ ಜನರಿಗೆ ಇಷ್ಟಾನುಸಾರವಾಗಿ ಮಾತನಾಡಲು ಅವಕಾಶ ಮಾಡಿಕೊಡುವುದಕ್ಕೆ ಸಿದ್ಧಳಿರಲಿಲ್ಲ.

ಸುಮಿತ್ರೆಯು ಈ ಎರಡು ದಿನಗಳಿಂದ ಅವಳ ಕಡೆ ಕಣ್ಣೆತ್ತಿ ನೋಡದಿದ್ದರೂ ಕೂಡ ಇಂದು ಸಂಧ್ಯಾ ಸಮಯದಲ್ಲಿ ಪೂರ್ಣಾ ಅವಳ ಬಳಿಗೆ ಹೋಗಿ ಕುಳಿತುಕೊಂಡಳು. ಸುಮಿತ್ರೆ ಹೇಳಿದಳು— "ಬಾ ಸೋದರಿ, ಕುಳಿತುಕೊ. ಇಂದು ನಾನು ನಮ್ಮ ತಂದೆಯವರಿಗೆ ಇಲ್ಲಿಗೆ ಬಂದು ನನ್ನನ್ನು ಕರೆದುಕೊಂಡು ಹೋಗುವಂತೆ ಕಾಗದ ಬರೆದಿದ್ದೇನೆ. ಇಲ್ಲಿಯೇ ಇದ್ದೂ ಇದ್ದೂ ಮನಸ್ಸಿಗೆ ತುಂಬಾ ಬೇಸರವಾಗಿದೆ."

ಪೂರ್ಣಾ ಮುಗುಳುನಗೆಯನ್ನು ಸೂಸುತ್ತಾ ನುಡಿದಳು— "ಹಾಗಾದರೆ ನಾನೂ ಬರುವೆನು; ಇಲ್ಲಿ ಒಂಟಿಯಾಗಿ ಹೇಗೆ ಇರಲಿ ?"

ಸುಮಿತ್ರಾ:— "ಇಲ್ಲ, ನಾನು ವಿನೋದ ಮಾಡುತ್ತಿಲ್ಲ, ಸೋದರಿ ! ನಾನು ಇಲ್ಲಿಗೆ ಬಂದು ಬಹಳ ದಿನಗಳಾದುವು. ಈಗ ಇಲ್ಲಿರಲು ಇಷ್ಟವೇ ಆಗಲೊಲ್ಲದು. ರಾತ್ರೆ ಮಹಾಶಯರು ಎಲ್ಲಿ ಮಾಯವಾಗಿದ್ದರೋ ಕಾಣೆ. ಪ್ರಾಯಶಃ ನಾನು ಅವರ ಕಾಲು ಹಿಡಿದು ಬೇಡಿಕೊಳ್ಳಲು ಬರಬಹುದೆಂದು ಅವರು ತಿಳಿದಿರಬಹುದು. ನನ್ನಿಂದ ಅದು ಸಾಧ್ಯವೇ ಇಲ್ಲ."

ಪೂರ್ಣಾ ಮಾತಿನ ಸರಣಿಯನ್ನು ಬೇರೆ ಕಡೆಗೆ ತಿರುಗಿಸುವ ಪ್ರಯತ್ನ ಮಾಡುತ್ತಾ ಹೇಳಿದಳು— "ಪಾಪ ! ಅವರು ಬಂದು ಹಿಂದಕ್ಕೆ ಹೋಗಿರಬಹುದು."

ಸುಮಿತ್ರಾ:— "ನಾನು ನಿದ್ದೆ ಮಾಡುತ್ತಿದ್ದುದು ಅಷ್ಟರಲ್ಲಿಯೇ ಇದೆ. ಅವರು ಇತ್ತ ಕಡೆ ಬರಲೇ ಇಲ್ಲ. ಅವರು ತಿಳಿದಿರಬಹುದು,— ಈ ದಾಸಿ ತನ್ನನ್ನು ಒಪ್ಪಿಸಿ ಕರೆದುಕೊಂಡು ಹೋಗುವಳೆಂದು. ಇಲ್ಲಿ ಯಾರಿಗೂ ಇಂತಹ ಅಗತ್ಯವಿಲ್ಲ."

ಪೂರ್ಣಾ:— "ಸಮಾಧಾನ ಮಾಡಿ ಕರೆತರುವುದರಲ್ಲಿ ದೊಡ್ಡ ಹಾನಿಯೇನೂ ಇಲ್ಲ."

ಸುಮಿತ್ರಾ:— "ಏನೂ ಇಲ್ಲ, ಲಾಭದ ಮೇಲೆ ಲಾಭವಾಗುತ್ತಿತ್ತು. ಅವರು ದಯ ಮಾಡಿಸಿದ ಕೂಡಲೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಲ್ಲವೂ

ಕೈ ಜೋಡಿಸಿಕೊಂಡು ಅವರೆದುರಿಗೆ ಹೋಗುತ್ತಿದ್ದುವಲ್ಲವೇ? ಇಷ್ಟಲ್ಲದೆ ಮತ್ತೇನು?"

ಪೂರ್ಣಾ:— "ನೀನಾದರೋ ವಿನೋದ ಮಾಡುತ್ತಿರುವೆ. ಪತಿ ಯಾವ ಕಾರಣದಿಂದಲಾದರೂ ಕೋಪಿಸಿಕೊಂಡರೆ, ಅವನನ್ನು ಸಮಾಧಾನ ಪಡಿಸುವುದು ಸತಿಯ ಧರ್ಮವಲ್ಲವೆ?"

ಸುಮಿತ್ರಾ:— "ನಾನಾದರೋ ನನ್ನ ಸ್ವಂತ ಅನುಭವದಿಂದ ಹೇಳುತ್ತೇನೆ, ಸೋದರಿ. ಸ್ತ್ರೀಯು ಪುರುಷನ ಪಾದರಕ್ಷೆಗಿಂತಲೂ ಕೀಳೆಂದರೆ ತಪ್ಪೆ? ಪುರುಷ ಸ್ವಭಾವ ಹೇಗೇ ಇರಲಿ—ಅವನು ಕಳ್ಳನೇ ಆಗಿರಲಿ, ಮೋಸಗಾರನಾಗಿರಲಿ, ವ್ಯಭಿಚಾರಿಯಾಗಿರಲಿ, ಕುಡುಕನಾಗಿರಲಿ—ಅವನ ಚರಣಧೂಳಿಯನ್ನು ತೊಳೆತೊಳೆದು ಪಾನ ಮಾಡುವುದೇ ಸ್ತ್ರೀಯ ಧರ್ಮ. ನಾನು ಏನು ಅಪರಾಧ ಮಾಡಿದ್ದಕ್ಕೆ ಅವರನ್ನು ಸಮಾಧಾನ ಮಾಡಲು ಹೋಗಬೇಕು—ನೀನೇ ಹೇಳು."

ಪೂರ್ಣಾ:— "ನೀನೇ ನಿನ್ನ ಮನಸ್ಸಿನಲ್ಲಿ ಯೋಚಿಸಿ ಇದಕ್ಕುತ್ತರವನ್ನು ಪಡೆ."

ಸುಮಿತ್ರಾ:— "ಚೆನ್ನಾಗಿ ಯೋಚಿಸಿದ್ದೇನೆ. ಒಂದು ಕಾಸಿನ ಸಾಮಾನನ್ನೂ ಮರೆತೂ ತರಲಾರರು. ಐದೋ ಹತ್ತೋ ರೂಪಾಯಿ ಅವರಿಂದ ತೆಗೆದುಕೊಳ್ಳಬೇಕೆಂದರೆ ಕೇಳಿ ಕೇಳಿ ಸಾಕಾಗಿ ಹೋಗುತ್ತೆ. ಇಂಥಾದ್ದರಲ್ಲಿ ಒಟ್ಟಿಗೆ ಎರಡು ಸಿಲ್ಕ್ ಸೀರೆ ತರುವ ಸಾಹಸ ಮಾಡಿದ್ದು ಆಶ್ಚರ್ಯವಲ್ಲವೆ? ಇದರ ಹಿನ್ನೆಲೆಯಲ್ಲಡಗಿರುವ ರಹಸ್ಯವನ್ನು ನೀನೂ ತಿಳಿದುಕೊಳ್ಳಬಲ್ಲೆ. ನೀನೇ ನೋಡುವೆಯಂತೆ, ಅವರು ಈಗ ಸರಿಯಾದ ದಾರಿಗೆ ಬರುತ್ತಾರೆ. ಅವರಿಗೆ ಇಂತಹ ಷೋಕಿ ಇದ್ದರೆ, ಪೇಟೆ ಏನು ಹಾಳು ಬಿದ್ದಿದೆಯೆ? . ಅಲ್ಲಾದರೂ ಅದನ್ನು ತೀರಿಸಿಕೊಳ್ಳಲಿ. ಮನೆಯಲ್ಲೇ ಬಲೆ ಬೀಸಲಾರಂಭಿಸಿದ್ದಾರೆ. ನನಗೆ ಮೊದಲಿನಿಂದಲೂ ಸಂಶಯವಿದ್ದೇ ಇತ್ತು. ನಿನ್ನೆಯಂತೂ ಅವರು ತಮ್ಮ ಮನಸ್ಸಿನಲ್ಲಿದ್ದುದನ್ನು ಬಿಚ್ಚಿ ತೋರಿಸಿದರು."

ಪೂರ್ಣಾ ನಸುಕೋಪದಿಂದ ಹೇಳಿದಳು— "ಅಕ್ಕ, ನೀನು ಎಂಥ ಮಾತುಗಳನ್ನಾಡುತ್ತಿರುವೆ? ಒಂದನೆಯದಾಗಿ ನಾನು ಬ್ರಾಹ್ಮಣಿ, ಎರಡನೆಯದಾಗಿ ವಿಧವೆ; ಇದೂ ಅಲ್ಲದೆ ಸಂಬಂಧದಲ್ಲಿ ನಾನು ಅವರ ಸೋದರಿ;

ಅವರು ನನ್ನನ್ನು ಕೆಟ್ಟ ದೃಷ್ಟಿಯಿಂದ ನೋಡುವರೆ ! ಇದು ನಂಬತಕ್ಕ ಮಾತೆ? ಮೊದಲಿನಿಂದಲೂ ಅವರ ಸ್ವಭಾವ ಹಾಗಿಲ್ಲವೂ ಇಲ್ಲ."

ಸುಮಿತ್ರೆಯು ವೀಳ್ಯೆಯನ್ನು ಸಿದ್ಧಪಡಿಸುತ್ತಾ ಹೇಳಿದಳು— "ಪುರುಷರ ಸ್ವಭಾವದ ವಿಷಯ ನನಗೆ ಹೇಳಲೇ ಬೇಡ, ಪೂರ್ಣಾ! ಸ್ವಭಾವ ಮುಖ ನೋಡಿ ತಿಳಿಯುವಷ್ಟು ಸುಲಭವಾದುದಲ್ಲ. ಯಾರನ್ನು ನೀನು ಜಿತೇಂದ್ರಿಯ ರೆಂದು ತಿಳಿದಿರುವೆಯೋ ಅವರು ಪ್ರಚ್ಛನ್ನರೂಪದಲ್ಲಿರುವ ಕಾಮುಕ ಶಿಖಾಮಣಿ ಗಳು. ಅವರು ದರ್ಪ ತೋರಿಸುವುದು ಹೊರಗಲ್ಲ, ಮನೆಯಲ್ಲಿ ಮಾತ್ರ. ಆದರೆ ಇವರಲ್ಲಿ ಒಂದು ಒಳ್ಳೆಯ ಸ್ವಭಾವವೂ ಇದೆ. ಇಂದೇನಾದರೂ ನಾನು ರೋಗದಿಂದ ಹಾಸಿಗೆ ಹಿಡಿದೆನೆಂದರೆ ಇವರ ಕೋಪವೆಲ್ಲಾ ಎಲ್ಲೋ ಮಾಯ ವಾಗುವುದು. ಎಲ್ಲಿದ್ದರೂ ಓಡಿ ಬರುವರು. ಎಷ್ಟು ಹೀಯಾಳಿಸಿದರೂ ನನ್ನನ್ನು ಬಿಟ್ಟು ಹೋಗುವುದೇ ಇಲ್ಲ."

ಪೂರ್ಣಾ:— "ಹಾಗಾದರೆ ನೀನು ಇವತ್ತೇ ಏಕೆ ಕಾಹಿಲೆ ಬೀಳ ಬಾರದು ?"

ಸುಮಿತ್ರಾ:— "ಹೀಗೆಯೇ ನಾಲ್ಕಾರು ದಿನಗಳು ಅವರನ್ನು ಸ್ವಲ್ಪ ಗೋಳು ಹೊಯ್ಯುತ್ತೇನೆ. ಅವರಿಗೆ ಒಂಟಿಯಾಗಿದ್ದರೆ ನಿದ್ದೆಯೇ ಬರುವುದಿಲ್ಲ. ಈಗ ಪಕ್ಕದಿಂದ ಪಕ್ಕಕ್ಕೆ ಹೊರಳಾಡುತ್ತಲೇ ರಾತ್ರಿ ಕಳೆಯುತ್ತಿರಬಹುದು. ಈ ಕಾರಣದಿಂದಲೇ ಅವರು ನನ್ನನ್ನು ಎಲ್ಲಿಗೂ ಕಳುಹಿಸುವುದೇ ಇಲ್ಲ."

ಪೂರ್ಣಾ:— "ನೀನೆಂತಹ ನಿರ್ದಯಳು, ಅಕ್ಕ! ನೀನೇನಾದರೂ ಈ ದಿನ ಅವರ ಬಳಿ ಹೋಗದಿದ್ದರೆ, ನನ್ನಾಣೆ."

ಆದರೆ ಸುಮಿತ್ರೆ ಇಷ್ಟು ಸುಲಭವಾಗಿ ತನ್ನ ಹಟವನ್ನು ಬಿಟ್ಟುಕೊಡುವ ಸ್ತ್ರೀಯಾಗಿರಲಿಲ್ಲ. ಇಂದಿನ ರಾತ್ರಿಯೂ ಹಿಂದಿನ ದಿನದಂತೆಯೇ ಕಳೆದು ಹೋಯಿತು. ಸುಮಿತ್ರೆಯ ಕೊಠಡಿಯ ಕಡೆ ಸದ್ದೇನಾದರೂ ಆಗಬಹು ದೇನೋ ಎಂಬ ನಿರೀಕ್ಷಣೆಯಲ್ಲಿಯೇ ಇದ್ದಳು ಪೂರ್ಣಾ. ಕಮಲಾಪ್ರಸಾದನು ಬರಲೇ ಇಲ್ಲ. ಹೀಗೆಯೇ ಅನೇಕ ದಿನಗಳುರುಳಿದವು. ಸುಮಿತ್ರೆಯು ಈಗ ಕಮಲಾಪ್ರಸಾದನ ವಿಷಯವನ್ನೇ ಚರ್ಚಿಸುತ್ತಾ ಕಾಲ ತಳ್ಳುತ್ತಿದ್ದಳು. ಅವನ ಕೆಡಕುಗಳೆಲ್ಲವೂ ಒಂದೊಂದಾಗಿ ಅವಳ ಸ್ಮೃತಿಪಥದಿಂದ ಜಾರಿ ಹೋಗುತ್ತಿ ದ್ದುವು. ಅವನ ಮೇಲಿನ ಆಪಾದನೆ, ನಿಂದನೆಗಳೆಲ್ಲವೂ ಅವಳಿಗೆ ಮರೆತು

ಹೋದುವು. ಅವಳು ಅವನ ಸ್ನೇಹಪೂರ್ಣವಾದ ಒಂದೊಂದು ಮಾತನ್ನೂ ಜ್ಞಾಪಿಸಿಕೊಂಡು ಅಳುತ್ತಿದ್ದಳು. ಆದರೆ ಇಲ್ಲಿಯ ತನಕ ಅವಳ ಅಭಿಮಾನವು ಭಂಗವಾಗಿರಲಿಲ್ಲ. ಹಸಿವಿನಿಂದ ಸಂತಪ್ತರಾದ ಮೇಲೂ ಅನ್ಯರೆದುರು ಕೈ ಚಾಚುವುದು ಸಾಧುವಾದುದೆ? ರಮಣಿಯ ಹೃದಯವು ತನ್ನ ಸೋಲನ್ನೊಪ್ಪಿ ಕೊಳ್ಳಲು ಸಿದ್ಧವಾಗಲಿಲ್ಲ.

ಹತ್ತು-ಹನ್ನೆರಡು ದಿನಗಳು ಕಳೆದು ಹೋಗಿದ್ದುವು. ಒಂದು ದಿನ ಅರ್ಧ ರಾತ್ರಿಯ ನಂತರ ಸುಮಿತ್ರೆಯ ಶಯನ ಗೃಹದ ಬಾಗಿಲು ತೆರೆದ ಶಬ್ದ ಪೂರ್ಣಾಗೆ ಕೇಳಿಸಿತು. ಕಮಲಾಪ್ರಸಾದನು ಬಂದಿರಬೇಕೆಂದು ಅವಳು ತಿಳಿದಳು. ತನ್ನ ಕೊಠಡಿಯ ಬಾಗಿಲ ಬಳಿ ನಿಂತು ಇಣಿಕಿ ನೋಡಿದಳು. ಸುಮಿತ್ರೆಯು ತನ್ನ ಕೋಣೆಯಿಂದ ಸದ್ದಿಲ್ಲದಂತೆ ಹೊರಟು ಅತ್ತಿತ್ತ ಸಂಶಯ ದೃಷ್ಟಿಯಿಂದ ನೋಡುತ್ತಾ ಪುರುಷರಿಗಾಗಿ ಮೀಸಲಾಗಿದ್ದ ಕಿರುಮನೆಯ ಕಡೆ ಹೋಗುತ್ತಿದ್ದಳು. ಇಂದು ಕಾಮಿನಿಯ ಅಭಿಮಾನವು ನುಚ್ಚುನೂರಾಯಿತೆಂದು ಪೂರ್ಣಾ ಅಂದುಕೊಂಡಳು. ಅವಳ ಊಹೆ ಸರಿಯಾಗಿಯೇ ಇತ್ತು. ಸುಮಿತ್ರೆಯು ಇಂದು ತನ್ನ ಪತಿದೇವನನ್ನು ಸಮಾಧಾನಪಡಿಸಿ ಒಲಿಸಿಕೊಳ್ಳಲೇಬೇಕೆಂದು ಸಂಕಲ್ಪ ಮಾಡಿಕೊಂಡಿದ್ದಳು. ಅವಳು ಕೊಠಡಿಯಿಂದ ಹೊರಟಳು, ಅಂಗಳವನ್ನೂ ದಾಟಿದಳು, ಪಡಸಾಲೆಯನ್ನೂ ಅತಿಕ್ರಮಿಸಿ ಮುಂದೆ ನಡೆದಳು; ಪತಿದೇವನ ಕೋಣೆಯ ಬಾಗಿಲ ಬಳಿಯೂ ಹೋದಳು. ಅಲ್ಲಿ ಒಂದು ಕ್ಷಣ ಕಾಲ ನಿಂತುಕೊಂಡು ಹೇಗೆ ಕರೆಯುವುದೆಂದು ಹೋಚಿಸುತ್ತಿದ್ದಳು. ಅಷ್ಟರಲ್ಲಿಯೇ ಕಮಲಾಪ್ರಸಾದನು ಕೆಮ್ಮಿದ ಧ್ವನಿ ಕೇಳಿ ಬರಲು ಅಲ್ಲಿಂದ ಓಡಿದಳು; ನಿರಾಶಳಾಗಿ ಓಡಿದಳು; ತನ್ನ ಕೊಠಡಿಗೆ ಬಂದು ಮಂಚದ ಮೇಲೆ ಕುಳಿತಳು. ಅವಳ ಪ್ರೇಮಪೀಡಿತ ಹೃದಯವು ಸ್ವಾಭಿಮಾನದ ಪುತ್ಥಳಿಯಂತಾಗಿತ್ತು. ಮಾನಿನಿಯ ಅಭಿಮಾನವು ಅಜೇಯವಾದುದು, ಅಮರವಾದುದು ಮತ್ತು ಅನಂತವಾದುದು!

ಪೂರ್ಣಾ ಇದುವರೆಗೂ ಬಾಗಿಲಲ್ಲಿಯೇ ನಿಂತಿದ್ದಳು. ಅವಳಿಗೆ ಈ ಸಮಯದಲ್ಲಿ ತನ್ನ ಸೌಭಾಗ್ಯದ ದಿನಗಳಲ್ಲಿ ನಡೆದ ಒಂದು ಘಟನೆಯು ಜ್ಞಾಪಕಕ್ಕೆ ಬರುತ್ತಿತ್ತು. ಒಂದು ದಿನ ಅವಳು ತನ್ನ ಗಂಡನೊಡನೆ ಬಹಳ ದಿನಗಳವರೆಗೂ ಮುನಿಸುಕೊಂಡಿದ್ದಳು. ಒಂದು ದಿನ ಮನಸ್ಸು ತಡೆಯದೆ ಪತಿಯನ್ನು

ಒಲಿಸಿಕೊಳ್ಳಲು ಅವನ ಕಿರುಮನೆಯ ಬಳಿ ಹೋಗಿದ್ದಳು; ಆದರೆ ಸ್ತ್ರೀಸಹಜವಾದ ಅಭಿಮಾನದಿಂದ ಅಲ್ಲಿಂದ ಹಿಂತಿರುಗಿ ಬರುವುದಿಲ್ಲವೆ? ಅವಳು ಹೀಗೆ ಯೋಚಿಸುತ್ತಿರುವಾಗಲೇ ಸುಮಿತ್ರೆಯು ತನ್ನ ಶಯನ ಗೃಹವನ್ನು ಪ್ರವೇಶಿಸುತ್ತಿರುವುದು ಕಾಣಿಸಿತು. ಅವಳು ಅನುಮಾನಿಸಿದಂತೆಯೇ ಆಯಿತು. ಹೋಗಿ ಸುಮಿತ್ರೆಯನ್ನು ಕೇಳುವ ಇಚ್ಛೆಯಾಯಿತು ಪೂರ್ಣಾಗೆ. ಆದರೆ ಈ ಪರಿಸ್ಥಿತಿಯಲ್ಲಿ ಸುಮಿತ್ರೆಯನ್ನು ಕೇಳುವುದು ಉಚಿತವೆಂದು ಕಾಣಲಿಲ್ಲ. ಸುಮಿತ್ರೆಯು ಕೊಠಡಿಯನ್ನು ಪ್ರವೇಶಿಸುತ್ತಲೇ ದೀಪ ಆರಿಸಿದಳು; ಕದ ಮುಚ್ಚಿ ನಿದ್ದೆ ಹೋದಳು.

ಆದರೆ ಪೂರ್ಣಾ ಇದು ವರೆಗೂ ಬಾಗಿಲಲ್ಲಿಯೇ ನಿಂತಿದ್ದಳು. ಸುಮಿತ್ರೆಗೆ ಆಗುತ್ತಿರುವ ಅಸಹನೀಯ ವಿಯೋಗ ವ್ಯಥೆಯನ್ನು ಸ್ಮರಿಸಿಕೊಂಡು ಅವಳ ಕೋಮಲ ಹೃದಯವು ಕರಗಿ ನೀರಾಯಿತು. ಈ ಸನ್ನಿವೇಶದಲ್ಲಿ ಅವಳ ಜವಾಬ್ದಾರಿಯೇನೂ ಇರಲಿಲ್ಲವೇ? ಈ ರೀತಿಯಾಗಿ ತಟಸ್ಥವಾಗಿದ್ದುಕೊಂಡು ತಮಾಷೆ ನೋಡುವುದೇ ಅವಳ ಕರ್ತವ್ಯವೆ? ಈ ಪತಿ-ಪತ್ನಿಯರ ವೈಮನಸ್ಯಕ್ಕೆ ಅವಳೇ ಮೂಲಕಾರಣವಾಗಿದ್ದಳು. ಹೀಗಿರುವಲ್ಲಿ ಅವಳು ಶಾಂತಚಿತ್ತಳಾಗಿ ಈ ಪ್ರೇಮಪಕ್ಷಿಗಳು ವಿರಹಾಗ್ನಿಯಲ್ಲಿ ಬೇಯುತ್ತಿರುವುದನ್ನು ನೋಡಬಲ್ಲಳೆ? ಎಂದಿಗೂ ಇಲ್ಲ. ಕಮಲಾಪ್ರಸಾದನಿಗೆ ತಕ್ಕ ವಿವೇಕ ಹೇಳಿ ಶಾಂತಗೊಳಿಸಬೇಕೆಂದು ಇದಕ್ಕೆ ಮೊದಲೇ ಎಷ್ಟೋ ಸಾರಿ ಅವಳು ಮನಸ್ಸಿನಲ್ಲಿಯೇ ಯೋಚಿಸಿದ್ದಳು; ಆದರೆ ಎಷ್ಟೋ ಸಂಶಯಗಳು ಅವಳನ್ನು ಮುಂದೆ ಹೋಗದಂತೆ ತಡೆದು ನಿಲ್ಲಿಸಿದ್ದವು. ಇಂದು ಕರುಣೆಯು ಆ ಸಂಶಯಗಳನ್ನೆಲ್ಲ ಬದಿಗೊತ್ತಿತು.

ಅವಳು ಕಮಲಾಪ್ರಸಾದನನ್ನು ಸಮಾಧಾನಪಡಿಸಲು ಹೊರಟಳು. ಅವಳ ಮನಸ್ಸಿನಲ್ಲಿ ಯಾವ ವಿಧವಾದ ಸಂಶಯವೂ ಇರಲಿಲ್ಲ. ಕಮಲಾಪ್ರಸಾದನನ್ನು ಅವಳು ಮೊದಲಿನಿಂದಲೂ ತನ್ನ ಅಣ್ಣನೆಂತಲೇ ತಿಳಿಯುತ್ತಾ ಬಂದಿದ್ದಳು. ಅವನನ್ನು ಅವಳು ಕರೆಯುತ್ತಿದ್ದುದೂ ಅಣ್ಣಾನೆಂತಲೇ. ಅಲ್ಲದೆ ಅವಳು ಅವನ ಕೋಣೆಯೊಳಕ್ಕೆ ಹೋಗುವ ಅಗತ್ಯವೂ ಇರಲಿಲ್ಲ. ಕೊಠಡಿಯ ಬಾಗಿಲ ಬಳಿಯಲ್ಲಿಯೇ ನಿಂತು ಅವನನ್ನು ಕೂಗುವಳು. "ಅತ್ತಿಗೆಗೆ ಜ್ವರ ಬಂದಿದೆ, ತಾವು ಹಾಗೆಯೇ ಸ್ವಲ್ಪ ಒಳಗೆ ಹೋಗಿರಿ" ಎಂದು ಹೇಳು

ವಳು. ಸರಿ, ಈ ಸಮಾಚಾರವನ್ನು ಕೇಳುತ್ತಲೇ ಕಮಲಾಪ್ರಸಾದನು ಒಳಕ್ಕೆ ಓಡಿ ಹೋಗುವನು. ಈ ವಿಷಯದಲ್ಲಿ ಅವಳಿಗೆ ಲೇಶಮಾತ್ರವೂ ಸಂಶಯವಿರಲಿಲ್ಲ. ಮೂರು ವರ್ಷಗಳ ವಿವಾಹ ಜೀವನದ ಪೂರ್ಣ ಅನುಭವವಾಗಿದ್ದರೂ ಕೂಡ ಪುರುಷ ಸ್ವಭಾವದ ಪರಿಚಯವು ಸಂಪೂರ್ಣವಾಗಿ ಅವಳಿಗೆ ಇರಲಿಲ್ಲ. ತನ್ನ ಸೋದರಮಾವನ ಚಿಕ್ಕ ಹಳ್ಳಿಯೊಂದರಲ್ಲಿ ಅವಳ ಬಾಲ್ಯವು ಕಳೆದಿತ್ತು. ಅಲ್ಲಿ ಹಳ್ಳಿಯವರೆಲ್ಲರೂ ಅವಳನ್ನು 'ಸೋದರಿ', 'ಮಗಳೇ' ಎಂದು ಕರೆಯುವ ವಾಡಿಕೆಯಾಗಿತ್ತು. ಆ ಕುತ್ಸಿತವಾಸನಾರಹಿತವಾದ ಹಳ್ಳಿಯ ವಾತಾವರಣದಲ್ಲಿ ಅವಳು ಹೊಲ, ಕಣಗಳಲ್ಲಿ ಸ್ವೇಚ್ಛೆಯಾಗಿ ವಿಹರಿಸುತ್ತಿದ್ದಳು. ತರುಣನಾಗಿದ್ದರೂ ಬಾಲಕನಂತೆ ನಿಷ್ಕಪಟಿಯಾಗಿದ್ದ ಪುರುಷನೊಡನೆಯೇ ಅವಳ ಮದುವೆಯಾಗಿತ್ತು. ಅವನು ಲಜ್ಜಾಶೀಲನೂ ಆಗಿದ್ದ. ತನ್ನ ನೆರೆಹಳ್ಳಿಯ ಯಾವಳಾದರೂ ಸ್ತ್ರೀ ತನ್ನ ಮನೆಗೆ ಬಂದಳೆಂದರೆ, ಅವನು ಒಳಗೆ ಕಾಲಿಡುತ್ತಿರಲಿಲ್ಲ. ಅವಳು ತನ್ನ ಕೊಠಡಿಯಿಂದ ಹೊರಟಳು. ಪುರುಷರ ಕಿರುಮನೆಯ ಬಾಗಿಲ ಬಳಿ ಹೋಗಿ ಮೆಲ್ಲನೆ ಕದ ತಟ್ಟಿದಳು. ಕಮಲಾಪ್ರಸಾದನನ್ನು ಎಚ್ಚರಗೊಳಿಸುವುದು ಬಹಳ ಕಷ್ಟವೆಂದು ಅವಳಿಗೆ ಭಯವಾಯಿತು. ಆದರೆ ಕಮಲಾಪ್ರಸಾದನಿಗೆ ನಿದ್ದೆಯೆಲ್ಲಿಂದ ಬರಬೇಕು? ಸದ್ದು ಕೇಳುತ್ತಲೇ ಕಮಲಾಪ್ರಸಾದನು ಬಾಗಿಲು ತೆರೆದನು. ಪೂರ್ಣಾಳನ್ನು ನೋಡಿ ಕುತೂಹಲನಾಗಿ ಮಾತನಾಡಿದನು— "ವಿಶೇಷವೇನು ಪೂರ್ಣಾ? ಬಾ, ಕುಳಿತುಕೊ."

ಪೂರ್ಣಾ ಸುಮಿತ್ರೆಯ ಕಾಹಿಲೆಯ ಸೂಚನೆಯನ್ನೇ ಮರೆತುಬಿಟ್ಟಳು. ಅವಳಿಗೆ ಸುಳ್ಳು ಹೇಳುವ ಅಭ್ಯಾಸವಿರಲಿಲ್ಲ. ಒಂದು ಕ್ಷಣಕಾಲ ಅವಳು ಬೆಪ್ಪು ಹಿಡಿದವಳಂತೆ ನಿಂತುಬಿಟ್ಟಳು. ಅವಳಿಗೆ ಯಾವ ಆಲೋಚನೆಯೂ ಹೊಳೆಯುತ್ತಿರಲಿಲ್ಲ. ಕೊನೆಗೆ ಹೇಳಿದಳು— "ತಾವು ಸುಮಿತ್ರೆಯೊಡನೆ ಕೋಪಿಸಿಕೊಂಡಿರುವಿರಾ? ಅವಳು ತಮ್ಮನ್ನು ಸಮಾಧಾನಪಡಿಸಲು ಬಂದಿದ್ದಳು, ಆದರೂ ತಾವು ಅವಳ ಜೊತೆ ಹೋಗಲಿಲ್ಲ."

ಕಮಲಾಪ್ರಸಾದನು ವಿಸ್ಮಿತನಾಗಿ ಹೇಳಿದನು— "ನನ್ನನ್ನು ಕ್ಷಮೆ ಬೇಡಿ ಕರೆದುಕೊಂಡು ಹೋಗಲು ಬಂದಿದ್ದಳೆ? ಸುಮಿತ್ರಾ! ಶುದ್ಧ ಸುಳ್ಳು. ನನ್ನನ್ನು ಸಮಾಧಾನ ಪಡಿಸಲು ಅವಳೇಕೆ ಬಂದಾಳು! ಯಾರಲ್ಲಿ ಪ್ರೇಮವಿರುತ್ತದೆಯೋ ಅವರನ್ನು ಸಮಾಧಾನ ಪಡಿಸುವುದು ಸ್ವಾಭಾವಿಕ. ನಾನು

ಸತ್ತರೂ ಕೂಡ ಯಾರಿಗೂ ದುಃಖವಾಗುವುದಿಲ್ಲ. ಹೌದು, ತಾಯಿ ತಂದೆ ಯರೇನೋ ಗೋಳಾಡುವರು. ಸುಮಿತ್ರೆಯೇಕೆ ನನ್ನನ್ನು ಬೇಡಿಕೊಂಡಾಳು! ನಿನ್ನ ಸಂಗಡ ಹಾಗೆ ಹೇಳಿದ್ದಳೇನು?"

ಪೂರ್ಣಾಗೂ ಆಶ್ಚರ್ಯವಾಯಿತು. ಸುಮಿತ್ರಾ ಎಲ್ಲಿಗೆ ಬಂದಿದ್ದಳು ಮತ್ತು ಏಕೆ ತಿರುಗಿ ಹೋದಳು ? ಹೇಳಿದಳು— "ನಾನು ಈಗ ತಾನೆ ಅವಳು ಇಲ್ಲಿಗೆ ಬಂದದ್ದನ್ನೂ, ಇಲ್ಲಿಂದ ಹಿಂತಿರುಗಿ ಹೋದದ್ದನ್ನೂ ನೋಡಿದೆ. ನಿಮ್ಮ ಹತ್ತಿರ ಬಂದಿದ್ದಳೆಂದು ನಾನು ಊಹಿಸಿದೆ. ಈ ರೀತಿ ಎಷ್ಟು ದಿನ ಕೋಪಿಸಿ ಕೊಂಡಿರುವಿರಿ? ಪಾಪ, ಸುಮಿತ್ರಾ ಹಗಲು ರಾತ್ರಿಯೆಲ್ಲಾ ಗೋಳಾಡುತ್ತಿರು ತ್ತಾಳೆ."

ಕಮಲಾಪ್ರಸಾದನು ಈ ಮಾತು ಕೇಳಿದರೂ ಕೇಳಿಸದವನಂತೆ ಅವಳ ಸಮೀಪಕ್ಕೆ ಬಂದು ಹೇಳಿದನು— "ಇಲ್ಲಿ ಎಷ್ಟು ಹೊತ್ತು ನಿಂತಿರುವೆ ? ಒಳಗೆ ಬಾ, ನಿನ್ನೊಡನೆ ಸ್ವಲ್ಪ ಮಾತನಾಡುವುದಿದೆ."

ಹೀಗೆ ಹೇಳುತ್ತಲೇ ಅವನು ಪೂರ್ಣಾಳ ಮುಂಗೈ ಹಿಡಿದು ಒಳಕ್ಕೆ ಎಳೆ ದನು ಮತ್ತು ಬಾಗಿಲಿಗೆ ಅಗಳಿ ಹಾಕಿದನು. ಪೂರ್ಣಾಳ ಹೃದಯವು ಡವ ಡವನೆ ಬಡಿದುಕೊಳ್ಳಲಾರಂಭಿಸಿತು. ಆ ಆವೇಶಪೂರ್ಣವೂ, ಕಠೋರವೂ ಮತ್ತು ಉಗ್ರವೂ ಆದ ಸ್ಪರ್ಶವು ಅವಳಿಗೆ ಸರ್ಪದಂಶದಂತೆ ತೋರಿತು. ಅವಳ ಕರ್ಮೇಂದ್ರಿಯಗಳೆಲ್ಲಾ ಶಿಥಿಲವಾದುವು. ಗಡಗಡನೆ ನಡುಗುತ್ತಾ ಅವಳು ಬಾಗಿಲಿಗೆ ಭದ್ರವಾಗಿ ಒರಗಿಕೊಂಡು ನಿಂತಳು.

ಕಮಲಾಪ್ರಸಾದನು ಅವಳ ಭಯವನ್ನು ನೋಡಿ ಮಂಚದ ಮೇಲೆ ಕುಳಿತುಕೊಂಡನು ಮತ್ತು ಅವಳಿಗೆ ಆಶ್ವಾಸನೆಯೀಯುತ್ತಾ ಹೇಳಿದನು— "ಹೆದರಬೇಡ ಪೂರ್ಣಾ, ನಿಶ್ಚಿಂತೆಯಿಂದ ಕುಳಿತುಕೋ; ನಾನೂ ಮನುಷ್ಯ, ಕಟುಕನಲ್ಲ. ನೀನೇಕೆ ನನ್ನನ್ನು ಕಂಡರೆ ಇಷ್ಟು ಹೆದರಿ ಓಡಿಹೋಗ್ತಿಯೆ ? ಆ ದಿನ ನೀನು ಸೀರೆ ಬೇಡವೆಂದೆ, ನನಗೆಷ್ಟು ವ್ಯಥೆಯಾಯಿತೆಂಬುದು ನಿನಗೆ ಗೊತ್ತೇ ?"

"ನಾನು ಇನ್ನೇನು ಮಾಡಬಹುದಾಗಿತ್ತು—ನೀವೇ ಹೇಳಿ. ಸುಮಿತ್ರಾ ಮನಸ್ಸಿನಲ್ಲಿ ಏನೆಂದುಕೊಳ್ಳುತ್ತಿದ್ದಳು ?".

ಕಮಲಾಪ್ರಸಾದನಿಗೆ ಈ ಮಾತು ಕೇಳಿಸಲಿಲ್ಲ. ಅವನ ಕಾತರ ದೃಷ್ಟಿಯು ಪೂರ್ಣಾಳ ರಕ್ತಹೀನವಾದ ಮುಖಮಂಡಲದಲ್ಲಿಯೇ ನಾಟಿಕೊಂಡಿತ್ತು. ಅವನ ಹೃದಯದಲ್ಲಿ ಕಾಮವಾಸನೆಯ ಕಾಳ್ಗಿಚ್ಚೇ ಧಗಧಗಿಸಲಾರಂಭಿಸಿತು. ಅವನ ಪ್ರಯತ್ನ, ಚೈತನ್ಯ ಮತ್ತು ಆಸಕ್ತಿಗಳೆಲ್ಲವೂ ಒಂದು ವಿಚಿತ್ರ ಹಿಂಸಾಭಾವನೆಯಿಂದ ಅಲ್ಲೋಲ ಕಲ್ಲೋಲವಾದುವು. ಬೇಟೆಯ ಕಾಲದಲ್ಲಿ ದುಷ್ಟ ಮೃಗಗಳ ಕಂಗಳಲ್ಲಿ ಯಾವ ಸ್ಫೂರ್ತಿಯ ಮಿಂಚು ಗೋಚರಿಸುತ್ತದೋ ಅಂತಹ ಸ್ಫೂರ್ತಿಯೇ ಕಮಲಾಪ್ರಸಾದನ ನಯನಗಳಲ್ಲಿ ಮಿಂಚುತ್ತಿತ್ತು. ಅವನು ಮಂಚವನ್ನು ಬಿಟ್ಟು ಎದ್ದನು. ಎರಡು ಕೈಗಳನ್ನೂ ಚಾಚಿಕೊಂಡು ಪೂರ್ಣಾಳ ಕಡೆಗೆ ಹೆಜ್ಜೆ ಹಾಕಿದನು. ಇದೂ ವರೆಗೂ ಪೂರ್ಣಾ ಭಯದಿಂದ ನಡುಗುತ್ತಿದ್ದಳು. ಕಮಲಾಪ್ರಸಾದನು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ, ಅವಳು ಕತ್ತೆತ್ತಿ ಅವನ ಕಡೆಗೆ ಆಗ್ನೇಯ ನೇತ್ರಗಳಿಂದ ನೋಡಿದಳು. ಆ ದೃಷ್ಟಿಯಲ್ಲಿ ಭಯಂಕರವಾದ ಸಂಕಟ ಮತ್ತು ಭಯಗಳು ಅಡಗಿದ್ದವು. ಎಚ್ಚರಿಕೆ ! ಇತ್ತ ಒಂದು ಹೆಜ್ಜೆಯನ್ನು ಮುಂದಿಟ್ಟೆಯಾದರೂ ನಮ್ಮಿಬ್ಬರಲ್ಲಿ ಒಬ್ಬರ ಮೃತ್ಯು ಖಂಡಿತವೆಂದು ಹೇಳುವಂತಿತ್ತು ಆ ದೃಷ್ಟಿ. ಈ ಸಮಯದಲ್ಲಿ ಪೂರ್ಣಾಳಿಗೆ ತನ್ನ ಹೃದಯದಲ್ಲಿ, ಪ್ರಪಂಚದ ಸಮಸ್ತ ಸೇನೆಗಳನ್ನೂ ತನ್ನ ಚರಣದಡಿಯಲ್ಲಿ ತುಳಿದು ಹಾಕುವ ಅಪೂರ್ವ ಮತ್ತು ಅಪಾರ ಶಕ್ತಿಯೊಂದರ ಅನುಭವವಾದಂತೆ ಭಾಸವಾಯಿತು. ಅವಳ ಕಿಡಿ ಕಾರುತ್ತಿರುವ ಕಣ್ಣುಗಳು, ಬಿಗಿದ ಮುಷ್ಟಿ ಮತ್ತು ಸೆಟೆದುಕೊಂಡಿರುವ ಅವಳ ಕತ್ತು—ಇವುಗಳನ್ನು ನೋಡಿ ಕಮಲಾಪ್ರಸಾದನು ಸ್ತಂಭಿತನಾದನು. ನಿದ್ದೆಯಿಂದೆಚ್ಚತ್ತವನಂತೆ ಅವನ ಉದ್ವೇಗವು ಕಡಿಮೆಯಾಗಿ ಅವನ ಬುದ್ಧಿಯು ಹತೋಟಿಗೆ ಬಂದಿತು. ಒಂದು ಹೆಜ್ಜೆ ಮುಂದಿಡುವುದಕ್ಕೂ ಅವನಿಗೆ ಧೈರ್ಯವಾಗಲಿಲ್ಲ. ನಿಂತಲ್ಲಿಂದಲೇ ಮಾತನಾಡಿದನು :—

“ಈ ಭಯಂಕರ ರೂಪವನ್ನು ನನಗೆ ತೋರಿಸಬೇಡ, ಪೂರ್ಣಾ! ಪ್ರೇಮದಂತಹ ಅಪೂರ್ವ ವಸ್ತುವು ಕಪಟ ಮತ್ತು ಬಲ ಪ್ರಯೋಗಕ್ಕೆ ವಶವರ್ತಿಯಾಗುವುದಿಲ್ಲವೆಂಬುದು ನನಗೆ ಚೆನ್ನಾಗಿ ಗೊತ್ತು. ಇಂತಹ ಅಲ್ಪ ವಿಚಾರಗಳನ್ನಿಟ್ಟುಕೊಂಡು ನಿನ್ನ ಸಮೀಪಕ್ಕೆ ಬಂದವನೂ ಅಲ್ಲ. ನಾನು ಕೇವಲ ನಿನ್ನ ಕೃಪಾದೃಷ್ಟಿಯ ದಾಸ! ಎಂದು ನಾನು ನಿನ್ನ ಈ ಅಪೂರ್ವ ಸೌಂದರ್ಯ

ವನ್ನು ನೋಡಿದೆನೋ ಅಂದಿನಿಂದ ನಾನು ನಿನ್ನನ್ನು ನನ್ನ ಹೃದಯಮಂದಿರ ದಲ್ಲಿಟ್ಟು ಪೂಜಿಸುತ್ತಿದ್ದೇನೆ. ಕಲ್ಲಿನ ವಿಗ್ರಹಗಳನ್ನು ಪತ್ರಪುಷ್ಪಗಳಿಂದ ಪೂಜಿ ಸಿದರೆ ನಾನು ನಿನ್ನನ್ನು ನನ್ನ ಕಂಬನಿಗಳಿಂದಲೇ ಪೂಜಿಸುತ್ತಿದ್ದೇನೆ. ನಾನು ಸುಳ್ಳಾಡುತ್ತಿರುವೆನೆಂದು ಭಾವಿಸಬೇಡ, ಪೂರ್ಣಾ. ಈಗಲೂ ನೀನು ಇಷ್ಟ ಪಟ್ಟಿದ್ದೇ ಆದರೆ ನನ್ನ ಪ್ರಾಣವನ್ನೂ ನಿನ್ನ ಚರಣತಲದಲ್ಲಿ ಅರ್ಪಿಸಲು ಸಿದ್ಧನಿ ದ್ದೇನೆ. ಇದೇ ನನ್ನ ಉತ್ಕಟಾಕಾಂಕ್ಷೆ. ನಿನ್ನನ್ನು ಮರೆಯಲು ಪ್ರಯತ್ನಿಸಿ ದಷ್ಟೂ ನಿನ್ನ ಜ್ಞಾಪಕವು ಮೊದಲಿಗಿಂತ ದ್ವಿಗುಣವಾಗಿ ನನ್ನನ್ನು ಬಾಧಿಸುತ್ತದೆ. ಖಂಡಿತವಾಗಿಯೂ ಹಿಂದಿನ ಜನ್ಮದಲ್ಲಿ ನಿನಗೂ ನನಗೂ ಗಾಢವಾದ ಸಂಬಂಧ ವಿದ್ದಿರಬಹುದು. ಪ್ರಾಯಶಃ ಆಜನ್ಮದಲ್ಲಿಯೂ ನನ್ನ ಈ ಅಭಿಲಾಷೆಯು ತೃಪ್ತವಾಗದೆ ಇರಬಹುದು. ನಿನ್ನ ಚರಣಗಳಲ್ಲಿ ನನ್ನ ಮಸ್ತಕವನ್ನಿಟ್ಟು ಒಮ್ಮೆ ತೃಪ್ತಿಯಾಗುವಷ್ಟು ಅಳಬೇಕೆಂಬ ಬಯಕೆಯಿಂದಲೇ ನಾನು ನಿನ್ನನ್ನು ಕರೆತಂದಿದ್ದೇನೆ. ಸಾಕು, ನಾನಿನ್ನು ಹೆಚ್ಚಿಗೆ ಹೇಳಲಾರೆ. ನನ್ನ ಜೀವನವು ನಿನ್ನ ದಯೆಯನ್ನವಲಂಬಿಸಿದೆಯೆಂದು ತಿಳಿದುಕೊ. ನೀನೇನಾದರೂ ನನ್ನನ್ನು ತಿರಸ್ಕರಿಸಿದ್ದೇ ಆದರೆ, ಒಂದಿಲ್ಲ ಒಂದು ದಿನ ಈ ಕೊಠಡಿಯಲ್ಲಿಯೇ ಆಗಲಿ ಅಥವಾ ಗಂಗಾ ತೀರದಲ್ಲಾಗಲೀ ನೀನು ಕಮಲಾಪ್ರಸಾದನ ಹೆಣವನ್ನು ನೋಡುವೆ. ಇದು ನನ್ನ ದೃಢ ಸಂಕಲ್ಪ."

ಪೂರ್ಣಾಳ ಕೋಪವು ಶಾಂತವಾಯಿತು. ಕಂಪಿಸುವ ಧ್ವನಿಯಲ್ಲಿ ನುಡಿ ದಳು— "ಅಣ್ಣಾ, ನೀವು ನನ್ನೊಡನೆ ಎಂತಹ ಮಾತನ್ನಾಡುತ್ತಿರುವಿರಿ? ನಿಮಗೆ ನಾಚಿಕೆಯಾಗುವುದಿಲ್ಲವೆ?"

ಕಮಲಾಪ್ರಸಾದನು ಮಂಚದ ಮೇಲೆ ಕುಳಿತುಕೊಳ್ಳುತ್ತಾ ಹೇಳಿದನು: "ಇಲ್ಲ ಪೂರ್ಣಾ, ನನಗೇಕೋ ಇದರಲ್ಲಿ ನಾಚಿಕೆಪಡುವ ವಿಷಯವೇ ಕಾಣುವು ದಿಲ್ಲ. ತನ್ನ ಇಷ್ಟದೇವಿಯನ್ನಾರಾಧಿಸುವುದು ಲಜ್ಜಾಸ್ಪದವಾದುದೆ? ಪ್ರೇಮವು ಈಶ್ವರೀಯ ಪ್ರೇರಣೆ ಮತ್ತು ಸಂದೇಶ. ಪ್ರೇಮಪ್ರಪಂಚದಲ್ಲಿ ಮಾನವಕೃತ ಸಾಮಾಜಿಕ ಬಂಧನಗಳಿಗೆ ಬೆಲೆಯೇ ಇಲ್ಲ. ವಿವಾಹವು ಸಮಾಜ ಸಂಘಟ ನೆಯ ಏರ್ಪಾಡು ಮಾತ್ರ. ಜಾತಿ ಕುಲಗಳೆಲ್ಲವೂ ಕೇವಲ ಭಿನ್ನ ಭಿನ್ನ ಕೆಲಸ ಮಾಡುವವರ ಸಮೂಹಗಳು. ಕಾಲಚಕ್ರದ ಏರಿಳಿತಗಳಿಗೆ ಸಿಕ್ಕಿ ನೀನು ಈ ದುರವಸ್ಥೆಯಲ್ಲಿ ನರಳಬೇಕಾಗಿದೆ. ನಿನ್ನ ಈಗಿನ ಪರಿಸ್ಥಿತಿಯಲ್ಲಿ ಸುಖ ಮತ್ತು

ಪ್ರೇಮದ ಕಲ್ಪನೆಯೂ ಕೂಡ ಸಮಾಜದ ದೃಷ್ಟಿಯಲ್ಲಿ ಪಾಪವೆನಿಸುತ್ತದೆ, ಆದರೆ ಸಮಾಜವು ಎಂಥ ಘೋರವಾದ ಅನ್ಯಾಯ ಮಾಡುತ್ತಿದೆಯೆಂಬುದು ಸ್ವಲ್ಪ ಯೋಚಿಸಿದೆಯಾದರೆ ನಿನಗೇ ಗೊತ್ತಾಗುತ್ತದೆ. ಎರಡು ಮೂರು ವರ್ಷ ಕಾಲ ಪ್ರೇಮದ ಸುಖವನ್ನನುಭವಿಸಿದ ಮೇಲೆ ಜೀವನ ಪರ್ಯಂತ ವೈಧವ್ಯದ ಕಠೋರ ಯಾತನೆಗಳನ್ನು ಅನುಭವಿಸುವುದಕ್ಕಾಗಿಯೇ ವಿಧಾತನು ನಿನ್ನನ್ನು ಸೃಷ್ಟಿಸಿದ್ದಾನೆಯೆ? ಎಂದೆಂದಿಗೂ ಇಲ್ಲ; ಪರಮಾತ್ಮನು ಇಷ್ಟು ಅತ್ಯಾಚಾರಿಯೂ, ಕ್ರೂರಿಯೂ ಆಗಲಾರನು. ವಸಂತಕುಮಾರನು ನನ್ನ ಆಪ್ತ ಗೆಳೆಯನಾಗಿದ್ದನು. ಇಂದೂ ಅವನ ಜ್ಞಾಪಕ ಬಂತೆಂದರೆ ತಡೆಯಲಾರದಷ್ಟು ದುಃಖವಾಗುತ್ತದೆ. ಈಗಲೂ ಕೂಡ ಅವನು ನನ್ನೆದುರಿಗೆ ನಿಂತಿರುವಂತೆಯೇ ಕಾಣುತ್ತದೆ. ನಿನ್ನಲ್ಲಿ ಅವನಿಗೆ ಅಗಾಧ ಪ್ರೇಮವಿತ್ತು. ನಿನಗೇನಾದರೂ ಸ್ವಲ್ಪ ತಲೆನೋವಾಯಿತೆಂದರೆ, ಪಾಪ, ಅವನು ದಿಗ್ಭ್ರಾಂತನಾಗುತ್ತಿದ್ದನು. ನಿನ್ನನ್ನು ಸುಖಸಾಗರದಲ್ಲಿಯೇ ಮುಳುಗಿಸಬೇಕೆಂಬುದು ಅವನ ಅಭಿಲಾಷೆಯಾಗಿತ್ತು. ಕಷ್ಟದ ಛಾಯೆಯೂ ನಿನ್ನನ್ನು ಸೋಂಕದಂತೆ ಇಡಬೇಕೆಂಬುದು ಅವನ ಇಚ್ಛೆಯಾಗಿತ್ತು. ಅವನು ತನ್ನ ಸರ್ವಸ್ವವನ್ನೂ ನಿನಗೆ ಅರ್ಪಿಸಿ ಬಿಟ್ಟಿದ್ದನು. ಅಳಬೇಡ ಪೂರ್ಣಾ, ನೀನು ಸ್ವಲ್ಪ ಮಂಕಾಗಿದ್ದುದನ್ನು ನೋಡಿದರೂ ಅವನ ಹೃದಯ ಸಿಡಿದು ಹೋದಂತಾಗುತ್ತಿತ್ತು. ಈಗ ನೀನು ದುಃಖದಲ್ಲಿರುವುದನ್ನು ನೋಡಿ ಅವನ ಆತ್ಮಕ್ಕೆ ಎಷ್ಟು ವೇದನೆಯಾಗಿರಬಹುದು. ಅಲ್ಲದೆ ಇದು ನಿನಗೆ ಹೊಸ ವಿಷಯವೇನೂ ಅಲ್ಲ. ಇತ್ತ ಅನೇಕ ತಿಂಗಳಿಂದ ನಿನಗೆ ಅಳುವುದನ್ನು ಬಿಟ್ಟರೆ ಬೇರೆ ಕೆಲಸವೇ ಇಲ್ಲ. ನೀನು ಜೀವಮಾನಕಾಲದಲ್ಲೆಲ್ಲಾ ಅಳುತ್ತಿರಬೇಕು ಮತ್ತು ನಿನ್ನ ಮುಖಮಂಡಲದಲ್ಲಿ ಆನಂದದ ರೇಖೆಯೂ ಸುಳಿಯಬಾರದು ಎಂಬುದು ಸಮಾಜದ ಬಯಕೆ. ಇಲ್ಲವಾದಲ್ಲಿ ಅನರ್ಥವೇ ಆಗಿ ಹೋಗುವುದು; ನೀನು ಪತಿತಳಾಗುವೆ. ಆ ಆತ್ಮಕ್ಕೆ ನಿನ್ನ ಈ ವ್ಯರ್ಥವಾದ ತಪಸ್ಸನ್ನು ನೋಡಿ ಎಷ್ಟು ದುಃಖವಾಗುತ್ತಿರಬಹುದು ಎಂಬುದರ ಕಲ್ಪನೆಯಾದರೂ ನಿನಗಿದೆಯೆ? ನಿನ್ನನ್ನು ಅಪಾರವಾದ ಈ ಶೋಕಸಾಗರದಲ್ಲಿ ಮುಳುಗಿಸಬೇಕೆಂಬುದು ಪರಮಾತ್ಮನಿಗೆ ಇಷ್ಟವಿದ್ದಂತೆ ತೋರುವುದಿಲ್ಲ. ಅವನು ನಿನ್ನನ್ನು ಉದ್ಧರಿಸಬೇಕೆಂದಿದ್ದಾನೆ. ಅವನು ನಿನ್ನನ್ನು ಮತ್ತೊಮ್ಮೆ ಆನಂದದಲ್ಲಿ ಓಲಾಡಿಸಬೇಕೆಂದಿದ್ದಾನೆ. ಭಗವಂತನ ಪ್ರೇರಣೆ

ಯಿಲ್ಲದಿದ್ದರೆ ನನ್ನಂತಹ ದುರ್ಬಲ ಮಾನವನ ಹೃದಯದಲ್ಲಿ ಪ್ರೇಮ ಏಕೆ ಅಂಕುರಿಸುತ್ತಿತ್ತು? ಯಾರು ಯಾವ ಸ್ತ್ರೀಯನ್ನೂ ಎಂದೂ ಕಣ್ಣೆತ್ತಿ ಸಹ ನೋಡಲಿಲ್ಲವೋ ಅಂಥವನು ಇಂದು ನಿನ್ನಲ್ಲಿ ಪ್ರೇಮ ಭಿಕ್ಷೆಯನ್ನೇಕೆ ಬೇಡುತ್ತಿದ್ದ ? ನನಗೇನೋ ಇದು ದೈವೀ ಪ್ರೇರಣೆಯೆಂದೇ ಸ್ಪಷ್ಟವಾಗಿ ಅನುಭವವಾಗುತ್ತಿದೆ."

ಪೂರ್ಣಾ ಇದುವರೆಗೂ ಬಾಗಿಲನ್ನು ಒರಗಿ ನಿಂತಿದ್ದಳು. ಈಗ ಬಾಗಿಲನ್ನು ಬಿಟ್ಟು ಅವಳು ರತ್ನಗಂಬಳಿಯ ಮೇಲೆ ಕುಳಿತುಕೊಂಡಳು. ಕಮಲಾಪ್ರಸಾದನ ಮೇಲೆ ಮೊದಲು ಅವಳಿಗೆ ಯಾವ ಸಂದೇಹವಿತ್ತೋ ಅದು ಈಗ ಸ್ವಲ್ಪ ಸ್ವಲ್ಪ ಅಳಿಸಿ ಹೋಗಲಾರಂಭಿಸಿತು. ಅವಳು ತದೇಕಚಿತ್ತಳಾಗಿ ಅವನ ಮಾತುಗಳನ್ನು ಆಲಿಸುತ್ತಿದ್ದಳು.

ಕಮಲಾಪ್ರಸಾದನು ಅವಳು ರತ್ನಗಂಬಳಿಯ ಮೇಲೆ ಕುಳಿತುಕೊಳ್ಳುತ್ತಿರುವುದನ್ನು ನೋಡಿ ಮೇಲಕೆದ್ದನು. ಅವಳ ಕೈಹಿಡಿದು ಅವಳನ್ನು ಕುರ್ಚಿಯ ಮೇಲೆ ಕುಳ್ಳಿರಿಸುವ ಪ್ರಯತ್ನ ಮಾಡುತ್ತಾ ಹೇಳಿದನು— "ಇದಾಗದು ಪೂರ್ಣಾ, ಹೀಗೆಂದಿಗೂ ಆಗಲಾರದು. ಹಾಗಾದರೆ ನಾನೂ ನೆಲದ ಮೇಲೆಯೇ ಕುಳಿತುಕೊಳ್ಳುವೆನು. ಈ ಕುರ್ಚಿಯ ಮೇಲೆ ಕುಳಿತುಕೊಂಡರೆ ನಿನಗಾಗುವ ನಷ್ಟವೇನು ?"

ಪೂರ್ಣಾ ತನ್ನ ಕೈ ಬಿಡಿಸಿಕೊಳ್ಳಲು ಪ್ರಯತ್ನಿಸಲಿಲ್ಲ. ಕಮಲಾಪ್ರಸಾದನ ಈ ವ್ಯವಹಾರದಿಂದ ಅವಳಿಗೆ ಸಂಕೋಚವೂ ಆಗಲಿಲ್ಲ. "ಅಣ್ಣಾ, ನೀವು ಬಹಳ ಹಠವಾದಿಗಳು. ಯಾರಾದರೂ ನನ್ನನ್ನು ಈ ಅವಸ್ಥೆಯಲ್ಲಿ ನೋಡಿದರೆ ಗತಿಯೇನು ?" ಎಂದು ಹೇಳುತ್ತಾ ಅವಳು ಕುರ್ಚಿಯ ಮೇಲೆ ಕುಳಿತುಕೊಂಡಳು.

ಕಮಲಾಪ್ರಸಾದನ ಮುಖಾರವಿಂದವು ಅರಳಿತು. ಆನಂದ ಭರದಲ್ಲಿ ಹೇಳಿದನು— "ಯಾರಾದರೂ ಮನಸ್ಸಿಗೆ ಬಂದಂತೆ ಮಾತನಾಡಿಕೊಂಡರೆ ಅದು ಅವರ ಮೂರ್ಖತನ. ಸುಮಿತ್ರೆ ಇಲ್ಲಿ ಕುಳಿತಿರುವುದನ್ನು ನೋಡಿ ಯಾರೂ ಏನೂ ಹೇಳುವುದಿಲ್ಲ; ನೀನು ಇಲ್ಲಿ ಕುಳಿತಿರುವುದನ್ನು ನೋಡಿದರೆ ಅವರ ಕಣ್ಣುಗಳೇಕೆ ಕೆಂಪಾಗಬೇಕು ? ಇವೆಲ್ಲವೂ ಮಾನವನು ರಚಿಸಿರುವ ಸೋಗು ಅಥವಾ ವೇಷದ ಕಂತೆಗಳು. ನಾನು ಇವುಗಳಿಗೆ ಎಳ್ಳಷ್ಟೂ ಬೆಲೆ

ಕೊಡುವವನಲ್ಲ. ಪ್ರಪಂಚದಲ್ಲಿ ಎಲ್ಲಿ ನೋಡಿದರೂ ಆಡಂಬರ, ಬೂಟಾಟಿಕೆಗಳು ತುಂಬಿ ಹೋಗಿವೆ. ನಮ್ಮ ಜೀವನವೆಲ್ಲವೂ ಕಪಟದಿಂದ ಆವೃತವಾಗಿದೆ. ನಾನು ಈ ಬೂಟಾಟಿಕೆಯನ್ನೆಲ್ಲಾ ತೊಡೆದು ಹಾಕುವೆನು. ಪೂರ್ಣಾ, ನಾನು ನಿನ್ನಲ್ಲಿ ಸತ್ಯವನ್ನೇ ನುಡಿಯುತ್ತಿರುವೆನೆಂದು ತಿಳಿ. ನಾನು ಇಂದಿನವರೆಗೂ ಯಾವ ರಮಣಿಯನ್ನೂ ಕಣ್ಣೆತ್ತಿ ನೋಡಿದವನಲ್ಲ. ನನ್ನ ದೃಷ್ಟಿಯಲ್ಲಿ ಯಾವಳೂ ನನ್ನ ಮೆಚ್ಚುಗೆಯನ್ನು ಪಡೆಯಲು ತಕ್ಕವಳಾಗಿರಲಿಲ್ಲ. ಆದರೆ ನಿನ್ನನ್ನು ನೋಡಿದ ಕೂಡಲೆ ನನ್ನ ಹೃದಯದಲ್ಲಿ ಒಂದು ವಿಚಿತ್ರವಾದ ಸಂಘರ್ಷವೇ ನಡೆಯಿತು. ನಾನು ಆ ಕ್ಷಣವೇ ಇದು ಈಶ್ವರೀಯ ಪ್ರೇರಣೆಯೆಂದರಿತೆನು. ಭಗವಂತನ ಇಚ್ಛೆಯಿಲ್ಲದಿದ್ದರೆ ನೀನೇಕೆ ಈ ಮನೆಗೆ ಬರುತ್ತಿದ್ದೆ ? ಈ ಅವೇಳೆಯಲ್ಲಿ ನೀನು ಇಲ್ಲಿಗೆ ಬಂದಿರುವುದೂ ಭಗವತ್ಪ್ರೇರಣೆಯೆಂದರೆ ತಪ್ಪಾಗಲಾರದು. ಇದರಲ್ಲಿ ಸಂಶಯಕ್ಕೆ ಎಳ್ಳಷ್ಟೂ ಅವಕಾಶವಿಲ್ಲ. ನಾನೂ ಎಷ್ಟೋ ಸುಂದರಿಯರನ್ನು ನೋಡಿದ್ದೇನೆ; ಆದರೆ ಈ ನಿನ್ನೀ ಚಂದ್ರವದನದಲ್ಲಿ ಮನಸ್ಸನ್ನು ಮೋಹಿಸುವ ಯಾವ ಅಪೂರ್ವ ಶಕ್ತಿ ಇದೆಯೋ ಅದನ್ನು ಮತ್ತೆಲ್ಲಿಯೂ ಕಾಣಲಿಲ್ಲ."

ಹೀಗೆ ಹೇಳಿ ಕಮಲಾಪ್ರಸಾದನು ಪೂರ್ಣಾಳ ಕಪೋಲಗಳ ಮೇಲೆ ಮೃದುವಾಗಿ ಬೆರಳುಗಳಿಂದ ನೇವರಿಸಿದನು. ಪೂರ್ಣಾಳ ಮುಖವು ಕೆಂಪಾಯಿತು. ಅವಳು ಸಂಕೋಚದಿಂದ ಮುಖವನ್ನು ಬೇರೆ ಕಡೆ ತಿರುಗಿಸಿದಳು; ಆದರೆ ಕುರ್ಚಿಯನ್ನು ಬಿಟ್ಟು ಮೇಲಕ್ಕೇಳಲಿಲ್ಲ. ಇಲ್ಲಿಂದ ಓಡಿಹೋಗುವುದು ಅವಳಿಗೆ ಈಗ ಸಾಧುವಾಗಿ ಕಾಣಲಿಲ್ಲ. ಈ ಮಾತುಗಳನ್ನು ಕೇಳಿ ಅವಳ ಅಂತಃಸ್ಥಳದಲ್ಲಿ, ವಿವಾಹ ಮಂಟಪಕ್ಕೆ ಹೋಗುವ ಸಮಯದಲ್ಲಿ ಯುವತಿಯ ಹೃದಯದಲ್ಲಿ ಸ್ಫುರಿಯುವಂತಹ ಉಲ್ಲಾಸವು ಅಂಕುರಿಸಿತ್ತು.

ಕಮಲಾಪ್ರಸಾದನಿಗೆ ತಕ್ಷಣವೇ ಸೀರೆಗಳ ನೆನಪಾಯಿತು. ಎರಡು ಸೀರೆಗಳನ್ನೂ ಅವನು ಇದುವರೆಗೂ ಪೆಟ್ಟಿಗೆಯಲ್ಲಿಯೇ ಇಟ್ಟಿದ್ದನು. ಅವನು ಒಂದು ಸೀರೆಯನ್ನು ಪೆಟ್ಟಿಗೆಯಿಂದ ಹೊರಕ್ಕೆ ತೆಗೆದು ಪೂರ್ಣಾಳ ಮುಂದಿಡುತ್ತ ಹೇಳಿದನು— "ನೋಡು ಪೂರ್ಣಾ, ಇದು ಅದೇ ಸೀರೆ. ಅಂದು ನೀನು ತಿರಸ್ಕರಿಸಿದ್ದೆ. ಇಂದು ಇದನ್ನು ನೀನು ನನಗಾಗಿ ಸ್ವೀಕರಿಸು. ಒಂದೇ ಒಂದು ಕ್ಷಣಕಾಲ ಇದನ್ನು ಉಟ್ಟುಕೋ. ನಿನ್ನ ಈ ಬಿಳಿಯ ಸೀರೆಯನ್ನು ನೋಡಿದರೆ

ನನ್ನ ಮನಸ್ಸಿಗೆ ತುಂಬಾ ವೇದನೆಯಾಗುತ್ತದೆ. ನಾನು ಸತ್ಯವಾಗಿ ಹೇಳುತ್ತೇನೆ; ಇದನ್ನು ನಿನಗಾಗಿಯೇ ತಂದಿದ್ದೆ. ಸುಮಿತ್ರೆಯ ಮನಸ್ಸಿಗೆ ಸಂದೇಹವಾಗದಿರಲೆಂದು ಮತ್ತೊಂದು ಸೀರೆಯನ್ನು ತರಬೇಕಾಯಿತು. ಒಂದು ಕ್ಷಣ ಕಾಲವಾದರೂ ಇದನ್ನು ಧರಿಸಿಕೊ. ಈ ಬಣ್ಣದ ಸೀರೆ ನಿನಗೆ ಎಷ್ಟು ಚೆನ್ನಾಗಿ ಒಪ್ಪುತ್ತದೆ ಎಂಬುದನ್ನು ನಾನೂ ಸ್ವಲ್ಪ ನೋಡಿ ಸಂತೋಷಪಡುತ್ತೇನೆ. ನೀನು ಒಪ್ಪದೇ ಹೋದರೆ ನಾನೇ ಬಲವಂತ ಮಾಡಿಯಾದರೂ ಉಡಿಸುತ್ತೇನೆ! ”

ಪೂರ್ಣಾ ಸೀರೆಯನ್ನು ಕೈಗೆತ್ತಿಕೊಂಡು ಅವನ ಕಡೆಗೆ ನೋಡುತ್ತಾ ಹೇಳಿದಳು—“ಎಂದಾದರೂ ಉಟ್ಟುಕೊಳ್ಳುವೆ. ಇಷ್ಟು ಆತುರವೇಕೆ? ಅದೂ ಅಲ್ಲದೆ ಇಲ್ಲಿ ನಾನು ಹೇಗೆ ಉಟ್ಟುಕೊಳ್ಳಲಿ?”

ಕಮಲಾ:— “ನಾನು ಪಕ್ಕದ ಕೋಣೆಗೆ ಹೋಗುವೆ.”

ಕೊಠಡಿಯ ಒಂದು ಪಕ್ಕದಲ್ಲಿ ಚಿಕ್ಕದಾದ ಮತ್ತೊಂದು ಕೊಠಡಿಯಿತ್ತು. ಅದರಲ್ಲಿಯೇ ಕಮಲಾಪ್ರಸಾದನು ಆಗಾಗ್ಗೆ ಕುಳಿತು ಓದುತ್ತಿದ್ದನು. ಅದರ ಬಾಗಿಲಿಗೆ ಚೀಟಿನ ಬಟ್ಟೆಯ ಒಂದು ಪರದೆ ಹಾಕಿತ್ತು. ಕಮಲಾಪ್ರಸಾದನು ಪರದೆಯನ್ನು ಸರಿಸಿ ಆ ಕೊಠಡಿಯೊಳಕ್ಕೆ ಹೋದನು. ಆದರೆ ತಾನೊಬ್ಬಳೇ ಉಳಿದರೂ ಕೂಡ ಪೂರ್ಣಾ ಸೀರೆಯನ್ನು ಉಟ್ಟುಕೊಳ್ಳಲಾಗಲಿಲ್ಲ. ಉಟ್ಟುಕೊಳ್ಳಬೇಕೆಂಬ ಇಷ್ಟವೇನೋ ಇತ್ತು; ಆದರೆ ಕಮಲಾಪ್ರಸಾದನು ಮನಸ್ಸಿನಲ್ಲಿ ಯಾವ ಆಶಯವನ್ನಿಟ್ಟುಕೊಂಡಿರುವನೋ ಎಂಬ ಸಂದೇಹವೂ ಆಯಿತು.

ಕಮಲಾಪ್ರಸಾದನು ಪರದೆಯ ಮರೆಯಿಂದಲೇ ಹೇಳಿದ— “ಉಟ್ಟುಕೊಂಡಾಯಿತೆ? ಈಗ ಹೊರಗೆ ಬರಲೇ? ಪೂರ್ಣಾ ಮಂದಹಾಸದಿಂದ ಹೇಳಿದಳು— “ಹೌದು, ಉಟ್ಟುಕೊಂಡೆ; ಹೊರಟು ಬನ್ನಿರಿ.”

ಕಮಲಾಪ್ರಸಾದನು ಪರದೆಯನ್ನೆತ್ತಿ ಇಣಿಕಿ ನೋಡಿದನು. ಪೂರ್ಣಾ ಫಕ್ಕನೆ ನಕ್ಕುಬಿಟ್ಟಳು. ಕಮಲಾಪ್ರಸಾದನು ಪುನಃ ಪರದೆಯನ್ನೆಳೆದುಕೊಂಡನು. ಅದರ ಹಿಂದಿನಿಂದಲೇ ಹೇಳಿದನು— “ಈ ಸಾರಿ ನೀನೇನಾದರೂ ಉಟ್ಟುಕೊಳ್ಳದಿದ್ದರೆ, ಪೂರ್ಣಾ, ನಾನೇ ಬಂದು ಉಡಿಸುವುದು ಖಂಡಿತ!”

ಪೂರ್ಣಾ ಸೀರೆಯನ್ನು ಉಟ್ಟುಕೊಳ್ಳಲಿಲ್ಲ. ಆದರೆ ಅದರ ಸೆರಗನ್ನು ಬಿಚ್ಚಿ ತಲೆಯ ಮೇಲಿಟ್ಟುಕೊಂಡಳು. ಎದುರಿಗೇ ಕನ್ನಡಿಯಿತ್ತು. ಅವಳು

ಅತ್ತ ತನ್ನ ದೃಷ್ಟಿ ಹೊರಳಿಸಿದಳು. ಅವಳು ತನ್ನ ರೂಪ ಲಾವಣ್ಯಕ್ಕೆ ತಾನೇ ಮೋಹಗೊಂಡಳು. ಒಂದು ಕ್ಷಣ ಕಾಲ ಅವಳ ಮನಸ್ಸಿನಲ್ಲಿ ಗ್ಲಾನಿಯು ಅಂಕುರಿಸಿತು. ಅವಳ ಮರ್ಮಸ್ಥಳಕ್ಕೆ ಎಲ್ಲಿಂದಲೋ ಧ್ವನಿಯೊಂದು ಕೇಳಿ ಬಂದಿತು— "ಪೂರ್ಣಾ, ಎಚ್ಚರಿಕೆ! ನೀನು ಯಾವ ದಾರಿ ಹಿಡಿದಿರುವೆ? ಆ ದಾರಿ ನಿನ್ನ ಪಾಲಿಗೆ ಮುಚ್ಚಿ ಹೋಗಿದೆ. ನೀನು ಅದರ ಮೇಲೆ ಹೆಜ್ಜೆಯಿಡ ಲಾರೆ." ಅವಳು ಸೀರೆಯನ್ನು ಹೊರಕ್ಕೆ ತೆಗೆಯಬೇಕೆಂದಿದ್ದಳು, ಅಷ್ಟರ ಲ್ಲಿಯೇ ಕಮಲಾಪ್ರಸಾದನು ವೇಗವಾಗಿ ಪರದೆಯ ಮರೆಯಿಂದ ಹೊರಕ್ಕೆ ಬಂದು ಹೇಳಿದನು— "ಕೊನೆಗೂ ನೀನು ಉಟ್ಟುಕೊಳ್ಳಲೇ ಇಲ್ಲವಲ್ಲಾ! ನನ್ನ ಈ ಅಲ್ಪವಾದ ಮಾತನ್ನೂ ನೀನು ಒಪ್ಪಲಾರದೆ ಹೋದೆಯಲ್ಲ,"

ಪೂರ್ಣಾ:— "ಉಟ್ಟುಕೊಂಡೇ ಇದ್ದೀನಲ್ಲಾ, ಇನ್ನೇನು ಉಟ್ಟುಕೊ ಳ್ಳಲಿ? ನನಗೆ ಯಾವ ಸೀರೆ ತಾನೆ ಚೆನ್ನಾಗಿ ಕಾಣುತ್ತೆ? ನನ್ನ ಮೈ ಸೋಕಿ ದರೆ ಸೀರೆಯ ಬಣ್ಣವೇ ಕೆಟ್ಟು ಹೋಗುತ್ತೆ."

ಕಮಲಾಪ್ರಸಾದನು ಪ್ರೇಮವಿಹ್ವಲನಾಗಿ ಅವಳನ್ನೇ ನೋಡುತ್ತಾ ಹೇಳಿ ದನು— "ಸ್ವಲ್ಪ ಕನ್ನಡಿಯಲ್ಲಿ ನೋಡಿಕೊ."

ಪೂರ್ಣಾ ನೋಡಿದರೂ ನೋಡದವಳಂತೆ ಕನ್ನಡಿಯನ್ನು ನೋಡುತ್ತಾ ಹೇಳಿದಳು— "ನೋಡಿದೆ. ಇದು ನನಗೆ ಸ್ವಲ್ಪವೂ ಚೆನ್ನಾಗಿ ಕಾಣಿಸುವು ದಿಲ್ಲ."

ಕಮಲಾ:— "ದೀಪದ ಪ್ರಕಾಶವೂ ಮಂಕಾಯಿತು! ಭಲೇ ಪರಮಾತ್ಮ! ನೀನು ಇಂತಹ ಲೋಕೋತ್ತರವಾದ ಸೌಂದರ್ಯವನ್ನೂ ಸೃಷ್ಟಿಸಬಲ್ಲೆಯಾ? ನೀನೇ ಧನ್ಯ!!"

ಪೂರ್ಣಾ:— "ನಾನು ಬಿಚ್ಚಿ ಎಸೆದು ಬಿಡುವೆ."

ಕಮಲಾ:— "ಪರಮಾತ್ಮ! ಈಗ ನನ್ನನ್ನು ಹೇಗೆ ಪಾರುಮಾಡುವೆ?"

ಪೂರ್ಣಾ:— "ನನ್ನನ್ನು ಮುಳುಗಿಸಿ." ಹೀಗೆ ಹೇಳುತ್ತಿರುವಂತೆಯೇ ಅವಳ ಮುಖವು ಮಲಿನವಾಯಿತು.

ಪೂರ್ಣಾ ಸೀರೆಯನ್ನು ಬಿಚ್ಚಿ ಹಗ್ಗದ ಮೇಲೆ ಇಟ್ಟಳು.

ಕಮಲಾಪ್ರಸಾದನು ಕೇಳಿದ—"ಇಲ್ಲೇಕೆ ಇಡುತ್ತಿರುವೆ?"

ಪೂರ್ಣಾ ನುಡಿದಳು— "ಮತ್ತೆಲ್ಲಿಗೆ ತೆಗೆದುಕೊಂಡು ಹೋಗಲಿ? ತಮ್ಮನ್ನು ಇಷ್ಟರ ಮಟ್ಟಿಗೆ ಸತ್ಕರಿಸಿದೆ! ಇದಕ್ಕಾಗಿ ದೇವರು ನನಗಾವ ಶಿಕ್ಷೆಯನ್ನು ಕೊಡುವನೋ ಕಾಣೆ."

ಕಮಲಾ:– "ಭಗವಂತನು ನಿನಗೆ ಶಿಕ್ಷೆಯನ್ನು ಕೊಡುವುದಿಲ್ಲ ಪೂರ್ಣಾ. ಅವನ ಇಚ್ಛೆಯೇ ಹೀಗಿದೆ. ನೀನು ಆ ಚಿಂತೆಯನ್ನು ಬಿಡು. ನಿಂತಿರುವೆಯೇಕೆ ? ಇನ್ನೂ ಬೆಳಗಾಗಲು ಬಹಳ ಹೊತ್ತಿದೆ. ಈಗಲೇ ಓಡಿ ಹೋಗಬೇಕೆಂದು ಯೋಚಿಸುತ್ತಿರುವೆಯಾ ?"

ಪೂರ್ಣಾ ಬಾಗಿಲ ಬಳಿ ಹೋಗಿ ಹೇಳಿದಳು— "ಅಣ್ಣಾ, ಈ ವಿಷಯವನ್ನು ಇಲ್ಲಿಯೇ ಮರೆತು ಬಿಡಿ. ನನ್ನ ಜೀವನವನ್ನೇಕೆ ಹಾಳು ಮಾಡಲು ಹೊರಟಿದ್ದೀರಿ ? ನೀವು ಗಂಡಸರು; ನೀವು ಮಾಡಿದ್ದೆಲ್ಲವೂ ಸರಿಯೆ. ನಾನು ಹೆಂಗಸು; ನಾನೆಲ್ಲಿ ಹೋಗಬೇಕು ? ದೂರಾಲೋಚನೆ ಮಾಡಿರಿ. ಮನೆಯಲ್ಲೇನಾದರೂ ಸ್ವಲ್ಪ ಅನುಮಾನವಾಯಿತೆಂದರೆ, ನನಗಾವ ದುರ್ಗತಿಯಾಗುವುದೆಂಬುದನ್ನು ಯೋಚಿಸಿರುವಿರಾ ? ನದಿಯಲ್ಲೋ, ಕೆರೆಯಲ್ಲೋ ಮುಳುಗಿ ಸಾಯುವುದರ ಹೊರತು ನನಗೆ ಬೇರೆ ಮಾರ್ಗವೇನಿದೆ ? ಇದನ್ನೂ ಯೋಚಿಸಿರಿ—ನೀವು ನನಗಾಗಿ ಮನೆ ಮಠವನ್ನೆಲ್ಲಾ ತೊರೆದು ಬರಲು ಇಷ್ಟಪಡುವಿರಾ ? ಆಮೇಲೆ ಅಪಮಾನಿತರಾಗಿ, ಕಳಂಕಿತರಾಗಿ ಬದುಕಿದರೂ ಅದೊಂದು ಬದುಕೆ ? ಕೂಡದು, ಕೂಡದು, ನನ್ನಲ್ಲಿ ಕೃಪೆ ಮಾಡಿರಿ. ನಾನು ಇಂದು ಸತ್ತು ಹೋದರೂ ಯಾರಿಗೂ ಯಾವ ಹಾನಿಯೂ ಆಗುವುದಿಲ್ಲ. ಪೃಥ್ವಿಯ ಭಾರವೆಷ್ಟೋ ಕಡಿಮೆಯಾಗುವುದು; ಆದರೆ ತಮ್ಮ ಜೀವನ ಅಮೂಲ್ಯವಾದುದು. ಅದನ್ನು ತಾವು ನನಗಾಗಿ ಏಕೆ ಸಂಕಟಕ್ಕೀಡು ಮಾಡುವಿರಿ ? ಅವಕಾಶ ಸಿಕ್ಕಿದೊಡನೆಯೇ ತಾವು ನನ್ನಿಂದ ಏನೂ ಸಂಬಂಧವಿಲ್ಲದಂತೆಯೇ ಬೇರಾಗುವಿರಿ; ನನ್ನ ಗತಿ ಏನಾಗುವುದೆಂಬುದರ ಅಲ್ಪ ಚಿಂತೆಯೂ ಕೂಡ ಆ ಸಮಯದಲ್ಲಿ ನಿಮ್ಮ ಮನಸ್ಸಿನಲ್ಲಿ ಸುಳಿಯುವುದಿಲ್ಲ."

ಕಮಲಾಪ್ರಸಾದನು ಒತ್ತಿ ಹೇಳಿದನು— "ಹೀಗೆಂದಿಗೂ ಆಗಲಾರದು ಪೂರ್ಣಾ. ಅಂಥ ಸಮಯ ಬಂದರೆ ನಿನಗಾಗಿ ನನ್ನ ಪ್ರಾಣಗಳನ್ನೂ ಅರ್ಪಿಸುವೆನು. ಯಾವಾಗ ಬೇಕಾದರೂ ನನ್ನ ಮಾತನ್ನು ಪರೀಕ್ಷಿಸಬಹುದು."

ಪೂರ್ಣಾ:— "ರಾಯರೆ, ಇದೆಲ್ಲಾ ಹುರುಳಿಲ್ಲದ ಮಾತು. ಈ ಮೊಹಲ್ಲ

ದಲ್ಲಿಯೇ ಒಂದೆರಡು ಇಂತಹ ಘಟನೆಗಳನ್ನು ನಾನು ಕಣ್ಣಾರೆ ಕಂಡಿದ್ದೇನೆ. ನನ್ನ ಈ ರೂಪಕ್ಕೆ ನೀವೇಕೆ ಮೋಹಿತರಾದಿರೋ ನಾನರಿಯೆ. ನನ್ನ ದೌರ್ಭಾಗ್ಯವಲ್ಲದೆ ಬೇರೇನೂ ಇಲ್ಲ. ಪುರುಷರು ತಮ್ಮ ಇಚ್ಛಾಪೂರ್ತಿಯಾಗುವ ವರೆಗೂ ಸ್ತ್ರೀಯನ್ನು ದೇವತೆಯಂತೆ ಕಾಣುವರೋ ಎಂಬ ಸೋಗಿನಿಂದ ತಮ್ಮ ಕಾಮತೃಪ್ತಿ ಮಾಡಿಕೊಳ್ಳುವರು. ತಮ್ಮ ಕಾಮತೃಪ್ತಿಯಾಯಿತೆಂದರೆ, ಆ ಸ್ತ್ರೀಯು ಅವರಿಗೆ ಕಸಕ್ಕಿಂತಲೂ ಕಡೆ. ಇದನ್ನು ನಾನು ಚೆನ್ನಾಗಿ ಬಲ್ಲೆ. ದೇವರನ್ನೇಕೆ ನೀವು ಪದೇ ಪದೇ ಈ ಮಧ್ಯೆ ಎಳತರುತ್ತೀರೆಂಬುದರ ಆಶಯವೂ ನನಗೆ ಚೆನ್ನಾಗಿ ಗೊತ್ತು. ಪರಮಾತ್ಮನು ಯಾರನ್ನೂ ದುರ್ಮಾರ್ಗಕ್ಕೆ ಎಳೆಯುವುದಿಲ್ಲ. ಇದನ್ನು ಪ್ರೇಮವೆಂದಾದರೂ ಹೇಳಿರಿ, ವೈರಾಗ್ಯವೆಂದಾದರೂ ಹೇಳಿರಿ; ಆದರೆ ಇದು ದುರ್ಮಾರ್ಗವೆನ್ನುವುದರಲ್ಲಿ ಸಂಶಯವೇ ಇಲ್ಲ. ನಾನೆಂದಿಗೂ ಈ ಮೋಸದ ಬಲೆಗೆ ಸಿಕ್ಕಿ ಬೀಳುವುದಿಲ್ಲ. ಈ ದಿನ ಆದುದು ಆಗಿ ಹೋಯಿತು. ಇನ್ನು ಮುಂದೆ ಮರೆತೂ ನನ್ನ ಕಡೆ ಕಣ್ಣೆತ್ತಿ ನೋಡಬೇಡಿರಿ. ಇಲ್ಲವಾದಲ್ಲಿ ನಾನೇ ಇಲ್ಲಿರುವುದಿಲ್ಲ. ನನ್ನಿಂದ ಮತ್ತೇನು ಮಾಡಲು ಸಾಧ್ಯವಾಗದೆ ಇದ್ದರೂ ನದಿಯಲ್ಲಿ ಮುಳುಗಿಯಾದರೂ ಪ್ರಾಣ ಬಿಡುವೆನು. ಕಟ್ಟಿಗೆಯಿಲ್ಲದಿದ್ದರೆ ಬೆಂಕಿ ತಾನಾಗಿಯೇ ಆರಿ ಹೋಗುವುದಲ್ಲವೇ? ನನ್ನ ಹೃದಯಾಗ್ನಿಯನ್ನು ಕೆರಳಿಸುವ ಕಾರ್ಯಕ್ಕೆ ಕೈ ಹಾಕಬೇಡಿರಿ."

ಕಮಲಾಪ್ರಸಾದನು ಜೋಲು ಮುಖ ಹಾಕಿಕೊಂಡು ಹೇಳಿದ—"ಪೂರ್ಣಾ, ನಾನೇ ಸಾಯುವೆನು. ನಾನು ವಿಷಪಾನ ಮಾಡಿ ಕಣ್ಣುಮುಚ್ಚುವೆನು. ಕೊಲೆಯ ಆಪಾದನೆಯನ್ನು ನಿನ್ನ ತಲೆಗೆ ಕಟ್ಟುವರು. ಇದು ಸತ್ಯವೆಂದು ತಿಳಿ."

ಈ ಕೊನೆಯ ವಾಕ್ಯವನ್ನು ಪೂರ್ಣಾ ಕೇಳಿದಳೋ ಇಲ್ಲವೋ, ಹೇಳುವುದು ಕಷ್ಟ. ಅವಳು ಕದವನ್ನು ತೆರೆದು ಅಂಗಳದ ಕಡೆ ಹೊರಟಳು. ಕಮಲಾಪ್ರಸಾದನು ಬಾಗಿಲಲ್ಲಿಯೇ ನಿಂತುಕೊಂಡು ಅವಳನ್ನೇ ಎವೆಯಿಕ್ಕದೆ ನೋಡುತ್ತಿದ್ದನು. ಪೂರ್ಣಾಳನ್ನು ತಡೆಯುವ ಸಾಹಸ ಅವನಿಗಾಗಲಿಲ್ಲ. ಕಾಳಿನ ಆಶೆಯಿಂದ ಒಂದು ಸಾರಿ ಹಾರಿ ಬಂದ ಪಕ್ಷಿಯು ಆಕಸ್ಮಿಕವಾಗಿ ಕೇಳಿ ಬಂದ ಶಬ್ದಕ್ಕೆ ಹೆದರಿ ಹಾರಿ ಹೋಗಿತ್ತು. ಇಷ್ಟು ಅಲ್ಪ ಕಾಲದಲ್ಲಿಯೇ ಪೂರ್ಣಾಳ ಮನೋಭಾವನೆಗಳಲ್ಲಾದ ರೂಪಾಂತರಗಳನ್ನೆಲ್ಲಾ ಅವನು ಂತ

ಲ್ಲಿಯೇ ಯೋಚಿಸುತ್ತಿದ್ದನು. ಆ ಕೋಪ, ಆ ಉಲ್ಲಾಸಗೊಳಿಸುವ ಹಾಸ ವಿಲಾಸ, ಕೊನೆಗೆ ಈ ವೈರಾಗ್ಯ! ಈ ರಹಸ್ಯವನ್ನು ಅವನು ಭೇದಿಸಲಾರದವನಾಗಿದ್ದನು.

ಆ ಪಕ್ಷಿಯು ಪುನಃ ಕಾಳಿಗೆರಗುವುದೆ? ಇದೇ ಪ್ರಶ್ನೆ ಕಮಲಾಪ್ರಸಾದನ ಮನಃಪಟಲದ ಮೇಲೆ ಪದೇ ಪದೇ ಸುಳಿಯಲಾರಂಭಿಸಿತು.

## ೧೦

ಆದರ್ಶ ಹಿಂದೂ ಬಾಲಿಕೆಯಂತೆ ಪ್ರೇಮಾ ಪತಿಗೃಹಕ್ಕೆ ಬಂದು ಪತಿಯ ಛಾಯಾನುವರ್ತಿನಿಯಾಗಿದ್ದಳು. ಈಗ ಅಮೃತರಾಯನು ಅವಳ ಸ್ಮೃತಿಪಟಲದ ಮೇಲೆ ಎಂದೋ ಸ್ವಪ್ನದಲ್ಲಿ ಕಂಡ ವ್ಯಕ್ತಿಯಂತೆ ಮಸುಕು ಮಸುಕಾಗಿ ಸುಳಿಯುತ್ತಿದ್ದನು. ಅವಳು ಗೃಹಕೃತ್ಯದಲ್ಲಿ ಬಹಳ ಜಾಣೆಯಾಗಿದ್ದಳು. ದಿನವೆಲ್ಲಾ ಮನೆಯ ಯಾವುದಾದರೂ ಒಂದು ಕೆಲಸವನ್ನು ಮಾಡುತ್ತಲೇ ಇರುತ್ತಿದ್ದಳು. ದಾನನಾಥನಿಗೆ ಶೃಂಗಾರ ಸಾಮಗ್ರಿಗಳನ್ನು ಕೊಂಡುಕೊಳ್ಳುವುದೆಂದರೆ ಬಹಳ ಪ್ರೇಮ. ಅವನು ತನ್ನ ಮನೆಯನ್ನು ಅಲಂಕರಿಸಿ ಸುಂದರವಾಗಿಡಬೇಕೆಂದಿದ್ದನು. ಆದರೆ ಇದಕ್ಕೆ ಅತ್ಯಾವಶ್ಯಕವಾಗಿ ಬೇಕಾದ ಸಂಯಮ ಮತ್ತು ಶ್ರಮ ಅವನಲ್ಲಿರಲಿಲ್ಲ. ಯಾವ ವಸ್ತುವನ್ನೇ ಆಗಲೀ ಒಪ್ಪವಾಗಿಡುವುದನ್ನು ಅವನು ತಿಳಿದಿರಲಿಲ್ಲ. ಕನ್ನಡಕವನ್ನು ಸ್ನಾನಗೃಹದ ಗೂಡಿನಲ್ಲಿಟ್ಟು ಬಿಟ್ಟರೆ ಪುನಃ ಅದನ್ನು ಜ್ಞಾಪಿಸಿಕೊಳ್ಳುತ್ತಿದ್ದುದು ಕಾಲೇಜಿಗೆ ಹೋದ ಮೇಲೆಯೇ. ಆಹಾರ ಪಾನೀಯಗಳಲ್ಲಿಯಾಗಲೀ, ನಿದ್ದೆ ಅಥವಾ ವಿಶ್ರಾಂತಿಯ ವಿಷಯದಲ್ಲಿಯಾಗಲೀ ಅವನಿಗೆ ಯಾವ ನಿಯಮವೂ ಇರಲಿಲ್ಲ. ಎಂದಾದರೂ ಯಾವುದೋ ಒಂದು ಪುಸ್ತಕವು ಸಿಕ್ಕಿತೆಂದರೆ ರಾತ್ರಿಯೆಲ್ಲಾ ಜಾಗರಣ ಮಾಡುತ್ತಿದ್ದನು. ಒಂದೊಂದು ವೇಳೆ ಸಂಜೆಯ ವೇಳೆ ಮಲಗಿ ಬಿಟ್ಟನೆಂದರೆ ಊಟ-ತಿಂಡಿಯ ಪರಿವೆಯೂ ಇಲ್ಲದೆ ನಿದ್ದೆ ಹೊಡೆಯುತ್ತಿದ್ದನು. ಆದಾಯ-ವ್ಯಯದಲ್ಲಿಯೂ ಒಂದು ಕ್ರಮವಿರಲಿಲ್ಲ, ಕೈಯಲ್ಲಿ ಹಣವಿರುವಾಗ ನೀರಿನಂತೆ ಖರ್ಚು ಮಾಡುತ್ತಿದ್ದನು. ತನಗೆ ಅಗತ್ಯವಿಲ್ಲದ ಸಾಮಗ್ರಿಗಳನ್ನೂ ಮನೆಗೆ ತರುತ್ತಿದ್ದುದುಂಟು.

ಹಣವೆಲ್ಲಾ ಖರ್ಚಾಗಿ ಹೋದ ಮೇಲೆ ಕಟ್ಟಿಗೆ ಮತ್ತು ಎಣ್ಣೆಯ ಖರ್ಚಿನಲ್ಲಿ ಉಳಿತಾಯ ಮಾಡಬೇಕಾಗುತ್ತಿತ್ತು. ಆಗ ತನ್ನ ವೃದ್ಧ ತಾಯಿಯ ಮೇಲೆ ರೇಗುತ್ತಿದ್ದನು; ಆದರೆ ಇದರಲ್ಲಿ ತಾಯಿಯ ದೋಷವೇನೂ ಇರಲಿಲ್ಲ. ಮನಸ್ಸು ಮಾಡಿದ್ದರೆ ದಾನನಾಥನು ಕೈಯಲ್ಲಿ ನಾಲ್ಕು ಕಾಸು ಇಟ್ಟುಕೊಳ್ಳ ಬಹುದಿತ್ತು.

ಅವನು ತನ್ನ ತಾಯಿಯ ಮಾತು ಕೇಳಿದ್ದರೆ ಇಂದು ಅವನು ರಿಕ್ತಹಸ್ತ ನಾಗಿರುತ್ತಿರಲಿಲ್ಲ. ಮೂರು ಕಾಸಿನಲ್ಲಾಗುವ ಕೆಲಸವನ್ನು ಒಂದೂವರೆ ಕಾಸಿ ನಲ್ಲಿಯೇ ಮಾಡುವುದು ಅವನ ತಾಯಿಯ ಸ್ವಭಾವ. ಅವರ ಮನೆಯಲ್ಲಿ ಸೇವಕ–ಸೇವಕಿಯರಾರೂ ಹೆಚ್ಚು ಕಾಲ ನಿಲ್ಲುತ್ತಿರಲಿಲ್ಲ. ತಮ್ಮ ಕೆಲಸ ತಾವೇ ಮಾಡುವುದರಿಂದ ಅವರಿಗೆ ಒಂದು ವಿಧವಾದ ಆನಂದವಾಗುತ್ತಿತ್ತು. ಅವರ ತಾಯಿ ತಂದೆಯರು ಬಡವರಾಗಿದ್ದರು; ದಾನನಾಥನ ತಂದೆಯೂ ಸಾಮಾನ್ಯ ದರ್ಜೆಗೆ ಸೇರಿದವರಾಗಿದ್ದರು ಮತ್ತು ಅವರು ಜೀವಂತರಾಗಿದ್ದುದೂ ಅತ್ಯಲ್ಪ ಕಾಲ. ತಾಯಿಯು ಇಷ್ಟು ಮಿತವ್ಯಯದಿಂದ ಗೃಹಕೃತ್ಯವನ್ನು ನಿರ್ವಹಿಸದಿದ್ದರೆ ದಾನನಾಥನು ಇಂದು ಯಾವುದಾದರೂ ಕಛೇರಿಯಲ್ಲಿ ಆಳಾ ಗಿರುತ್ತಿದ್ದನು. ಇಂಥ ಮಹಿಳೆಯು ಕೃಪಣತನ ಮಾಡುವುದು ಸ್ವಾಭಾವಿಕವಾ ಗಿಯೇ ಇತ್ತು. ಆಕೆಯು ದಾನನಾಥನನ್ನು ಈಗಲೂ ಸಹ, ಎಂದೋ ತನ್ನ ಮಡಿಲಿನಲ್ಲಿ ಬಿದ್ದು ಆಟವಾಡುತ್ತಿದ್ದ ಮಗುವಿನಂತೆಯೇ ತಿಳಿದಿದ್ದಳು. ದಾನ ನಾಥನ ಮುಂದೆ ತಟ್ಟೆಯನ್ನಿಟ್ಟು ಅವನಿಗೆ ಊಟ ಮಾಡಿಸಲು ತಾನು ಕುಳಿತು ಕೊಳ್ಳುತ್ತಿದ್ದ ಕಾಲವು ಆಕೆಗೆ ಅತ್ಯಂತ ಆನಂದದ ಸಮಯವಾಗಿತ್ತು. ಅವಳು ಈ ಕೆಲಸವನ್ನು ಅಡಿಗೆಯವರಿಗಾಗಲೀ, ಇತರ ಆಳುಗಳಿಗಾಗಲೀ, ಎಂದೂ ಒಪ್ಪಿಸುತ್ತಿದ್ದವಳಲ್ಲ. ದಾನನಾಥನಿಗೆ ತಾನಾಗಿಯೇ ಊಟ ಮಾಡಿಸದ ಹೊರತು ಆಕೆಗೆ ತೃಪ್ತಿಯಾಗುತ್ತಿರಲಿಲ್ಲ.

ದಾನನಾಥನಿಗೂ ತಾಯಿಯೆಂದರೆ ಪಂಚಪ್ರಾಣ ! ತಾಯಿ ಹೊಟ್ಟೆ ತುಂಬಾ ಊಟ ಮಾಡಬೇಕು, ಮೈತುಂಬಾ ಒಳ್ಳೊಳ್ಳೆಯ ವಸ್ತ್ರಗಳನ್ನು ಉಡ ಬೇಕು—ಎಂಬುದು ದಾನನಾಥನ ಹೆಬ್ಬಯಕೆ; ಆದರೆ ಆಕೆಯ ಬಳಿ ಹೆಚ್ಚು ಕಾಲ ಕುಳಿತು ತನ್ನ ಮೃದು ಭಾಷಣದಿಂದ ಆಕೆಯ ಮನಸ್ಸಿಗೆ ಸಂತೋಷವ ನ್ನುಂಟು ಮಾಡಲು ಅವನಿಗೆ ಸಾಕಷ್ಟು ಕಾಲಾವಕಾಶವಿರಲಿಲ್ಲ ಮತ್ತು

ಇಚ್ಛೆಯೂ ಇರಲಿಲ್ಲ. ಗೆಳೆಯರೊಡನೆ ಹರಟೆ ಹೊಡೆಯುವುವರಲ್ಲಿ ಅವನಿಗೆ ಅಧಿಕ ಆನಂದವಾಗುತ್ತಿತ್ತು. ಮುದುಕಿಯು ಎಂದೂ ತನ್ನ ಮನೋಭಿಪ್ರಾಯ ವನ್ನು ಬಿಚ್ಚಿ ಹೇಳಿರಲಿಲ್ಲ. ಆದರೆ ದಾನನಾಥನು ತನ್ನ ವೇತನವನ್ನೆಲ್ಲ ತಂದು ತನ್ನ ಕೈಗಿಡಬೇಕೆಂಬುದು ಆಕೆಯ ಪೂರ್ಣ ಅಭಿಲಾಷೆಯಾಗಿತ್ತು. ದಾನ ನಾಥನು ಹಾಗೆ ಮಾಡಿದ್ದರೆ ಆಕೆಯು ತನ್ನ ಸ್ವಭಾವಕ್ಕನುಗುಣವಾಗಿ ಖರ್ಚು ಮಾಡುತ್ತಿದ್ದಳು. ಅವನಿಗೆ ಬರುತ್ತಿದ್ದ ಮುನ್ನೂರು ರೂಪಾಯಿಗಳೇನು ಕಡಿ ಮೆಯೇ? ಇಷ್ಟು ದೊಡ್ಡ ಗಂಟನ್ನೆಲ್ಲಾ ಅವನು ಹೇಗೆ ಖರ್ಚು ಮಾಡುತ್ತಾ ನೆಂಬುದೇ ಬಗೆಹರಿಯದ ಸಮಸ್ಯೆಯಾಗಿತ್ತು. ಇಷ್ಟು ರೂಪಾಯಿಗಳ ದೊಡ್ಡ ಗಂಟನ್ನು ಕೈಯಿಂದ ಸ್ಪರ್ಶಮಾಡುವ ಆನಂದವೇ ಆಕೆಗೆ ಒದಗಿರಲಿಲ್ಲ. ದಾನ ನಾಥನಲ್ಲಿ ಇಷ್ಟು ವಿವೇಕವಿರಲಿಲ್ಲವೋ ಅಥವಾ ನಿರ್ಲಕ್ಷ್ಯವೋ ಹೇಳುವುದು ಕಷ್ಟವಾಗಿತ್ತು.

ಪ್ರೇಮಾ ನಾಲ್ಕಾರು ತಿಂಗಳಲ್ಲಿಯೇ ಮನೆಯನ್ನು ಒಂದು ಸುವ್ಯವಸ್ಥಿತ ರೂಪಕ್ಕೆ ತಂದಳು. ಈಗ ಪ್ರತಿಯೊಂದು ಕೆಲಸವೂ ಕ್ಲಿಪ್ತವಾದ ಕಾಲದಲ್ಲಿ ನಿಯಮಕ್ಕನುಸಾರವಾಗಿ ನಡೆಯುತ್ತಿತ್ತು. ಪ್ರತ್ಯೇಕ ವಸ್ತುವಿಗೂ ಪ್ರತ್ಯೇಕ ಸ್ಥಾನವೇ ಗೊತ್ತು ಮಾಡಲ್ಪಟ್ಟಿತ್ತು. ಆದಾಯ ವೆಚ್ಚಗಳ ಲೆಕ್ಕವಿಡುವುದೂ ಆರಂಭವಾಗಿತ್ತು. ದಾನನಾಥನು ರಾತ್ರಿ ಹತ್ತು ಗಂಟೆಗೆ ಮಲಗಿ ಬೆಳಗಿನ ಝಾಮ ಐದು ಗಂಟೆಗೆ ಏಳಬೇಕಾಗಿತ್ತು. ಆಳು-ಕಾಳುಗಳು ಆನಂದದಿಂದಿ ದ್ದರು; ಆದರೆ ಎಲ್ಲರಿಗಿಂತಲೂ ಹೆಚ್ಚು ಸಂತೋಷದಿಂದಿದ್ದವರೆಂದರೆ ಪ್ರೇಮಾಳ ಅತ್ತೆಯವರು! ದಾನನಾಥನಿಗೆ ಚಿಲ್ಲರೆ ಖರ್ಚಿಗಾಗಿ ಇಪ್ಪತ್ತೈದು ರೂಪಾಯಿ ಗಳನ್ನು ಕೊಟ್ಟು ಉಳಿದ ಹಣವನ್ನೆಲ್ಲಾ ಪ್ರೇಮಾ ತನ್ನ ಅತ್ತೆಗೊಪ್ಪಿಸುತ್ತಿದ್ದಳು. ತನಗೇನಾದರೂ ಬೇಕಾದರೆ ಅವರಿಗೇ ಹೇಳುತ್ತಿದ್ದಳು. ಈ ರೀತಿಯಲ್ಲಿ ಮುದುಕಿಗೆ ತಾನು ಮನೆಯ ಯಜಮಾನಿಯೆಂಬ ಅನುಭವವಾಗುತ್ತಿತ್ತು. ತಿಂಗಳ ಪ್ರಾರಂಭದಿಂದಲೇ ಅತ್ತೆಯು ಹಣವೆಲ್ಲ ಮುಗಿದು ಹೋಯಿತು, ತನ್ನಲ್ಲಿ ಒಂದು ಕಾಸೂ ಇಲ್ಲವೆಂದು ಹೇಳುತ್ತಿದ್ದರೂ ಕೂಡ ಪ್ರೇಮಾ ಪ್ರತಿ ಕಾಸಿನ ಲೆಕ್ಕವನ್ನೂ ಬರೆದಿಡುತ್ತಿದ್ದುದರಿಂದ ಚೌಕಾಸಿ ಮಾಡಿಯಾದರೂ ತನಗೆ ಬೇಕಾದಷ್ಟು ಹಣವನ್ನು ಅವಳು ತನ್ನ ಅತ್ತೆಯಿಂದ ಕಸಿದುಕೊಂಡು ಬಿಡು ತ್ತಿದ್ದಳು.

ಇದೆಲ್ಲವೂ ಸುಗಮವಾಗಿ ನಡೆಯುತ್ತಿದ್ದರೂ, ಪ್ರೇಮಾಗೆ ಅಮೃತರಾಯ ನಲ್ಲಿ ಪ್ರೇಮವಿದೆಯೆಂಬ ಸಂಶಯವು ದಾನನಾಥನ ಮನಸ್ಸನ್ನು ಈಗಲೂ ಕೊರೆಯುತ್ತಲೇ ಇತ್ತು. ಪ್ರೇಮಾ ದಾನನಾಥನೆದುರಿಗೆ ತನ್ನ ಪ್ರಾಣವನ್ನೇ ತೆಗೆದಿಟ್ಟರೂ ಈ ಸಂಶಯವನ್ನು ಅವನ ಮನಸ್ಸಿನಿಂದ ತೊಡೆದು ಹಾಕಲು ಅಸಮರ್ಥಳಾಗಿದ್ದಳು. ಪ್ರೇಮಾಳ ಪ್ರಣಯ ಕಥೆಯು ಅವನಿಗೆ ಮೊದಲಿ ನಿಂದ ತಿಳಿಯದೇ ಹೋಗಿದ್ದರೆ, ಪ್ರಾಯಶಃ ಅವನು ತನ್ನನ್ನು ಪ್ರಪಂಚದಲ್ಲೇ ಅತ್ಯಂತ ಸುಖಿಯೆಂದು ತಿಳಿಯುತ್ತಿದ್ದನು. ಅವನು ಅವಳಿಂದ ಅಪೇಕ್ಷಿಸುವ ಸುಖದಲ್ಲಿ ಅವನಿಗೆ ಯಾವ ಅಭಾವವು ಗೋಚರಿಸುತ್ತಿತ್ತೋ ಅದು ಅವನಿಗೇ ಸರಿಯಾಗಿ ಗೊತ್ತಿರಲಿಲ್ಲ. ಹಾಗಾಗದಿದ್ದರೆ ತನ್ನ ಜೀವನವೇ ಬೇರೆ ತೆರನಾಗು ತ್ತಿತ್ತು ಎಂಬ ಕಲ್ಪನೆಯು ಅಸ್ಪಷ್ಟವಾಗಿ ಅವನನ್ನು ಕಾಡುತ್ತಿತ್ತು. ಅವನು ನಿತ್ಯವೂ ಅಮೃತರಾಯನ ಕಡೆಯಿಂದ ಇವಳ ಮನಸ್ಸನ್ನು ತಿರುಗಿಸಬೇಕೆಂಬ ಚಿಂತೆಯಲ್ಲಿಯೇ ಇರುತ್ತಿದ್ದನು. ಅವನಿಗೆ ಸಂಬಳವೇ ಅಲ್ಲದೆ, ವರ್ತಮಾನ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆಯುವುದರಿಂದಲೂ ಮತ್ತು ಪರೀಕ್ಷೆಯ ಉತ್ತರ ಪುಸ್ತಕಗಳ ಅವಲೋಕನದಿಂದಲೂ ಕೈತುಂಬ ಮೇಲು ಸಂಪಾದ ನೆಯೂ ಆಗುತ್ತಿತ್ತು. ಇದರಿಂದ ಅವನು ಪ್ರೇಮಾಗೆ ವಿಧವಿಧವಾದ ಉಡುಗ ರೆಯನ್ನು ಆಗಾಗ ತರುತ್ತಿದ್ದನು. ಸಾಧ್ಯವಾಗುವುದಾಗಿದ್ದರೆ ಅವನು ಅವಳಿ ಗಾಗಿ ಆಕಾಶದ ನಕ್ಷತ್ರಗಳನ್ನೇ ಕಿತ್ತು ತಂದು ಅವುಗಳಿಂದಲೇ ಹಾರ ಮಾಡಿಸಿ ಅವಳ ಕೊರಳನ್ನು ಅಲಂಕರಿಸುತ್ತಿದ್ದನು.

ತನ್ನ ಸಹೋದ್ಯೋಗಿಗಳಾದ ಇತರ ಉಪಾಧ್ಯಾಯರುಗಳೊಡನೆ ಅವ ಳನ್ನು ಬಾಯ್ತುಂಬ ಹೊಗಳದಿದ್ದರೆ ಅವನಿಗೆ ತೃಪ್ತಿಯೇ ಆಗುತ್ತಿರಲಿಲ್ಲ. ಅವನು ಹಿಂದೆಂದೂ ಕವಿತೆಯನ್ನು ರಚಿಸಿರಲಿಲ್ಲ. ಕವಿಗಳನ್ನು ಹಾಸ್ಯ ಮಾಡುತ್ತಿ ದ್ದುದೂ ಉಂಟು. ಆದರೆ ಈಗ ಗದ್ಯವೂ ಕೂಡ ಪದ್ಯವನ್ನೇ ಹೋಲುತ್ತಿತ್ತು. ಅವನ ಕವಿತೆಯ ಸಜೀವ ಮೂರ್ತಿಯೇ ಪ್ರೇಮಾ. ಅವಳ ಒಂದೊಂದು ರೀತಿ, ಭಾವಗಳನ್ನು ನೋಡಿ ಅವನ ಕಲ್ಪನಾ ಶಕ್ತಿಯು ತಾನಾಗಿಯೇ ಜಾಗ್ರ ತವಾಗುತ್ತಿತ್ತು. ಅವಳ ಎದುರಿಗೆ ಕುಳಿತರೆ ಅವನಿಗೆ ಪ್ರಪಂಚದ ಜ್ಞಾನವೇ ಇರುತ್ತಿರಲಿಲ್ಲ. ಅಲ್ಲಿನ ವಾತಾವರಣವೆಲ್ಲವೂ ಸ್ವರ್ಗದಂತಾಗುತ್ತಿತ್ತು. ಇಂತಹ ಕೋಮಲತೆ, ಇಂತಹ ಪ್ರಕಾಶ, ಇಂತಹ ಆಕರ್ಷಣ, ಇಂತಹ ಮಾಧುರ್ಯ

ಸ್ವರ್ಗೀಯವಲ್ಲದೆ ಬೇರೆಯಿಲ್ಲ. ಯಾವಾಗ ಅವಳು ತನ್ನ ಬೊಗಸೆಗಂಗಳಿಂದ ಅವನ ಕಡೆ ನಸುನಾಚಿಕೆಯಿಂದ ನೋಡುತ್ತಿದ್ದಳೋ ಆಗ ಅವನ ಹೃದಯವು ಪುಳಕಿತವಾಗುತ್ತಿತ್ತು. ನಿಜವಾದ ಪ್ರೇಮವು ಸಂಯೋಗದಲ್ಲಿಯೂ ವಿಯೋಗದ ಅನುಭವ ಮಾಡಿ ಕೊಡುತ್ತದೆ. ದಾನನಾಥನಿಗೆ ಪ್ರೇಮಾ ತನ್ನಿಂದ ದೂರ ಸರಿಯುತ್ತಿರುವಂತೆ ಕಾಣುತ್ತಿತ್ತು.

ದಾನನಾಥನ ಮನಸ್ಸಿನಲ್ಲಿ ಆ ಸಂದೇಹವು ಬಲವಾಗಿ ನಾಟಿತ್ತು. ಒಂದು ಸಾರಿ ಅವಳ ಹೃದಯಾಂತರಾಳದಲ್ಲಿ ಅಡಗಿರುವ ಭಾವನೆಗಳನ್ನು ತಿಳಿಯಬೇಕೆಂಬ ಕುತೂಹಲವು ದಾನನಾಥನಿಗಾಗುತ್ತಿತ್ತು; ಆದರೆ ತನ್ನ ಪರೀಕ್ಷೆಯಾಗುತ್ತಿದೆಯೆಂಬ ಭಾವನೆ ಪ್ರೇಮಾಳ ಮನಸ್ಸಿನಲ್ಲುಂಟಾಗಬಾರದೆಂಬ ಇಷ್ಟವೂ ಅವನಿಗಿತ್ತು. ಪ್ರೇಮಾಗೆ ಇದರ ಸೂಚನೆ ಸಿಕ್ಕಿದರೂ ಅನರ್ಥವೇ ಆಗುವುದರಲ್ಲಿ ಸಂಶಯವೇ ಇರಲಿಲ್ಲ. ಅವಳ ಕೋಮಲ ಹೃದಯವು ಆ ಪರೀಕ್ಷೆಯ ಭಾರವನ್ನು ಸಹಿಸಲು ಅಸಮರ್ಥವಾಗಿದ್ದಿತೆಂಬುದು ನಿರ್ವಿವಾದ ವಿಷಯವಾಗಿತ್ತು.

ದಾನನಾಥನಿಗೆ ಈಗ ಅಮೃತರಾಯನ ಮೇಲೆ ದ್ವೇಷವುಂಟಾಗಲು ಕಾರಣವೇನೆಂಬುದು ಯಾರಿಗೂ ತಿಳಿಯದು. ಪ್ರಾಯಶಃ ತನ್ನ ಆನಂದಮಯ ಜೀವನದಲ್ಲಿ ಅವನು ವಿಷವೃಕ್ಷವನ್ನು ನೆಟ್ಟಿದ್ದನೆಂದೇ ದಾನನಾಥನು ತಿಳಿದಿದ್ದನು. ಹೀಗಾಗದೆ ಇದ್ದರೆ ಅವರ ಸುಖಮಯವಾದ ಬಾಳನ್ನು ನೋಡಿ ದೇವತೆಗಳಿಗೂ ಅಸೂಯೆ ಆಗುತ್ತಿತ್ತೇನೊ ! ಅವನು ಈಗಲೂ ಅಮೃತರಾಯನ ಮನೆಗೆ ಹೋಗುತ್ತಿದ್ದನು; ಗಂಟೆಗಟ್ಟಲೆ ಅಲ್ಲಿರುತ್ತಿದ್ದನು; ಆದರೆ ಇಬ್ಬರು ಗೆಳೆಯರಲ್ಲಿ ದೇಹ ಬೇರೆಯಾದರೂ ಜೀವ ಒಂದೇ ಎಂಬ ಗಾಢವಾದ ಮೈತ್ರಿ ಇರಲಿಲ್ಲ. ಅಮೃತರಾಯನಿಗೂ ಈ ವಿಷಯ ಗೊತ್ತಿತ್ತು. ಅವನಿಗೆ ಪ್ರೇಮಾಳ ಕುಶಲ ಸಮಾಚಾರವನ್ನು ಕೇಳಬೇಕೆಂಬ ಪ್ರಬಲ ಇಚ್ಛೆಯಾಗುತ್ತಿತ್ತು. ಎಂದಾದರೂ ಒಂದು ಸಾರಿ ಅವಳನ್ನು ಭೇಟಿ ಮಾಡಿ, ತನ್ನ ವಿಷಯವಾಗಿ ಅವಳ ಮನಸ್ಸಿನಲ್ಲಿರುವ ತಪ್ಪು ಭಾವನೆಯನ್ನು ಹೋಗಲಾಡಿಸಬೇಕೆಂಬ ಇಷ್ಟವೂ ಅವನಿಗಿತ್ತು. ಆದರೆ ಸೂಕ್ಷ್ಮ ಪರಿಸ್ಥಿತಿಯನ್ನು ನೋಡಿ ಈ ವಿಷಯವಾಗಿ ಮಾತನಾಡಬೇಕೆಂದರೆ ಅವನಿಗೆ ಸಂಕೋಚ ಮಾತ್ರವಲ್ಲದೆ ಭಯವೂ ಆಗುತ್ತಿತ್ತು. ದಾನನಾಥನು ಇಷ್ಟು ಅಲ್ಪನೆಂಬುದು ಅವನಿಗೆ ಮೊದಲು ತಿಳಿದಿರಲಿಲ್ಲ.

ಕೊನೆಗೆ ಒಂದು ದಿನ ಅಮೃತರಾಯನು ಈ ಮಾತನ್ನು ಪ್ರಸ್ತಾಪಿಸಿಯೇ ಬಿಟ್ಟನು—"ಇತ್ತೀಚೆಗೆ ನಿನ್ನ ಸ್ವರೂಪವನ್ನು ಕನ್ನಡಿಯಲ್ಲಿ ನೋಡಿಕೊಳ್ಳುತ್ತಿರುವೆಯೇನು ?"

ದಾನನಾಥನು ಪ್ರಶ್ನೆಯ ಆಶಯವನ್ನು ಅರಿಯದೆಯೇ ಉತ್ತರವಿತ್ತನು—

"ಏಕಿಲ್ಲ? ಕನಿಷ್ಠ ಪಕ್ಷ ದಿನಕ್ಕೆ ನಾಲ್ಕು ಸಾರಿಯಾದರೂ ತಪ್ಪದೇ ನೋಡಿಕೊಳ್ಳುತ್ತೇನೆ."

"ಏನಾದರೂ ವ್ಯತ್ಯಾಸ ಕಾಣುತ್ತದೆಯೇ ?"

"ದಿನೇ ದಿನೇ ಕೃಶಗಾತ್ರನಾಗುತ್ತಿದ್ದೇನೆ."

"ಗೆಳೆಯಾ, ಸುಳ್ಳಾಡಬೇಡ. ನೀನು ಇಷ್ಟು ದಪ್ಪನಾಗಿ ಊದಿಕೊಂಡಿದ್ದನ್ನು ನಾನು ಎಂದೂ ನೋಡಿಯೇ ಇರಲಿಲ್ಲ. ನಿನ್ನ ಅಂಗ ಸೌಷ್ಟವವನ್ನು ನೋಡಿ ನಿನಗೆ ಧನ್ಯವಾದವನ್ನರ್ಪಿಸಬೇಕೆಂದಿದ್ದೆ. ನಿನಗೆಲ್ಲಿಯಾದರೂ ದೃಷ್ಟಿಯಾದೀತೆಂಬ ಭಯದಿಂದ ಸುಮ್ಮನಾದೆ."

"ನೀವು ದಿನೇ ದಿನೇ ಕೃಶವಾಗುತ್ತಿದ್ದೀರಿ ಎಂದು ಪ್ರೇಮಾ ನನಗೆ ಆಗಾಗ ಹೇಳುತ್ತಿರುತ್ತಾಳೆ. ಅವಳು ಹೇಳುವುದು ಸರಿಯೆಂದೇ ನನಗೂ ಕಾಣುತ್ತಿ ಮೊದಲು ಒಂಟಿಯಾಗಿ ಯಾವ ಚಿಂತೆಯೂ ಇಲ್ಲದೇ ಇದ್ದೆ. ಈಗ ಗೃಹ ಕೃತ್ಯದ ಭಾರವೆಲ್ಲಾ ನನ್ನ ಮೇಲೆಯೇ ಬಿದ್ದಿದೆ. ಈ ಪರಿಸ್ಥಿತಿಯಲ್ಲಿ ದುರ್ಬಲನಾಗದೆ ದೃಢಕಾಯನಾಗುವುದು ಸಾಧ್ಯವೆ ?"

ಅಮೃತರಾಯನಿಗೆ ನಗು ತಡೆಯಲಾಗಲಿಲ್ಲ. ದಾನನಾಥನು ಇಂತಹ ಮಂದ ಬುದ್ಧಿಯವನೆಂದು ಅವನೆಂದೂ ತಿಳಿದಿರಲಿಲ್ಲ.

ದಾನನಾಥನು ಅಭಿಪ್ರಾಯ ಪಟ್ಟದ್ದೇ ಬೇರೆ. "ಇವನು ನನ್ನನ್ನು ಅಪಹಾಸ್ಯ ಮಾಡುತ್ತಿದ್ದಾನೆ. ನಾನು ದಪ್ಪನಾಗಲಿ ಅಥವಾ ಬಡಕನಾಗಲಿ, ಇದಕ್ಕೂ ಇವನಿಗೂ ಯಾವ ಸಂಬಂಧ? ಇದನ್ನು ಕೇಳಲು ಇವನಿಗೇನು ಅಧಿಕಾರ? ಪ್ರೇಮಾಳ ಪ್ರೇಮಮಯ ಸೇವೆಯು ನನ್ನನ್ನು ದೃಢಕಾಯನನ್ನಾಗಿ ಮಾಡಿದೆಯೆಂಬುದನ್ನು ನಿರ್ಧರಿಸುವುದೇ ಇವನ ಇಷ್ಟವಾಗಿರಬಹುದು. ಒಂದು ವೇಳೆ ಇದು ಸತ್ಯವಾಗಿದ್ದರೂ ಇವನಿಗೇಕೆ ಅಸೂಯೆ? ಅವಳಿಗೂ ಇವನಿಗೂ ಉಳಿದಿರುವ ಸಂಬಂಧವಾದರೂ ಏನು ? 'ಕೊಳಕು ಪಾತ್ರೆಯಲ್ಲಿರುವ ಶುದ್ಧವಾದ ನೀರೂ ಕೊಳಕಾಗುತ್ತದೆ. ದ್ವೇಷದಿಂದ ತುಂಬಿರುವ

ಮನಸ್ಸು ಪವಿತ್ರ ಪ್ರೇಮವನ್ನೂ ಸಹಿಸದು.' ಇದೇ ದಾನನಾಥನು ಕೆಲವು ತಿಂಗಳ ಕೆಳಗೆ ಎಂಥೆಂಥ ಕವಿಗಳನ್ನೂ ಕೂಡ ಒಂದು ಚುಟಿಕೆ ಹಾಕುವಷ್ಟ ರಲ್ಲಿಯೇ ದಂಗುಬಡಿಸುತ್ತಿದ್ದ. ಆ ದಾನನಾಥನ ಬುದ್ಧಿಗೆ ಈಗ ಅದಾವುದೋ ಮಂಕು ಕವಿದಿದ್ದಿತು. ಈ ಮಹಾಶಯನು ನನ್ನನ್ನು ಮರೆಸಿ ಪ್ರೇಮಾಳ ಆಂತ ರಿಕ ಭಾವನೆಗಳನ್ನೆಲ್ಲಾ ನನ್ನಿಂದ ತಿಳಿಯಲಪೇಕ್ಷಿಸುತ್ತಿರಬಹುದೆಂದು ಅವನು ಗ್ರಹಿಸಿದನು. ನನ್ನೊಡನೆಯೇ ಈ ಕಣ್ಣುಮುಚ್ಚಾಲೆಯಾಟವೆ? ಇನ್ನೂ ಕೆಲವು ದಿನಗಳು ಚೆನ್ನಾಗಿ ಓದಿ ಅನುಭವ ಮಾಡಿಕೊಂಡು ನನ್ನೊಡನೆ ತರ್ಕಕ್ಕೆ ಬರಲಿ." ಇಷ್ಟೆಲ್ಲಾ ಯೋಚಿಸಿದ ನಂತರ ದಾನನಾಥನು ಹೇಳಿ ದನು— "ನೀನು ನಕ್ಕಿದ್ದೇಕೆ? ನಿನಗೆ ನಗು ಬರುವಂತಹ ಯಾವ ಮಾತ ನ್ನಾಡಿದೆ?"

ಅಮೃತರಾಯ:— "ಇಲ್ಲವಯ್ಯಾ, ನಾನು ನಿನ್ನನ್ನು ನೋಡಿ ನಗಲಿಲ್ಲ. ನೀನು ನಿನ್ನ ದೃಷ್ಟಿ ಮತ್ತು ಸೂಕ್ಷ್ಮಬುದ್ಧಿಯಿಂದ ಕಾರ್ಯ ಸಾಧಿಸುವುದನ್ನು ಬಿಟ್ಟು ಬಿಟ್ಟಿದ್ದೀಯೆ. ಸರಿ, ನಾನೇ ಮೋಸ ಹೋಗಿದ್ದರೂ ಇರಬಹುದು. ಕೆಲವು ವೇಳೆ ನೋಟದಿಂದ ಮೋಸ ಹೋಗುವುದೂ ಉಂಟು. ಆದರೆ ನೀನು ಇದೇ ರೀತಿ ದಿನೇ ದಿನೇ ಕೃಶನಾಗುತ್ತಾ ಹೋದರೆ ಬಹಳ ಕಷ್ಟವನ್ನನುಭವಿಸ ಬೇಕಾಗುವುದು. ಯಾರಾದರೂ ವೈದ್ಯರಿಗೆ ತೋರಿಸುವುದುತ್ತಮ. ಹವಾ ಬದಲಾವಣೆಗಾಗಿ ಬೆಟ್ಟದ ನಿವಾಸಕ್ಕೇನಾದರೂ ಹೋಗುವ ಇಷ್ಟವಿದ್ದರೆ, ನಾನೂ ನಿನ್ನ ಸಂಗಡ ಹೊರಡಲು ಸಿದ್ಧನಿದ್ದೇನೆ."

ದಾನನಾಥ:— "ಬೆಟ್ಟದ ನಿವಾಸಕ್ಕೆ ಹೋಗುವುದು ಖರ್ಚಿನ ಬಾಬು; ಕೈಯ್ಯಲ್ಲಿ ಒಂದು ಕಿಲುಬಿದ ಕಾಸೂ ಇಲ್ಲ; ಆದ್ದರಿಂದ ಇದು ಸಾಧ್ಯವಿಲ್ಲದ ಮಾತು."

ಅಮೃತರಾಯ— "ಹಣಕ್ಕೇಕೆ ಯೋಚನೆ? ನಾನು ಕೊಡುವೆನು. ಮೊದಲು ನೀನು ಹೊರಡಲು ಸಿದ್ಧನಾಗು. ಇನ್ನೂ ಎರಡು ತಿಂಗಳ ಕಾಲ ವಿದೆ. ಏಪ್ರಿಲ್ ತಿಂಗಳಲ್ಲಿಯೇ ಹೊರಟು ಬಿಡೋಣ."

ದಾನನಾಥ:— "ನಿನ್ನ ಹತ್ತಿರ ತಾನೆ ಹಣ ಎಲ್ಲಿದೆ? ಇದ್ದದ್ದನ್ನೆಲ್ಲಾ ನೀರಿನಂತೆ ಖರ್ಚು ಮಾಡಿದೆ."

ಅಮೃತ:— "ಬೆಟ್ಟದ ನಿವಾಸಕ್ಕೆ ನಮ್ಮ ಪ್ರಾಂತದ ರಾಜ ಮಹಾರಾಜರುಗಳೂ ಶ್ರೀಮಂತರುಗಳೂ ಬರುತ್ತಾರೆ. ಅವರಿಂದ ವಸೂಲ್ಮಾಡೋಣ."

ದಾನ:— "ಚೆನ್ನಾಗಿ ಹೇಳಿದೆ! ಅಂತಹ ಹಣದಿಂದ ನೀನು ಬೆಟ್ಟದ ಮೇಲಿನ ತಂಪಾದ ವಾಯುವಿನ ಸುಖಾನುಭವ ಮಾಡುವೆಯಾ? ತನ್ನ ಮನೆಯ ಆಸ್ತಿಪಾಸ್ತಿಯನ್ನೆಲ್ಲಾ ಕಂಡವರಿಗೆ ದಾನ ಮಾಡಿ, ಈಗ ಇತರರ ಎದುರಿಗೆ ಕೈಯೊಡ್ಡಿ ಭಿಕ್ಷೆ ಬೇಡುವೆಯಾ?"

ಅಮೃತ:— "ಮನುಷ್ಯ ತನ್ನ ಲಾಭ ತಾನು ನೋಡಿಕೊಳ್ಳಬೇಕೇ ಹೊರತು, ಅನ್ಯರ ಕಷ್ಟ—ನಷ್ಟಗಳಿಗಾಗಿ ಅಳುತ್ತಾ ಕುಳಿತರೆ ಅವನಿಗೆ ಬಂದ ಲಾಭವೇನು? ನಾನು ಕದ್ದೇ ತರುವೆನೆಂದೆಣಿಸು. ಅದಕ್ಕೂ ನಿನಗೂ ಯಾವ ಸಂಬಂಧವೂ ಇಲ್ಲ."

ದಾನ:— ಹಾಗಾದರೆ ನನ್ನನ್ನು ಕ್ಷಮಿಸು. ನೀನೇ ಹವಾ ಬದಲಾವಣೆಗೆ ಪರ್ವತ ಪ್ರದೇಶದಲ್ಲಿ ಸಂಚಾರ ಮಾಡಿಕೊಂಡು ಬಾ. ನೀನು ವ್ಯರ್ಥವಾಗಿ ಇದ್ದ ಹಣವನ್ನೆಲ್ಲಾ ಖರ್ಚು ಮಾಡಿದೆ. ನೂರಿನ್ನೂರು ಅನಾಥರಿಗೆ ಆಶ್ರಯ ಕೊಟ್ಟ ಮಾತ್ರದಿಂದಲೇ ಯಾವ ದೊಡ್ಡ ಉಪಕಾರವಾದಂತಾಯಿತು. ಸರಿ, ನಿನ್ನ ಜನನಾಯಕನಾಗಬೇಕೆಂಬ ಅಭಿಲಾಷೆಯೇನೋ ಪೂರ್ಣವಾಗಬಹುದು."

ಹೀಗೆ ಹೇಳುತ್ತಾ ಅವನು ಹೊರಡಲು ಎದ್ದು ನಿಂತನು. ದಾನನಾಥನ ಈ ತೆರನಾದ ಸ್ವಭಾವದ ಪರಿಚಯ ಅಮೃತರಾಯನಿಗೆ ಚೆನ್ನಾಗಿ ಆಗಿತ್ತು.

ದಾನನಾಥನಿಗೆ "ಉಪಕಾರ" ಎಂಬ ಶಬ್ದವನ್ನು ಕೇಳಿದರೆ ಏನೋ ಒಂದು ವಿಧವಾದ ಜಿಗುಪ್ಸೆ. ಸೇವೆಯ ವಿಷಯದಲ್ಲಿ ಅವನಿಗೆ ಇಷ್ಟು ತಿರಸ್ಕಾರವಿರಲಿಲ್ಲ. ಸೇವೆ ಮತ್ತು ಉಪಕಾರಗಳ ಹಿನ್ನೆಲೆಯಲ್ಲಿ ಅಹಂಕಾರ ಮತ್ತು ಕೀರ್ತಿಯ ಆಕಾಂಕ್ಷೆಗಳು ಅಡಗಿವೆ ಎಂಬುದು ಅವನಿಗೆ ತಿಳಿಯುತ್ತಿತ್ತು. ಅಮೃತರಾಯನು ಯಾವ ಉತ್ತರವನ್ನೂ ಕೊಡಲಿಲ್ಲ. ಕೊಟ್ಟಿದ್ದರೂ ದಾನನಾಥನು ಕೇಳಲು ಸಿದ್ಧನಿರಲಿಲ್ಲ. ಅವನು ಮನೆಗೆ ಹೋಗಲು ಆತುರನಾಗಿದ್ದನು; ಆದಕಾರಣ ಅವನು ಎದ್ದು ನಿಂತು ದಾನನಾಥನ ಕೈ ಕುಲುಕಿದನು. ದಾನನಾಥನು ಒಂದು ಕ್ಷಣವೂ ನಿಲ್ಲದೆ ಹೊರಟೇಬಿಟ್ಟನು.

ಮಾಘ ಮಾಸದ ಕೃಷ್ಣಪಕ್ಷ. ಅದರ ಮೇಲೆ ಮೋಡಗಳು ಆಕಾಶ

ವನ್ನು ಮುಚ್ಚಿದ್ದುವು. ರಸ್ತೆಯ ಪಕ್ಕದಲ್ಲಿ ಲಾಂದ್ರಗಳು ಬೆಳಗುತ್ತಿದ್ದುವು. ದಾನನಾಥನಿಗೆ ಈ ಸಮಯದಲ್ಲಿ ಸೈಕಲ್ ಮೇಲೆ ನಡುಗುತ್ತಾ ಹೋಗುವುದು ಅಸಹ್ಯವೆನಿಸುತ್ತಿತ್ತು. ಮೋಟಾರು ಮತ್ತು ಜಟಕಾಗಳು ರಸ್ತೆಯಲ್ಲಿ ಓಡಾಡುತ್ತಿದ್ದುವು. ಅವನಿಗೆ ತನ್ನ ಜೀವನದಲ್ಲಿ ವಾಹನವನ್ನು ಇಟ್ಟುಕೊಳ್ಳುವ ಭಾಗ್ಯವೇ ಇರಲಿಲ್ಲವೇನೋ ? ತನ್ನ ಸ್ಥಿತಿಯು ಯಾವಾಗಲೂ ಹೀಗೆಯೇ ಇರುವುದೆಂಬ ಅರಿವು ಅವನಿಗಾಯಿತು. ಅವನು ಓದುತ್ತಿದ್ದಾಗಲೂ ಈಗಿನಂತೆಯೇ ಊಟ ಮಾಡುತ್ತಿದ್ದ; ಬಟ್ಟೆಗಳನ್ನು ಧರಿಸುತ್ತಿದ್ದ. ಈಗ ಅದಕ್ಕಿಂತಲೂ ಹೆಚ್ಚಿನ ವ್ಯತ್ಯಾಸವಾವುದೂ ಅವನಲ್ಲಿ ಕಂಡುಬರುತ್ತಿರಲಿಲ್ಲ. ಇದುವರೆಗೂ ಅವನು ಯಾವ ಆಸ್ತಿಯನ್ನೂ ಕೊಂಡುಕೊಂಡಿರಲಿಲ್ಲ. ಮನೆಗೆ ಅತ್ಯಗತ್ಯವಾಗಿ ಬೇಕಾದ ಸಾಮಾನುಗಳನ್ನೂ ಕೊಂಡಿರಲಿಲ್ಲ. ಇಷ್ಟರ ಮೇಲೂ ಅಮೃತರಾಯನು ತನ್ನ ವಿಷಯದಲ್ಲಿ ಆಡಿದ ಮಾತು ಅವನ ಮನಸ್ಸಿಗೆ ಬಲವಾಗಿ ನಾಟಿತ್ತು. "ಅಪ್ಪ ಸಂಪಾದಿಸಿದ್ದನ್ನು ಸ್ವೇಚ್ಛೆಯಾಗಿ ಖರ್ಚು ಮಾಡುತ್ತಾನೆ. ಇಲ್ಲದಿದ್ದರೆ ಒಂದು ತುತ್ತು ಕೂಳಿಗೆ ಕಂಡವರ ಮುಂದೆ ಕೈ ಚಾಚಬೇಕಾಗುತ್ತಿತ್ತು. ಪರೋಪಕಾರ, ಪರಸೇವೆಗಳು ಹತ್ತಿರವೂ ಸುಳಿಯುತ್ತಿರಲಿಲ್ಲ." ಎಂದು ಅಮೃತರಾಯನ ವಿಷಯದಲ್ಲಿ ಕ್ಷಣಕಾಲ ಯೋಚಿಸಿದನು.

ಮನೆಯ ಒಳಗೆ ಕಾಲಿಡುತ್ತಲೇ ಪ್ರೇಮಾ ಕೇಳಿದಳು— "ಈ ದಿನ ಬಹಳ ಹೊತ್ತು ಕಾಯಿಸಿದಿರಿ. ಎಲ್ಲಿಗೆ ಹೋಗಿದ್ದಿರಿ? ಇನ್ನು ಮುಂದೆ ನೀವು ಹೊತ್ತು ಮಾಡಿಕೊಂಡೇ ಬರುವುದಾದರೆ, ಊಟ ಮುಗಿಸಿಕೊಂಡೇ ಹೋಗಿಬಿಡಿ."

ದಾನನಾಥನು ಗಡಿಯಾರವನ್ನು ನೋಡುತ್ತಾ ಹೇಳಿದನು—"ಇನ್ನೂ ಅಷ್ಟೇನೂ ಹೊತ್ತಾಗಿಲ್ಲ, ಒಂಬತ್ತು ಗಂಟೆ ಕೂಡ ಹೊಡೆದಿಲ್ಲ. ಹಾಗೆಯೇ ಅಮೃತರಾಯನ ಮನೆಗೆ ಹೋಗಿದ್ದೆ. ಅವನೊಬ್ಬ ವಿಚಿತ್ರ ವ್ಯಕ್ತಿ. ಅವನು ಆಡುವುದೆಲ್ಲಾ ಅಸಂಬದ್ಧ ! ತನ್ನಲ್ಲಿ ಇದ್ದ ಹಣವನ್ನೆಲ್ಲಾ ಮನ ಬಂದಂತೆ ಖರ್ಚು ಮಾಡಿ ಬಿಟ್ಟನು. ಈಗ ಚಂದಾ ಮೂಲಕ ನಿಧಿ ಕೂಡಿಸುವ ಯೋಚನೆ ಮಾಡುತ್ತಿದ್ದಾನೆ. ಈಗ ಇತರ ನಾಯಕರಂತೆ ಇವನ ಜೀವನವೂ ಚಂದಾ ಹಣವನ್ನೇ ಅವಲಂಬಿಸಿರುವಂತೆ ತೋರುತ್ತದೆ."

ಪ್ರೇಮಾ ಇದಕ್ಕೆ ಏನೊಂದೂ ಉತ್ತರ ಕೊಡಲಿಲ್ಲ. ಅವನು ಹೇಳಿ

ದ್ದಕ್ಕೆ ಸುಮ್ಮನೆ 'ಹೂಂ', 'ಹೌದು' ಎನ್ನುತ್ತಿದ್ದಳು. ಅವನ ಮಾತನ್ನು ವಿರೋಧಿಸುವ ಸಾಹಸವಾಗಲಿಲ್ಲ ಅವಳಿಗೆ. "ಒಳ್ಳೆಯದು, ಹೋಗಿ ಊಟವನ್ನಾದರೂ ಮಾಡಿರಿ. ಕೆಲಸದವಳು ಎಷ್ಟೋ ಹೊತ್ತಿನಿಂದ ಗೊಣಗುಟ್ಟುತ್ತಿದ್ದಾಳೆ. ಇಲ್ಲಿ ಬಹಳ ಹೊತ್ತಾಗುತ್ತೆ. ಯಾರಾದರೂ ತನ್ನ ಮನೆ ಬೀಗ ಮುರಿದರೆ ತನ್ನ ಗತಿಯೇನು—ಎನ್ನುತ್ತಾಳೆ ಅವಳು." ಎಂದು ಔಪಚಾರಿಕವಾಗಿ ಪ್ರೇಮಾ ನುಡಿದಳು.

ದಾನನಾಥನಿಗೆ ಈಗ ಪ್ರೇಮಾಳ ಉತ್ತರವನ್ನು ಕೇಳಬೇಕೆಂಬ ಉತ್ಸಾಹ ಹೆಚ್ಚಾಗಿತ್ತೇ ಹೊರತು ಊಟಕ್ಕೆ ಹೋಗಲು ಆತುರವೇನೂ ಇರಲಿಲ್ಲ. ಬಹಳ ದಿನಗಳ ನಂತರ ಇಂದು ಅವನಿಗೆ ಪ್ರೇಮಾಳನ್ನು ಪರೀಕ್ಷಿಸುವ ಸದವಕಾಶ ದೊರಕಿತ್ತು. ನಿಲುವಂಗಿಯ ಗುಂಡಿಯನ್ನು ಬಿಚ್ಚುವ ನಟನೆ ಮಾಡುತ್ತಾ ಹೇಳಿದನು— "ನನಗೇನಾದರೂ ಚಂದಾ ಎತ್ತಿ ಜೀವಿಸುವ ಸಂದರ್ಭ ಒದಗಿದ್ದರೆ ಯಾವುದಾದರೂ ನದಿಯಲ್ಲಿ ಮುಳುಗಿ ಪ್ರಾಣ ಬಿಡುತ್ತಿದ್ದೆ. ಕಾಲೇಜಿನ ಸಂಬಂಧವಾಗಿ ಒಂದೆರಡು ಸಲ ಶ್ರೀಮಂತರನ್ನು ಚಂದಾ ಕೇಳಿದ ಅನುಭವ ನನಗೆ ಚೆನ್ನಾಗಿದೆ. ಗಂಟೆಗಟ್ಟಲೆ ಅವರನ್ನು ಪುಸಲಾಯಿಸಬೇಕು; ಇಂದ್ರ-ಚಂದ್ರ-ಕುಬೇರ ಎಂದು ಅವರನ್ನು ಹೊಗಳಬೇಕು. ನಾನು ನಿನಗೆ ಸತ್ಯವಾಗಿ ಹೇಳುತ್ತೇನೆ, ಕೇಳು, ನಾಯಿಗಳಿಗಿಂತಲೂ ಕೀಳಾಗಿ ಕಾಣುತ್ತಾರೆ ಅವರು ನಮ್ಮನ್ನು. ನಾನು ಹೇಳುವುದಿಷ್ಟೇ—ಯಾವಾಗ ಸಾಕಷ್ಟು ಹಣ ಕೈಯಲ್ಲಿರುವುದಿಲ್ಲವೋ ಆಗ ಯಾವ ಕೆಲಸವನ್ನಾದರೂ ಆರಂಭಿಸುವುದು ಮೂರ್ಖತನ. ಆದರೆ ಇಲ್ಲಿ ಕೀರ್ತಿಯನ್ನು ಗಳಿಸಬೇಕೆಂಬ ಬಯಕೆ ಅವರನ್ನು ಗೀಡಿಸುತ್ತಿರುತ್ತದೆ. ಸರಿ, ನನಗೂ ಹೆಸರು ಬರಲಿ; ದೇಶ ಮತ್ತು ಧರ್ಮಕ್ಕಾಗಿ ಪ್ರಾಣ ತೆತ್ತವರ ಗುಂಪಿಗೆ ನಾನೂ ಸೇರುವೆನು; ನಾನು ಹೋದೆಡೆಯಲ್ಲೆಲ್ಲಾ ಮೆರವಣಿಗೆಗಳಾಗಬೇಕು; ಪುಷ್ಪವೃಷ್ಟಿಯಾಗಬೇಕು; ಕಾಲೇಜಿನ ಹುಡುಗರೆಲ್ಲರೂ ನಾನು ಕುಳಿತ ರಥವನ್ನು ಎಳೆಯಬೇಕು. ಗೌರವಸ್ಥನಾದ ಮನುಷ್ಯನು ಪರರ ದಾನದ ಹಣವನ್ನು ಸ್ವಸುಖಕ್ಕಾಗಿ ದುಂದು ವೆಚ್ಚ ಮಾಡುವುದನ್ನು ಎಂದಿಗೂ ಸರಿಯೆಂದು ಹೇಳಲಾರನು, ಅವನಿಗೆ ಕೃಷ್ಣನಾಗಬೇಕೆಂಬ ಆಶೆ. ಹತ್ತಿಪ್ಪತ್ತು ಮಂದಿ ಯುವತಿಯರಾದ ವಿಧವೆಯರನ್ನು ಎಲ್ಲೆಲ್ಲಿಂದಲೋ ಕರೆತಂದು ಅವರೊಡನೆ ರಾಸಕ್ರೀಡೆಯಾಡುವುದು. ಒಳಗೊಳಗೇ ನಡೆಯುವುದು

ಯಾರಿಗೆ ಗೊತ್ತಾಗಬೇಕು ?

ದಾನನಾಥನು ಮನಸ್ಸಿನಲ್ಲಿ ಅಮೃತರಾಯನನ್ನು ಇಷ್ಟು ನೀಚನೆಂದು ಎಂದೂ ತಿಳಿದಿರಲಿಲ್ಲ. ಕೇವಲ ಪ್ರೇಮಾಳನ್ನು ರೇಗಿಸುವುದಕ್ಕಾಗಿಯೇ ಅವನು ಈ ರೀತಿ ನಟನೆ ಮಾಡಿದ್ದನು. ಪ್ರೇಮಾಗೆ ಪೇಚಾಟಕ್ಕಿಟ್ಟುಕೊಂಡಿತು. ಅಮೃತರಾಯನ ವಿಷಯದಲ್ಲಿ ದಾನನಾಥನು ಮಾಡಿದ ಆಪಾದನೆಯು ಪ್ರೇಮಾಳಿಗೆ ಅಸಹ್ಯವೆನಿಸಿತು. ಅವನ ವಿಷಯದಲ್ಲಿ ಈಗಲೂ ಅವಳ ಮನಸ್ಸಿನಲ್ಲಿ ಶ್ರದ್ಧೆಯಿತ್ತು. ದಾನನಾಥನ ಆಲೋಚನೆಗಳು ಇಷ್ಟು ಹೇಯವಾದವುಗಳೆಂದು ಅವಳು ಕನಸಿನಲ್ಲಿಯೂ ಎಣಿಸಿರಲಿಲ್ಲ. ತಿರಸ್ಕಾರ ಪೂರ್ಣವಾದ ದೃಷ್ಟಿಯಿಂದ ದಾನನಾಥನನ್ನು ನೋಡುತ್ತಾ ಹೇಳಿದಳು— "ನೀವು ಅಮೃತರಾಯರ ವಿಷಯದಲ್ಲಿ ತುಂಬಾ ಅನ್ಯಾಯ ಮಾಡುತ್ತಿರುವಿರೆಂದು ನನಗೆನಿಸುತ್ತದೆ. ಅವರ ಆತ್ಮವು ಪರಿಶುದ್ಧವಾಗಿದೆಯೆಂಬುದರಲ್ಲಿ ನನಗಾವ ಸಂಶಯವೂ ಇಲ್ಲ. ಅವರು ಈಗ ಏನು ಮಾಡಬೇಕೆಂದಿರುವರೋ, ಅದರಿಂದ ಸಮಾಜಕ್ಕೆ ಉಪಕಾರವಾಗುವುದೋ ಇಲ್ಲವೋ ಅದು ಬೇರೆ ವಿಷಯ; ಆದರೆ ಅವರ ವಿಚಾರವಾಗಿ ಇಂತಹ ಮಾತುಗಳನ್ನಾಡುವುದು ನಿಮ್ಮ ಅಲ್ಪತನವನ್ನು ತೋರಿಸುತ್ತದೆ."

ದಾನನಾಥನು ಅವಾಕ್ಕಾದನು. ಅವನ ಮನಸ್ಸು ಹೇಳಿತು—"ನಾನು ಎಣಿಸಿದ್ದಂತೆಯೇ ಆಯಿತಲ್ಲವೆ ?" ಮೊದಲಿನಿಂದ ನಾನು ಈ ಮಾತನ್ನು ಹೇಳುತ್ತಲೇ ಇದ್ದೆ. ಅಮೃತರಾಯನೊಡನೆ ಪ್ರೇಮಾಗೆ ಯಾವ ವಿಷವಾದ ಸಂಬಂಧವೂ ಇಲ್ಲದಿದ್ದರೆ ಅಥವಾ ಅವಳ ಸ್ಥಾನದಲ್ಲಿ ಬೇರೆ ಯಾವ ಸ್ತ್ರೀಯಾದರೂ ಇದ್ದರೆ, ಅವಳು ಗಂಡನ ಮಾತನ್ನು ಇಂತಹ ಕಠೋರ ಶಬ್ದಗಳಿಂದ ವಿರೋಧಿಸುತ್ತಿದ್ದಳೆ ? ಎಂದೆಂದಿಗೂ ಇಲ್ಲ. ಇವಳ ಕಂಗಳಿಂದ ಕಿಡಿಗಳೇ ಉದುರುತ್ತಿದ್ದುವು. ಮೂಗಿನ ಹೊಳ್ಳೆಗಳು ಬಡಿದುಕೊಳ್ಳುತ್ತಿದ್ದುವು. ಇವಳು ಎಂದೆಂದಿಗೂ ನನ್ನವಳಾಗಲಾರಳು; ನನ್ನ ಮಾತುಗಳು ಇವಳ ಹೃದಯಕ್ಕೆ ಶೂಲದಂತೆ ನಾಟಿಕೊಂಡಿರುವಂತೆ ತೋರುತ್ತದೆ. ಮೃದು ಮಧುರ ಕಥನದಿಂದಲೇ ಅವಳು ನನ್ನನ್ನು ವಿರೋಧಿಸಬಹುದಾಗಿತ್ತು. ಸರಿ, ಇನ್ನೂ ಯಾವ ಯಾವ ರೀತಿಯ ಆಶೆ ಆಕಾಂಕ್ಷೆಗಳು ಉದ್ಭವಿಸುವವೋ ನೋಡೋಣ."

"ನೀನು ಅಮೃತರಾಯನನ್ನು ದೇವತೆಯೆಂದು ತಿಳಿದುಕೊಂಡಿರುವೆ

ಯೆಂಬುದು ನನಗೆ ಗೊತ್ತಿರಲಿಲ್ಲ. ಕಾಲಚಕ್ರದ ಏರಿಳಿತಗಳಿಗೆ ಸಿಕ್ಕಿ ದೇವತೆ ಗಳೂ ದಾರಿ ತಪ್ಪಿದ ನಿದರ್ಶಗಳು ಎಷ್ಟೋ ಇವೆ." ದಾನನಾಥನು ಅಸೂಯೆ ಯಿಂದ ಈ ಮಾತುಗಳನ್ನಾಡಿದನು.

ಪ್ರೇಮಾ ನಮ್ರತೆಯಿಂದ ಹೇಳಿದಳು— "ನಾನು ಅವರನ್ನು ದೇವತೆ ಯೆಂತಲೂ ತಿಳಿದಿಲ್ಲ ಅಥವಾ ಪಶುವೆಂತಲೂ ತಿಳಿಯುವುದಿಲ್ಲ. ಅವರಿಗೆ ಕಾಮವಾಸನೆಯೇನಾದರೂ ಇದ್ದಿದ್ದರೆ ಅವರು ವಿವಾಹ ಮಾಡಿಕೊಳ್ಳುತ್ತಿರ ಲಿಲ್ಲವೆ ?"

ದಾನನಾಥ:— "ಹಾಗಾದರೆ ಜನನಾಯಕನಾಗುತ್ತಿದ್ದನೆ ? ನಮ್ಮಂಥ ವರ ಶ್ರೇಣಿಗೆ ಸೇರುತ್ತಿರಲಿಲ್ಲವೆ ? ಹಾಗೆ ಮಾಡದಿದ್ದರೆ ಜನತೆಯ ಮೇಲೆ ತನ್ನ ತ್ಯಾಗದ ಮುದ್ರೆಯನ್ನೊತ್ತಲು ಅವನಿಗೆ ಸಾಧ್ಯವಾಗುತ್ತಿತ್ತೆ ?"

ಪ್ರೇಮಾ:— "ನನ್ನ ಮೇಲೆ ಕೃಪೆ ಮಾಡಿ ಈ ಮಾತನ್ನು ಇಲ್ಲಿಗೇ ನಿಲ್ಲಿಸಿ. ಇಂತಹ ಮಾತುಗಳನ್ನು ಬೇರೆಯವರೊಡನೆ ಆಡಿರಿ. ನಾನು ಮಾತ್ರ ಕೇಳಲಾರೆ. ತಪ್ಪು ಮಾಡುವುದು ಮಾನವ ಸ್ವಭಾವವೆಂಬುದನ್ನು ನಾನು ಒಪ್ಪುತ್ತೇನೆ. ಒಂದು ವೇಳೆ ಅಮೃತರಾಯರೂ ಭವಿಷ್ಯದಲ್ಲಿ ತಮ್ಮ ಉನ್ನ ತಾದರ್ಶದಿಂದ ಜಾರಿದರೂ ಜಾರಬಹುದು; ದುರ್ಮಾರ್ಗದಲ್ಲಿ ನಡೆಯಬಹುದು; ಆದರೆ ಅವರು ಕೇವಲ ಈ ಒಂದೇ ಉದ್ದೇಶದಿಂದಲೇ ಈ ಎಲ್ಲಾ ಕೆಲಸ ಗಳನ್ನೂ ಮಾಡುತ್ತಿದ್ದಾರೆ ಎಂದು ಹೇಳುವುದು ನಿಮ್ಮಂಥವರಿಗೆ ಯೋಗ್ಯವಲ್ಲ. ಇನ್ನು ಚಂದಾ ವಿಷಯ. ತನ್ನ ಸರ್ವಸ್ವವನ್ನೂ ತ್ಯಾಗ ಮಾಡಲು ಸಿದ್ಧನಾಗಿ ರುವ ಮನುಷ್ಯನಿಗೆ ಚಂದಾ ಎತ್ತುವುದು ಕಷ್ಟಕರವಾದ ಕೆಲಸವಲ್ಲ. ಜನರು ಅಂತಹವನಿಗೆ ಸಂತೋಷದಿಂದ ದ್ರವ್ಯ ಸಹಾಯ ಮಾಡುತ್ತಾರೆ. ಅಂತಹವನಲ್ಲಿ ಎಲ್ಲರೂ ನಂಬಿಕೆಯಿಡುತ್ತಾರೆ. ಜನರ ಸಂಶಯಕ್ಕೆ ಪಾತ್ರನಾಗಿರುವ ಮನುಷ್ಯ ನಿಗೆ ಧನ ಸಹಾಯ ದೊರೆಯಲಾರದು."

ಇಷ್ಟರಲ್ಲಿಯೇ ವೃದ್ಧ ಮಾತೆಯು ಅವರೆದುರಿಗೆ ಬಂದು ನಿಂತಳು. ದಾನ ನಾಥನು ಕೇಳಿದನು— "ಏನಮ್ಮಾ ?"

ತಾಯಿ:— "ನೀವಿಬ್ಬರೂ ಜಗಳ ಮಾಡುತ್ತಿರುವಿರೇಕೆ ?"

ದಾನನಾಥನು ನಕ್ಕು ಹೇಳಿದನು— "ಇವಳೇ ನನ್ನೊಡನೆ ಕಾದಾಡುತ್ತಿ ದ್ದಾಳೆ ಅಮ್ಮ, ನಾನಂತೂ ಬಾಯನ್ನೇ ಬಿಡುತ್ತಿಲ್ಲ."

ಪ್ರೇಮಾ:— "ಅಮ್ಮ, ನಿಜ ಹೇಳಿರಿ. ಜೋರಾಗಿ ಮಾತನಾಡುತ್ತಿದ್ದವರಾರು—ಇವರೋ ಅಥವಾ ನಾನೋ ?"

ತಾಯಿ:— "ಪ್ರೇಮಾ, ಜೋರಾಗಿ ಮಾತನಾಡುತ್ತಿರುವವಳು ನೀನೆ ಪಾಪ, ಇವನು ಸುಮ್ಮನೆ ಕುಳಿತಿದ್ದಾನೆ."

ಪ್ರೇಮಾ:— ತಾವು ಸರಿಯಾಗೇ ಹೇಳುತ್ತಿದ್ದೀರಿ; ತಮ್ಮ ತಮ್ಮ ಮಕ್ಕಳನ್ನು ಕೆಟ್ಟವರೂ ಅಂತ ಕರೆಯುವವರಾರು ? ನಮ್ಮಮ್ಮ ಇಲ್ಲಿದ್ದಿದ್ದರೆ ನನ್ನನ್ನೇ ವಹಿಸಿ ಮಾತನಾಡುತ್ತಿದ್ದಳು."

ದಾನ:— "ನಿಜ ಹೇಳುವುದೇ ಅಮ್ಮನಲ್ಲಿರುವ ವಿಶೇಷ ಗುಣ. ಈಗ ನೀನು ನಾಚಿಕೆ ಪಡಬೇಕಾಯಿತಲ್ಲವೆ ?"

ತಾಯಿ:— "ಈಗ ನಿನಗೆ ಹಸಿವಾಗಿದೆಯೋ, ಇಲ್ಲವೋ ? ಹೋಗಿ ಊಟ ಮಾಡಿಕೊಂಡು ಬಾ; ಆಮೇಲೆ ಕಚ್ಚಾಡುವಿರಂತೆ. ನನಗೆ ಹಸಿವು ತಡೆಯುವಷ್ಟು ಶಕ್ತಿಯಿಲ್ಲವಪ್ಪ. ಈ ರೋಗ ಮುಪ್ಪಿನಲ್ಲೂ ನನ್ನನ್ನು ಬಿಡಲೊಲ್ಲದು."

ದಾನ:— "ಇದುವರೆಗೂ ನೀನೇಕೆ ಊಟ ಮಾಡಲಿಲ್ಲ ? ನಾನಾದರೊ ದಿನಕ್ಕೆ ಹತ್ತು ಸಾರಿ ತಿನ್ನುತ್ತೇನೆ. ನನ್ನನ್ನೇಕೆ ಕಾಯ್ದುಕೊಂಡಿರುವೆ ? ಈ ದಿನ ಅಮೃತರಾಯನೂ ಕೂಡ ನಾನು ಬಹಳ ಊದಿಕೊಂಡಿರುವೆನೆಂದು ಹೇಳಿದನು. ಒಂದೆರಡು ದಿನಗಳು ಉಪವಾಸ ಮಾಡಿದರೂ ಚಿಂತೆಯಿಲ್ಲ."

ತಾಯಿ:— "ನೀನು ದಪ್ಪನಾಗಿರುವೆಯೆಂದು ಅಮೃತರಾಯ ಹೇಳಿದನೆ? ವಿನೋದಕ್ಕೆ ಹಾಗೆಂದಿರಬಹುದು."

ದಾನ:— "ಇಲ್ಲಮ್ಮ, ನಿಜವಾಗಿಯೂ ಅವನು ಹಾಗೆ ಹೇಳಿದ."

ತಾಯಿ:— "ಅವನು ಹೇಳದೆ ಏನು ಮಾಡಿಯಾನು ? ಅರ್ಧ ದೇಹವೂ ಇಲ್ಲದಂತಾಗಿದೆ. ಕೊಬ್ಬಿದ ಕುದುರೆಯಂತೆ ತಿರುಗುತ್ತಿದ್ದಾನೆ. ಇತರರನ್ನೂ ಹಾಗೆಯೇ ತಿಳಿಯುವುದರಲ್ಲಿ ಆಶ್ಚರ್ಯವೇನು ? ಎಂದಾದರೂ ಒಂದು ದಿನ ಅವನನ್ನು ಮನೆಗೆ ಕರೆದು ಔತಣ ಏಕೆ ಮಾಡಿಸಬಾರದು ? ಬಹಳ ದಿನಗಳಿಂದ ನೀನು ಅವನನ್ನು ಸತ್ಕರಿಸುವುದನ್ನೇ ಬಿಟ್ಟುಬಿಟ್ಟಿದ್ದೀಯೆ. ಅದಕ್ಕೇ ಅವನಿಗೆ ಕೋಪ ಬಂದಿದೆ. ಕೇಳಿದೆಯಾ ಪ್ರೇಮಾ, ಅಮೃತರಾಯನ ಮಾತನ್ನು ?"

ದಾನನಾಥನು ಗುಂಪು ಗುಂಪಾಗಿ ಬೆಳೆಯದಿದ್ದರೂ, ಮೊದಲಿಗಿಂತ ಎಷ್ಟೋ ಚಿಗುರಿಕೊಂಡಿದ್ದನು. ಮುಖದ ಮೇಲೆ ಒಂದು ವಿಧವಾಗಿ ಕಾಂತಿ ವಿರಾಜಿಸುತ್ತಿತ್ತು. ದೇಹವೂ ಕೂಡ ಸ್ವಲ್ಪ ಮಟ್ಟಿಗೆ ಕಂಗೊಳಿಸುತ್ತಿತ್ತು ಮತ್ತು ಪುಷ್ಟವಾಗಿತ್ತು. ಆದರೆ ಇದು ಇತರರು ಹೇಳುವ ವಿಷಯವಾಗಿರಲಿಲ್ಲ. ತಾಯಂದಿರಿಗೆ ತಮ್ಮ ಮಕ್ಕಳು ಯಾವಾಗಲೂ ಕೃಶಗಾತ್ರರಾಗಿಯೇ ಕಾಣು ತ್ತಾರೆ. ಆದರೆ ದಾನನಾಥನು ಈ ವಿಷಯದಲ್ಲಿ ಸ್ವಲ್ಪ ಸಂಶಯ ಪ್ರವೃತ್ತಿಯವ ನಾಗಿದ್ದನು· ಅವನಿಗೆ ಯಾವಾಗಲೂ ಯಾವುದಾದರೊಂದು ರೋಗದ ಸೋಂಕು ಇದ್ದೇ ಇರುತ್ತಿತ್ತು. ಕೆಲವು ವೇಳೆ ತಿಂದ ಅನ್ನ ಜೀರ್ಣವಾಗುತ್ತಿರ ಲಿಲ್ಲ; ಹುಳಿ ತೇಗು ಬರುತ್ತಿದ್ದುವು. ಕೆಲವು ವೇಳೆ ತಲೆ ತಿರುಗುತ್ತಿತ್ತು. ಕೆಲವು ವೇಳೆ ಅಂಗಾಲು ಉರಿಯುತ್ತಿತ್ತು. ಈ ರೀತಿ ತಾನು ರೋಗಿಯೆಂಬ ಅಳುಕು ದಾನನಾಥನಿಗೆ ಹೆಚ್ಚುತ್ತಿತ್ತು. ಎಲ್ಲಿಯಾದರೂ ಹೊರಗೆ ಹೋದರೆ ಅವನಿಗೆ ಯಾವ ರೋಗವೂ ಇರುತ್ತಿರಲಿಲ್ಲ. ಏತಕ್ಕೆಂದರೆ ಅವನನ್ನು ಅಲ್ಲಿ ಉಪಚರಿ ಸುವವರು ಯಾರೂ ಇರುತ್ತಿರಲಿಲ್ಲ. ಮೊದಲು ತಾಯಿಗೆ ಮಾತ್ರ ತನ್ನ ದೇಹ ಸ್ಥಿತಿಯನ್ನು ತಿಳಿಸುತ್ತಿದ್ದನು. ಈಗ ಕೇಳುವವರು ಮತ್ತೊಬ್ಬರು ಸಿಕ್ಕಿದ್ದರು. ಈ ಸ್ಥಿತಿಯಲ್ಲಿ ಅವನನ್ನು ಯಾರಾದರೂ ದಪ್ಪನಾಗಿದ್ದಾನೆಂದು ಹೇಳಿದರೆ, ಅವನ ವಿಷಯದಲ್ಲಿ ತುಂಬಾ ಅನ್ಯಾಯ ಮಾಡಿದಂತಾಗುತ್ತಿತ್ತು. ಪ್ರೇಮಾ ಕೂಡ ಅವನನ್ನು ಆಗಾಗ ಉಪಚರಿಸಬೇಕಾಗುತ್ತಿತ್ತು. ಈ ಸನ್ನಿವೇಶದಲ್ಲಿ ದಾನನಾಥನನ್ನು ಸಂತೋಷಪಡಿಸಲು ಅವಳಿಗೆ ಒಂದು ಸುಸಮಯ ದೊರಕಿತು. ಹೇಳಿದಳು— "ಅವರ ಕಣ್ಣಿನಲ್ಲಿ ಶನೀಶ್ವರ ಕುಳಿತುಕೊಂಡಿದ್ದಾನೆ. ನನ್ನ ಅಕ್ಕನೂ ಕೂಡ ಸ್ವಲ್ಪ ದಪ್ಪನಾಗಿದ್ದಳು. ನಿತ್ಯವೂ ಅವಳನ್ನು ಹಾಸ್ಯಮಾಡು ತ್ತಿದ್ದರು. ತುಪ್ಪ ತಿನ್ನಬೇಡ, ಹಾಲು ಕುಡಿಯಬೇಡವೆಂದು ಪಥ್ಯ ಮಾಡಿಸಿ ಮಾಡಿಸಿ ಆ ಬಡಪಾಯಿಯನ್ನು ಕೊಂದು ಹಾಕಿದರು. ನಾನಲ್ಲಿದ್ದಿದ್ದರೆ, ಅವ ರನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಳ್ಳುತ್ತಿದ್ದೆ."

ತಾಯಿ:— "ಅವನ ಮೈಕಟ್ಟು ತುಂಬಾ ಚೆನ್ನಾಗಿದೆ."

ದಾನ:— "ಚೆನ್ನಾಗಿರೋದೇನು—ಕಲ್ಲಿನಂತಿದೆ. ಕಫ ತುಂಬಿಕೊಂ ಡಿದೆ. ಒಂದು ತಿಂಗಳು ಕಸರತ್ತು ಮಾಡುವುದನ್ನು ನಿಲ್ಲಿಸಿದರೆ ಸಾಕು, ಏಳೋದು ಕೂರೋದಕ್ಕೂ ಕಷ್ಟವಾಗುವುದು,"

ಪ್ರೇಮಾ:— "ದಪ್ಪನೆಯ ಮನುಷ್ಯ ನನಗೆ ಸರಿ ಬೀಳೋದಿಲ್ಲ. ಶರೀರ ದೃಢಕಾಯವಾಗಿದ್ದು ಮೈ ತುಂಬಿಕೊಂಡಿರಬೇಕು. ಗುಡ್ಡದಂತೆ ದಪ್ಪನಾಗಿ ರುವ ದೇಹದಿಂದೇನು ಪ್ರಯೋಜನ?"

ದಾಸ:— "ನನ್ನೊಡನೆ ಆಟವಾಡ್ತಿದ್ದರೆ ಅಳಿಸಿ ಅಳಿಸಿ ಸುಸ್ತು ಮಾಡು ತ್ತಿದ್ದೆ."

ಊಟ ಮಾಡಿದ ನಂತರ ದಾನನಾಥನು ಬಹಳ ಹೊತ್ತು ಪ್ರೇಮಾಳ ಮಾತುಗಳ ವಿಚಾರವಾಗಿಯೇ ಆಲೋಚಿಸುತ್ತಿದ್ದನು. ಪ್ರೇಮಾ ಕೊನೆಯಲ್ಲಿ ಘಾಯದ ಮೇಲೆ ಬಟ್ಟೆ ಸುತ್ತಿದಂತೆ ಸವಿ ನುಡಿಗಳಿಂದ ಅವನನ್ನು ಸ್ವಲ್ಪ ಶಾಂತ ಗೊಳಿಸಿದ್ದಳು. ಪ್ರೇಮಾ ಈಗ ಹೇಳಿದುದಕ್ಕಿಂತಲೂ ಮತ್ತೇನೂ ಹೆಚ್ಚಿಗೆ ಹೇಳಲಾರಳೆಂದು ಈಗ ಅವನಿಗೆ ಮನವರಿಕೆಯಾಯಿತು. ಅವನು ಕಮಲಾ ಪ್ರಸಾದನ ಬಾಯಿಂದ ಕೇಳಿದ ಮಾತುಗಳನ್ನೇ ಅವಳೂ ಹೇಳಿದ್ದಳು. ತಾನು ಮಾತ್ರ ಆ ಮಾತುಗಳ ಸತ್ಯಾಸತ್ಯತೆಯನ್ನು ಪರೀಕ್ಷಿಸಲಿಲ್ಲ. ಆದರೆ ಕಮಲಾ ಪ್ರಸಾದನ ಮಾತುಗಳಲ್ಲಿ ಅವನಿಗೆ ನಂಬಿಕೆ ಹುಟ್ಟುವ ಬಗೆ ಹೇಗೆ? ಇದು ಅವನ ದೌರ್ಬಲ್ಯ. ಚಾಡಿಯ ಮಾತು ಅಸೂಯೆಗೆ ಮೂಲ ಕಾರಣವಾಗು ತ್ತದೆ. ಕಿವಿಗಳು ವಿರೋಧಿಯ ವಿಷಯವಾದ ಸಮಸ್ತ ಸಮಾಚಾರಗಳನ್ನೂ ಕೇಳಲು ಸಿದ್ಧವಾಗಿರುತ್ತವೆ. ಪ್ರಾಯಶಃ ಕಮಲಾಪ್ರಸಾದನು ಈ ವಿಷಯಗಳ ನ್ನೆಲ್ಲಾ ತನ್ನ ಮನಸ್ಸಿನಲ್ಲಿಯೇ ಕಲ್ಪಿಸಿಕೊಂಡಿರಬಹುದೆಂದು ದಾನನಾಥನಿಗೆ ಈಗ ಮನವರಿಕೆಯಾಯಿತು. ವಿಷಯ ಹೀಗೆಯೇ ಇರಬಹುದು. ಅಮೃತ ರಾಯನು ಎಂದೂ ಇಷ್ಟು ತುಚ್ಛನಾಗಿಯೂ ಇರಲಿಲ್ಲ, ದುರ್ಬಲ ಹೃದಯನೂ ಆಗಿರಲಿಲ್ಲ. ಪ್ರೇಮಾಳ ಸಾಹಸ ಪೂರ್ಣವಾದ ವಿರೋಧವು ಈ ಉನ್ಮಾದ ವನ್ನು ಮತ್ತಷ್ಟು ಹೆಚ್ಚಿಸಿತು. ಪ್ರೇಮಾ ಊಟ ಮುಗಿಸಿಕೊಂಡು ಬಂದೊಡ ನೆಯೇ ಅವಳ ಕ್ಷಮೆ ಬೇಡುತ್ತಾ ಹೇಳಿದನು— "ಪ್ರಿಯೆ, ನೀನು ನನ್ನ ಮೇಲೆ ಕೋಪಿಸಿಕೊಂಡಿರುವೆಯಾ?"

ಪ್ರೇಮಾ ಮಂದಹಾಸದಿಂದ ನುಡಿದಳು— "ನಾನೆ? ಸರಿ, ನೀವೇನು ತಪ್ಪು ಮಾಡಿದ್ದಕ್ಕೆ ನಾನು ಕೋಪಿಸಿಕೊಳ್ಳಬೇಕು? ಹೌದು, ನಾನೇ ಅಶ್ಲೀಲವಾದ ಮಾತುಗಳನ್ನಾಡಿದ್ದೆ. ನಾನೇ ನಿಮ್ಮನ್ನು ಕ್ಷಮೆ ಬೇಡಲು ಬಂದಿ ದ್ದೇನೆ."

ಆದರೆ ದಾನನಾಥನು ವಿನೋದಪ್ರಿಯನಾಗಿದ್ದಂತೆಯೇ ಹಠವಾದಿ ಸ್ವಭಾವದನೂ ಆಗಿದ್ದನು. ಯಾವ ಮನುಷ್ಯನ ಕಾರಣದಿಂದ ತನ್ನ ಪತ್ನಿಯಿಂದಲೇ ತನಗಿಷ್ಟು ಘೋರ ಅಪಮಾನವಾಗಿತ್ತೋ ಅದನ್ನು ಇಷ್ಟು ಸುಲಭವಾಗಿ ಮರೆಯುವವನಾಗಿರಲಿಲ್ಲ. ಊರಿಗೆ ಊರೇ ಅಮೃತರಾಯನನ್ನು ಹೊಗಳುತ್ತಿತ್ತು. ಆದರೆ ದಾನನಾಥನಿಗೆ ಅತ್ತಕಡೆ ಲಕ್ಷ್ಯವಿರಲಿಲ್ಲ. ಇಲ್ಲವಾದಲ್ಲಿ ತಾನೂ ಕೂಡ ಅಮೃತರಾಯನ ಪ್ರಶಂಸಕರ ಗುಂಪಿಗೆ ಸೇರದೆ ಇರುತ್ತಿರಲಿಲ್ಲ. ತಾನೂ ಚಪ್ಪಾಳೆ ತಟ್ಟಿ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಿದ್ದನು. ಆದರೆ ಅವನ ಪತ್ನಿಯು ಅವನ ವಿಷಯವಾಗಿ ಇಷ್ಟು ಶ್ರದ್ಧೆ ವಹಿಸುವುದೆ? ತನ್ನ ಶ್ರದ್ಧಾಭಕ್ತಿಗಳನ್ನು ಹೃದಯದಲ್ಲಿಯಾದರೂ ಅಡಗಿಸಿಕೊಳ್ಳದೆ ಬಹಿರಂಗವಾಗಿ ತೋರಿಸುವ ಪ್ರಯತ್ನ ಮಾಡಿದರೆ ಅದರ ಪರಿಣಾಮವು ಗಂಡನೆನಿಸಿಕೊಂಡವನ ಮೇಲೆ ಯಾವ ರೀತಿ ಆಗಬಹುದು? ಇದು ಅವನಿಗೆ ನುಂಗಲಾರದ ತುತ್ತಾಗಿತ್ತು. ಅಮೃತರಾಯನಲ್ಲಿ ಸಭೆ ಸಮಾಜಗಳಲ್ಲಿ ನಿರರ್ಗಳವಾಗಿ ಮಾತನಾಡುವಷ್ಟು ವಾಚಾಳತ್ವವಿದ್ದರೆ, ದಾನನಾಥನೂ ಕೂಡ ಆ ಶಕ್ತಿಯನ್ನು ಸಂಪಾದಿಸಲು ಶಕ್ತಿಮೀರಿ ಪ್ರಯತ್ನಿಸುವನು; ಹಾಗೆಯೇ ಅಮೃತರಾಯ ಹಾಗೂ ಪ್ರೇಮಾ ಇವರಿಬ್ಬರ ಗರ್ವಭಂಗ ಮಾಡುವನು. "ಯಾವ ಗುಣಗಳಿಗಾಗಿ ನೀನು ಅಮೃತರಾಯನಲ್ಲಿ ಪೂಜ್ಯ ಭಾವನೆಯನ್ನಿಟ್ಟಿರುವೆಯೋ ಆ ಗುಣಗಳು ನನ್ನಲ್ಲೂ ಇವೆ." ಎಂಬುದನ್ನು ಅವನು ಪ್ರೇಮಾಳಿಗೆ ಕಾರ್ಯರೂಪದಲ್ಲಿ ತೋರಿಸುವನು.

ಈ ರೀತಿ ಬಾಲ್ಯದಿಂದಲೂ ಏಕದೇಹಿಗಳಂತಿದ್ದ ಇಂತಹ ಇಬ್ಬರು ಗೆಳೆಯರಲ್ಲಿ ವಿದ್ವೇಷವು ಅಂಕುರಿಸಿತು. ಜನತೆಯ ದೃಷ್ಟಿಯಲ್ಲಿ ಮೈತ್ರಿಯ ಆದರ್ಶ ಸ್ವರೂಪರಾಗಿದ್ದ ಆ ಗೆಳೆಯರಿಬ್ಬರೂ ಕಾಲಚಕ್ರದ ಏರಿಳಿತಗಳಿಗೆ ಸಿಕ್ಕಿ ಪರಸ್ಪರ ವಿರೋಧಿಗಳ ರೂಪದಲ್ಲಿ ಕಾಣಿಸಿಕೊಂಡರು. ಒಂದು ವಾರ ಪೂರ್ಣ ದಾನನಾಥನು ಕಾಲೇಜಿಗೆ ಹೋಗಲಿಲ್ಲ. ಅವನಿಗೆ ಆಹಾರ ಪಾನೀಯಗಳ ಕಡೆಗಾಗಲೀ, ಸ್ನಾನದ ಕಡೆಗಾಗಲೀ ಸ್ಮರಣೆ ಇರಲಿಲ್ಲ. ದಿನವೆಲ್ಲಾ ತನ್ನ ದಿವಾಣಖಾನೆಯ ಕದ ಮುಚ್ಚಿಕೊಂಡು ಹಿಂದೂ ಧರ್ಮದ ರಕ್ಷಣೆಯ ವಿಷಯವಾಗಿ ಜನತೆಯ ಮನವನ್ನು ಕಲಕಿ ಕಾರ್ಯ ತತ್ಪರತೆಯನ್ನುಂಟು ಮಾಡುವ ಒಂದು ಭಾಷಣವನ್ನು ಸಿದ್ಧಗೊಳಿಸುತ್ತಿದ್ದನು. ತಾನು ಒಬ್ಬನೇ ಇದ್ದಾಗ ಕನ್ನಡಿಯ

ಎದುರು ನಿಂತುಕೊಂಡು ಸಂಪೂರ್ಣ ಭಾಷಣ ಮಾಡಿ ಮಾಡಿ ಅಭ್ಯಾಸಮಾಡಿ ಕೊಂಡನು. ಭಾಷಣ ಮಾಡುತ್ತಿರುವಾಗ ತನ್ನ ನಿರರ್ಗಳ ವಾಣಿಯನ್ನು ನೋಡಿ ಅವನಿಗೇ ಆಶ್ಚರ್ಯವಾಗುತ್ತಿತ್ತು. ಏಳನೆಯ ದಿನ ಪಟ್ಟಣದಲ್ಲೆಲ್ಲಾ ಸೂಚನಾಪತ್ರಗಳು ಹಂಚಲ್ಪಟ್ಟವು— " 'ಸನಾತನ ಧರ್ಮಕ್ಕೆ ಧಕ್ಕೆ' ಎಂಬ ವಿಷಯವಾಗಿ ಮಹಾಶಯ ದಾನನಾಥರು ಪುರಸಭಾ ಭವನದಲ್ಲಿ ಭಾಷಣ ಮಾಡುವರು. ಲಾಲಾ ಬದರೀಪ್ರಸಾದರು ಅಂದಿನ ಅಧ್ಯಕ್ಷತೆಯನ್ನು ವಹಿಸಲು ದಯೆ ಇಟ್ಟು ಒಪ್ಪಿರುವರು."

ಪ್ರೇಮಾ ಕೇಳಿದಳು— "ಏನು ಈ ದಿನ ನಿಮ್ಮ ಭಾಷಣವಿದೆಯೇ ? ಈ ಮೊದಲು ನೀವೆಂದೂ ಭಾಷಣ ಮಾಡಿರಲಿಲ್ಲ."

ದಾನನಾಥನು ನಕ್ಕು ಹೇಳಿದನು— "ಹೌದು, ಇಂದು ನನ್ನ ಸತ್ವ ಪರೀಕ್ಷೆ. ನನ್ನ ಭಾಷಣವು ಅಷ್ಟು ಕೀಳಾಗಲಾರದೆಂಬ ಭರವಸೆಯೇನೋ ಇದೆ."

ಪ್ರೇಮಾ:— "ಈ ವಿಷಯ ನನಗೆ ನೀವು ತಿಳಿಸಲೇ ಇಲ್ಲ. ನಾನು ಬರುವೆನು. ನಿಮ್ಮ ಭಾಷಣ ಹೇಗಿರುತ್ತೆಂಬುದನ್ನು ನಾನೂ ನೋಡುವೆನು."

ದಾನನಾಥ:— "ಇಲ್ಲ ಪ್ರಿಯೆ, ನೀನಲ್ಲಿರುವುದಾದರೆ ಪ್ರಾಯಶಃ ನಾನು ಸ್ಫೂರ್ತಿಯಿಂದ ಮಾತನಾಡಲು ಆಗದಿರಬಹುದು. ನಿನ್ನನ್ನು ನೋಡುತ್ತಾ ನೋಡುತ್ತಾ ನನಗೊಂದು ವಿಧವಾದ ಸಂಕೋಚವಾಗಬಹುದು. ನಾನೇ ವ್ಯವಹಾರದಲ್ಲಿ ಉಪಯೋಗಿಸಲಾಗದ ಎಷ್ಟೋ ವಿಷಯಗಳನ್ನು ನಾನು ಭಾಷಣದಲ್ಲಿ ಬರೆದಿದ್ದೇನೆ. ಭಾಷಣವನ್ನು ಕೇಳಿ ಜನರು ನನ್ನಂತಹ ಸನಾತನ ಧರ್ಮಿಯು ಇಂದಿನವರೆಗೆ ಹುಟ್ಟಲೇ ಇಲ್ಲವೆಂದು ತಿಳಿಯುವರು. ನಿನ್ನೆದುರಿಗೆ ಡಾಂಭಿಕತನವನ್ನು ತೋರಿಸಿಕೊಳ್ಳಲು ನನಗೆ ನಾಚಿಕೆಯಾಗುವುದು. ಒಂದೆರಡು ಸಲ ಮಾತನಾಡಿ, ಸಭಾ ಕಂಪನವು ತೊಲಗಿ, ಜನರ ಮೆಚ್ಚುಗೆಗೆ ಪಾತ್ರನಾದಮೇಲೆ ನಾನು ನಿನ್ನನ್ನು ಖಂಡಿತ ಜೊತೆ ಕರೆದುಕೊಂಡು ಹೋಗುವೆನು"

ಪ್ರೇಮಾ:— "ಕೊನೆಗೂ ಅಮೃತರಾಯರು ನಿಮ್ಮನ್ನು ತಮ್ಮ ಕಡೆಗೆ ಎಳೆದುಕೊಂಡೇ ಬಿಟ್ಟರು !"

ದಾನ:— "ಅವನಿಗೆ ಇಂದು ಮಧ್ಯಾಹ್ನದ ವರೆಗೂ ಈ ವಿಷಯ ಗೊತ್ತೇ ಇರಲಿಲ್ಲ. ಸಮಾಜ ಸುಧಾರಣೆಯ ಹೆಸರಿನಲ್ಲಿ ಹಿಂದೂ ಸಮಾಜದಲ್ಲಿ ಈಗ

ಪಾಶ್ಚಿಮಾತ್ಯರೂ ಕೂಡ ಅಸಹ್ಯಪಡುವಂತಹ ದೋಷಗಳು ಸೇರಿಕೊಂಡಿರುವು ದನ್ನು ನೋಡಿ ನನಗೇನೋ ಕೆಡಕೆನಿಸುತ್ತದೆ. ಅಸ್ಪೃಶ್ಯತೆಯನ್ನು ತೊಡೆದು ಹಾಕಬೇಕೆಂಬ ಕೂಗು ದೇಶದಾದ್ಯಂತವೂ ಕೇಳಿಬರುತ್ತದೆ. ಹರಿಜನರು ಬಾವಿಯ ಹತ್ತಿರ ಬಂದರೆ ತಡೆಯಬೇಡಿ; ದೇವಾಲಯ ಪ್ರವೇಶ ಮಾಡಲು ಅಡ್ಡಿಪಡಿಸಬೇಡಿ; ಪಾಠಶಾಲೆಗೆ ಹೋಗುವುದನ್ನು ತಪ್ಪಿಸಬೇಡಿ—ಎಂಬ ನುಡಿ ಗಳು ಎಲ್ಲೆಲ್ಲಿಯೂ ಕೇಳಿಬರುತ್ತಿವೆ. ಹರಿಜನೋದ್ಧಾರಕ್ಕೆ ಮುಂಚೆ ಅವರ ಶುಚಿತ್ವ ಮತ್ತು ಆಚಾರ ವಿಚಾರಗಳ ಕಡೆ ಯಾರ ದೃಷ್ಟಿಯೂ ಬಿದ್ದಂತಿಲ್ಲ. ಸರಿ, ಇವರನ್ನು ಆದಷ್ಟು ಬೇಗ ನಿಮ್ಮಲ್ಲಿ ಸೇರಿಸಿಕೊಳ್ಳಿರಿ, ಇಲ್ಲವಾದರೆ ಇವರು ಕ್ರೈಸ್ತ ಅಥವಾ ಮುಸಲ್ಮಾನ ಧರ್ಮಾವಲಂಬಿಗಳಾಗುವರು. ಇಂತಹ ಕುಲ ಹೀನರನ್ನು ತಮ್ಮ ಮತಕ್ಕೆ ಸೇರಿಸಿಕೊಂಡು ಮುಸಲ್ಮಾನರೇ ಆಗಲೀ ಅಥವಾ ಕ್ರಿಶ್ಚಿಯನ್ನರೇ ಆಗಲೀ ಅವರನ್ನೇನು ಹುರಿದು ತಿನ್ನುವರೇ? ಲಕ್ಷಾಂತರ ಚಮ್ಮಾರರು ಮತ್ತು ಸುಡುಗಾಡ ಸಿದ್ಧರು ಮುಸಲ್ಮಾನರಾಗಿ ಹೋಗಿದ್ದಾರೆ; ಮದ್ರಾಸ್ ಪ್ರಾಂತದಲ್ಲಾದರೋ ಅನೇಕ ಊರುಗಳವರೆಲ್ಲರೂ ಕ್ರಿಶ್ಚಿಯನ್ ಮತಾವಲಂಬಿಗಳಾಗಿದ್ದಾರೆ; ಆದರೆ ಅವರ ಆಚಾರ ವ್ಯವಹಾರಗಳೆಲ್ಲವೂ ಮೊದಲಿನಂತೆಯೇ ಇದೆ. ಅವರಲ್ಲಿ ಈಗಲೂ ಭೂತಾರಾಧನೆಯು ರೂಢಿಯ ಲ್ಲಿದೆ. ಅವರು ಈಗ ಹೆಚ್ಚು ಮದ್ಯಪಾನ ಮಾಡದಿದ್ದರೂ ಕೂಡ ಟೀ ಕುಡಿ ಯುವುದರಲ್ಲಿ ನಿಸ್ಸೀಮರಾಗಿದ್ದಾರೆ. ಆಂಗ್ಲರು ಕಿತ್ತೊಗೆದ ಕೋಟು-ಶರಾಯಿ ಗಳನ್ನು ಧರಿಸುತ್ತಾರೆ; ಅವರಲ್ಲಿ ಇನ್ನಾವ ವಿಧವಾದ ವ್ಯತ್ಯಾಸವೂ ಗೋಚರಿ ಸುತ್ತಿಲ್ಲ. ಕ್ರೈಸ್ತ ಮತವು ಅವರಿಂದ ಮತ್ತಷ್ಟು ಅಪಕೀರ್ತಿಗೊಳಗಾಯಿತೇ ಹೊರತು ಪ್ರತಿಷ್ಠೆಯನ್ನು ಪಡೆಯಲಿಲ್ಲ. ಇದೇ ರೀತಿಯಲ್ಲಿ ಇವರನ್ನು ತಮ್ಮ ಮತಕ್ಕೆ ಸೇರಿಸಿಕೊಂಡು ವಿಜಯಭೇರಿಯನ್ನು ಬಾರಿಸಲಾರರು. ಚಮ್ಮಾರ ರೊಡನೆ ನಮಾಜು ಮಾಡುವುದರಿಂದ ಅಥವಾ ಅವರು ಮುಟ್ಟಿದ ನೀರು ಕುಡಿ ಯುವುದರಿಂದ ಯಾವ ರಾಷ್ಟ್ರವಾದರೂ ಬಲಶಾಲಿಯಾಗುವ ಹಾಗಿದ್ದರೆ, ಇಂದು ಪ್ರಪಂಚದಲ್ಲೆಲ್ಲಾ ಮುಸಲ್ಮಾನರ ಪ್ರಭುತ್ವವೇ ನಡೆಯುತ್ತಿತ್ತು. ಆದರೆ ಇಂದು ಎತ್ತ ದೃಷ್ಟಿ ಹೊರಳಿಸಿದರೂ ಹಿಂದುಗಳಂತೆಯೇ ಅವರೂ ಕೂಡ ತಮ್ಮ ದೌರ್ಭಾಗ್ಯಕ್ಕಾಗಿ ಶೋಕಿಸುತ್ತಿದ್ದಾರೆ.

ವ್ಯಾವಹಾರಿಕ ದೃಷ್ಟಿಯಲ್ಲಿ ಸ್ವತಂತ್ರವಾಗಿರುವ ಮುಸಲ್ಮಾನ ರಾಜ್ಯ

ವೆಂದರೆ ಟರ್ಕಿಯೊಂದೇ. ಟರ್ಕಿಯನ್ನು ವಿಭಜನೆ ಮಾಡುವ ವಿಷಯವಲ್ಲಿ ಯೂರೋಪಿಯನ್ ರಾಷ್ಟ್ರಗಳಲ್ಲಿಯೇ ಭಿನ್ನಾಭಿಪ್ರಾಯವಿದೆ. ನಾನಂತೂ ಅಮೃತರಾಯನಷ್ಟೇ ಉದಾರಿಯಾಗಿದ್ದೇನೆ. ಆದರೆ ಸತ್ತ ಪ್ರಾಣಿಗಳ ಮಾಂಸ ಭಕ್ಷಣೆ ಮಾಡುವ, ಹಗಲು ರಾತ್ರೆ ಎಡಬಿಡದೆ ತೊಗಲಿನ ಕೆಲಸದಲ್ಲಿಯೇ ನಿರತ ನಾಗಿರುವ ಚಮ್ಮಾರನು ನಮ್ಮ ಭಾವಿಯಲ್ಲಿ ನೀರು ತೆಗೆದುಕೊಳ್ಳಲು ಅವಕಾಶ ಕೊಡುವುದಿಲ್ಲ. ಅಮೃತರಾಯನ ಬಾಯಿ ಮುಚ್ಚಿಸುವೆನು."

ಪ್ರೇಮಾ ಮೆಲುದನಿಯಿಂದಲೇ ಹೇಳಿದಳು-— "ಅವರು ಇದುವರೆಗೂ ನಿಮ್ಮನ್ನು ತಮ್ಮ ಸಹಾಯಕರೆಂದೇ ತಿಳಿದಿದ್ದರು. ಈ ನೋಟೀಸನ್ನು ಓದಿ ಚಕಿತರಾಗಿರಬಹುದು."

ದಾನನಾಥನು ಮುಖ ಗಂಟು ಹಾಕಿಕೊಂಡು ಹೇಳಿದನು-— "ನಾನು ಎಂದೂ ಅವನಿಗೆ ಸಹಾಯಕನಾಗಿರಲಿಲ್ಲ. ಸುಧಾರಣೆ, ಸಮಾಜೋದ್ಧಾರ ದಂತಹ ಕೋಟಲೆಗೆ ನಾನೆಂದಿಗೂ ಸಿಕ್ಕಿದವನಲ್ಲ. ನಾನು ಮೊದಲೂ ಹೇಳು ತ್ತಿದ್ದೆ ಮತ್ತು ಈಗಲೂ ಹೇಳುತ್ತಿದ್ದೇನೆ— "ಪ್ರಪಂಚಕ್ಕೆ ತನ್ನ ದಾರಿಯಲ್ಲಿಯೆ ಮುಂದುವರಿಯಲು ಅವಕಾಶ ಕೊಡಿರೆಂದು. ಕಾಲ ಪರಿಪಕ್ವವಾಯಿತೆಂದರೆ ಎಲ್ಲವೂ ತಾನಾಗಿಯೇ ಸರಿಹೋಗುತ್ತೆ. ಪ್ರಪಂಚಕ್ಕೆ ತನ್ನ ಅವಶ್ಯಕತೆಗಳ ಅರಿವು ಸಾಕಷ್ಟಿದೆ. ಒಳ್ಳೆಯದು, ಈಗ ನಾನು ಹೊರಡುತ್ತೇನೆ. ಯಾವು ದಾದರೂ ದೇವತೆಗೆ, ಇವರು ಜಯಶೀಲರಾದರೆ ಸವಾಸೇರು ಮಿಠಾಯಿ ತಂದೊ ಪ್ಪಿಸುವೆನೆಂದು ಹರಕೆ ಮಾಡಿಕೊ."

ಪ್ರೇಮಾ ನಕ್ಕು ಹೇಳಿದಳು— "ಹಾಗೆಯೇ ಮಾಡುವೆನು."

ದಾನ:— "ಇಲ್ಲ, ಈಗಲೇ ನನ್ನೆದುರಿಗೆ ಮಾಡಿಬಿಡು. ನೀನು ದೇವಾಲ ಯದ ವರೆಗೂ ಹೋಗಬೇಕಾಗುವುದು."

ಭಾಷಣವಾಯಿತು. ಬಹಳ ಮಹತ್ವಪೂರ್ಣವಾದ ಭಾಷಣವಾದ್ದರಿಂದ ನಗರದಲ್ಲೆಲ್ಲಾ ಈ ವದಂತಿಯೇ ಹರಡಿತು. ಮೊದಲು ಹತ್ತು ನಿಮಿಷಗಳ ವರೆಗೆ ದಾನನಾಥನು ಸಂಕೋಚಪಡುತ್ತಲೇ ಮಾತನಾಡಿದನು. ಆದರೆ ಕ್ರಮೇಣ ಅವನ ವಾಣಿಯಲ್ಲಿ ಶಕ್ತಿ ಮತ್ತು ನಿರರ್ಗಳತೆ ಸಂಚರಿಸಿತು. ಅವನು ತನ್ನ ಶಬ್ದ-ಸಂಗೀತದಲ್ಲಿಯೇ ಲೀನನಾದನು. ಪೂರ್ಣ ಎರಡು ಗಂಟೆಗಳ ವರೆಗೆ ಸಭೆಯಲ್ಲಿದ್ದವರೆಲ್ಲರು ಚಿತ್ರದ ಬೊಂಬೆಗಳಂತೆ ಕುಳಿತಿದ್ದರು. ಭಾಷಣವು

ಮುಗಿದಾಗ ಜನಗಳಿಗೆ ಜ್ಞಾನೋದಯವಾದಂತೆ ಅನುಭವವಾಗುತ್ತಿತ್ತು. ದಾನನಾಥನು ಅವರಿಗೆ ಅಜ್ಞಾತ ರುಸ್ತುಮನಂತೆ ಕಾಣಿಸಿದನು. ಎಷ್ಟು ಪಾಂಡಿತ್ಯ! ಎಂತಹ ವಿದ್ವತ್ತು! ಎಲ್ಲಾ ಮತಗ್ರಂಥಗಳನ್ನೂ ಶೋಧಿಸಿ, ಭೇದಿಸಿ ಸಾರವನ್ನೆಲ್ಲಾ ಹೀರಿಕೊಂಡಿದ್ದಾನೆ! ದಾನನಾಥನು ವೇದಿಕೆಯಿಂದ ಇಳಿಯುತ್ತಲೇ ಸಾವಿರಾರು ಜನರು ಅವನನ್ನು ನಾಲ್ಕೂ ಕಡೆಯಿಂದ ಮುತ್ತಿ ಕೊಂಡು ತಮ್ಮ ಶ್ರದ್ಧಾ-ಭಕ್ತಿಪೂರ್ವಕವಾದ ಹೂಮಳೆಗರೆದರು. ದಾನನಾಥ ನಿಗೆ ಇಂತಹ ಸ್ವರ್ಗೀಯ ಆನಂದವು ತನ್ನ ಜೀವನದಲ್ಲಿ ಎಂದೂ ಲಭಿಸಿರ ಲಿಲ್ಲ.

ರಾತ್ರಿ ಎಂಟು ಗಂಟೆ ಆಗಿಹೋಗಿತ್ತು. ದಾನನಾಥನು ಪ್ರೇಮಾಳ ಜೊತೆ ಕುಳಿತುಕೊಂಡು ಆತ್ಮಪ್ರಶಂಸೆಯನ್ನಾರಂಭಿಸಿದ್ದನು— "ಪ್ರಿಯೆ, ನಾನು ಹೇಳುತ್ತಿರುವುದು ಸತ್ಯವೆಂದು ತಿಳಿ. ಸಭೆಗೆ ಸುಮಾರು ಹತ್ತು ಸಾವಿರ ಜನ ಬಂದಿದ್ದರು. ಆದರೂ ಯಾರಾದರೂ ಕೆಮ್ಮಿದ ಶಬ್ದವಾದರೂ ಕೇಳಬೇಕೇ! ಎಲ್ಲರೂ ಚಿತ್ರದ ಪ್ರತಿಮೆಗಳೇ ಆಗಿದ್ದರು. ಇವನು ಜಂಭ ಕೊಚ್ಚಿಕೊಳ್ಳುತ್ತಿ ರುವನೆಂದು ನೀನು ತಿಳಿಯಬಹುದು. ಆದರೆ ನಾನಂತೂ ಜನರು ಇಷ್ಟು ತನ್ಮಯರಾಗಿದ್ದುದನ್ನು ಎಂದೂ ನೋಡಿರಲಿಲ್ಲ."

ಅಷ್ಟರಲ್ಲಿಯೇ ಒಂದು ಮೋಟಾರು ಗಾಡಿ ಮನೆಯ ಬಳಿಗೆ ಬಂದು ನಿಂತಿತು; ಮತ್ತು ಅದರೊಳಗಿನಿಂದ ಕೆಳಕ್ಕೆ ಇಳಿದವರಾರು—ಅಮೃತರಾಯ. ಅವನ ಪರಿಚಿತ ಧ್ವನಿಯು ದಾನನಾಥನ ಕಿವಿಗೆ ಕೇಳಿಸಿತು— "ಅಲ್ರಿ ಸ್ವಾಮಿ ಯವರೇ, ಸ್ವಲ್ಪ ಹಾಗೆಯೇ ಹೊರಕ್ಕೆ ಬನ್ನಿರಿ. ಅಥವಾ ಒಳಗೇ ಭದ್ರವಾಗಿ ಕುಳಿತುಬಿಡುವಿರೋ? ಸ್ವಲ್ಪ ಹೊರಗೆ ಬನ್ನಿರಿ. ನಿಮ್ಮ ಬೆನ್ನು ತಟ್ಟಿ, ತಲೆ ನೇವರಿಸಿ, ಏನಾದರೂ ಬಹುಮಾನ ಕೊಡುವೆನು."

ದಾನನಾಥನು ಬೆಚ್ಚಿಬಿದ್ದು ಹೇಳಿದನು— "ಓಹೋ ಅಮೃತರಾಯ! ಈ ದಿನ ಇವನೆಲ್ಲಿಂದ ಇಳಿದುಬಿಟ್ಟ? ಸ್ವಲ್ಪ ಬೀಡಾ—ಗೀಡಾ ಕಳುಹಿಸಿ ಕೊಡು."

ವಿವಾಹವಾದ ನಂತರ ಇಂದು ಅಮೃತರಾಯನು ಮೊದಲನೆಯ ಸಾರಿ ದಾನನಾಥನ ಮನೆಗೆ ಬಂದಿದ್ದಾನೆ. ಮನೆಯ ಮುಂದೆ ದಿಬ್ಬಣ ಬಂದಿರುವು ದನ್ನು ನೋಡಿ ನವವಧುವು ಗಾಬರಿಗೊಳ್ಳುವಂತೆ ಪ್ರೇಮಾ ಬೆದರಿದಳು. ಅವಳ

ಬಾಯಿಂದ ಮಾತೇ ಹೊರಡದಾಯಿತು. ಅಮೃತರಾಯನೆಲ್ಲಿಯಾದರೂ ತನ್ನ ಧ್ವನಿಯನ್ನು ಕೇಳಿ ಬಿಡುವನೋ ಎಂಬುದಾಗಿ ಅವಳಿಗೆ ದಿಗಿಲಾಗುತ್ತಿತ್ತು. ಸನ್ನೆಯಿಂದಲೇ ಸೇವಕಿಯನ್ನು ಕರೆದು, ಅವಳಿಂದ ಎಲೆ ಅಡಿಕೆ ತರಿಸಿಕೊಂಡು ಬೀಡಾ ಕಟ್ಟಲು ಪ್ರಾರಂಭಿಸಿದಳು.

ಅತ್ತ ದಾನನಾಥನು ಹೊರಕ್ಕೆ ಹೋಗುತ್ತಲೇ ಅಮೃತರಾಯನನ್ನು ಕಣ್ಣೆತ್ತಿ ನೋಡುವುದೂ ಅವನಿಂದ ಸಾಧ್ಯವಾಗಲಿಲ್ಲ. ತನ್ನ ಸಂಕೋಚವನ್ನು ಹೋಗಲಾಡಿಸಿಕೊಳ್ಳುವುದಕ್ಕೋಸ್ಕರ ಆಗಾಗ್ಗೆ ಮಂದಹಾಸವನ್ನು ಬೀರುತ್ತಿದ್ದನು.

ಅಮೃತರಾಯನು ಅವನನ್ನು ಆಲಿಂಗಿಸಿಕೊಳ್ಳುತ್ತಾ ಹೇಳಿದನು— "ಅಯ್ಯಾ ಮಿತ್ರ, ಇಂದು ನೀನು ಅತ್ಯದ್ಭುತ ಸಾಹಸವನ್ನೇ ತೋರಿಸಿದೆ. ನನ್ನ ಜೀವಮಾನ ಕಾಲದಲ್ಲೆಂದೂ ಇಂತಹ ಭಾಷಣವನ್ನು ನಾನು ಕೇಳಿರಲಿಲ್ಲ."

ಪ್ರೇಮಾ ಈ ಮಾತನ್ನು ಕೇಳಲಿಲ್ಲವಲ್ಲಾ ಎಂದು ದಾನನಾಥನಿಗೆ ಪಶ್ಚಾತ್ತಾಪವಾಯಿತು. ಲಜ್ಜೆಯಿಂದಲೇ ನುಡಿದನು— "ಅದರಲ್ಲೇನಿತ್ತು ಮಹಾ! ಸುಮ್ಮನೆ ವಿನೋದ, ಅಷ್ಟೆ. ಏನೋ ಈ ತಮಾಷೆಯನ್ನಾದರೂ ಮಾಡಿ ನೋಡೋಣವೆಂದು ತೋಚಿದ್ದನ್ನು ಹೇಳಿದೆ."

ಅಮೃತ:— "ತಮಾಷೆಯಲ್ಲವಯ್ಯಾ ಮೋಡಿಯಾಗಿತ್ತು. ಅಂತೂ ನೀನು ಬೆಂಕಿ ಹಾಕಿ ಬಿಟ್ಟೆ. ಈಗ ನಮ್ಮಂಥವರ ಮಾತಿಗೆ ಬೆಲೆ ಕೊಡುವವರಾರು? ಗೆಳೆಯ, ಈ ಅದ್ಭುತ ಶಕ್ತಿಯು ನಿನಗೆ ಲಭಿಸಿದ ಬಗೆ ಹೇಗೆಂಬುದನ್ನಾದರೂ ನನಗೆ ಮರೆಮಾಜದೆ ತಿಳಿಸು. ನಾನಂತೂ ನಿನ್ನ ಮೇಲಿನ ಕೋಪದಿಂದ ಹಲ್ಲು ಕಡಿಯುತ್ತಿದ್ದೆ. ಅವಕಾಶ ದೊರೆತಿದ್ದರೆ ಆಗಲೇ ನಿನ್ನನ್ನು ಎಚ್ಚರಿಸುತ್ತಿದ್ದೆ."

ದಾನ:— "ನೀನೆಲ್ಲಿ ಕುಳಿತಿದ್ದೆ? ನಾನು ನಿನ್ನನ್ನು ನೋಡಲೇ ಇಲ್ಲ."

ಅಮೃತ:— "ಹಿಂದಿನ ಸಾಲಿನಲ್ಲಿ ಮುಖ ಮುಚ್ಚಿಕೊಂಡು ನಿಂತಿದ್ದೆ. ಹತ್ತಿರ ಬಾ, ಸ್ವಲ್ಪ ನಿನ್ನ ಬೆನ್ನು ತಟ್ಟಿ ನನ್ನ ಆನಂದವನ್ನು ತೋರಿಸಬೇಕೆನಿಸುತ್ತದೆ, ನನಗೆ."

ದಾನ:— "ಇಲ್ಲಪ್ಪ, ನನ್ನನ್ನು ಕ್ಷಮಿಸಿ ಬಿಡು. ನೀನೇನೊ ನನ್ನ

ಬೆನ್ನು ತಟ್ಟಿ ಬಿಡುವೆ. ಆಮೇಲೆ ನಾನು ಪೂರ್ಣ ಒಂದು ತಿಂಗಳು ಬೆನ್ನು ತಿಕ್ಕಿಸಿಕೊಂಡು ಉಪಚಾರ ಮಾಡಿಸಿಕೊಳ್ಳಬೇಕಾಗುತ್ತೆ. ಇನ್ನು ಮುಂದೆ ನಾನೂ ನಾಲ್ಕು ಜನರ ಮುಂದೆ ಚೆನ್ನಾಗಿ ಮಾತನಾಡಬಲ್ಲೆನೇ—ಎಂಬುದನ್ನು ಸ್ಪಷ್ಟವಾಗಿ ತಿಳಿಸು."

ಅಮೃತ—"ಈಗ ನೀನು ನನ್ನ ಕೈಯಿಂದ ಏಟು ತಿನ್ನುವುದು ಖಂಡಿತ. ನೀನು ನಿನ್ನ ಪ್ರಥಮ ಭಾಷಣದಲ್ಲಿಯೇ ಜನತೆಯ ಮನವನ್ನು ಸೂರೆಗೊಂಡಿರುವೆ. ಇನ್ನು ಮುಂದೆ ನಿನ್ನನ್ನು ಮಾತನಾಡಿಸುವುದೂ ಕಷ್ಟವಾಗಬಹುದು. ಈಗ ನಾವಿಬ್ಬರೂ ಪ್ರತಿಗಾಮಿ ಮಾರ್ಗವನ್ನನುಸರಿಸುತ್ತಿರುವುದನ್ನು ನೋಡಿ ನನಗೆ ಬಹಳ ದುಃಖವಾಗುತ್ತಿದೆ. ಗೆಳೆಯ, ಇಲ್ಲಿ ಅನ್ಯರಾರೂ ಇಲ್ಲ. ಸಮಾಜ ಸುಧಾರಣಾ ಕಾರ್ಯಗಳಿಂದ ಹಿಂದೂ ಧರ್ಮಕ್ಕೆ ಧಕ್ಕೆ ತಗಲುವುದೆಂಬುದನ್ನು ನೀನು ಮನಃಪೂರ್ವಕವಾಗಿಯೂ ಒಪ್ಪುವೆಯೋ ?"

ದಾನನಾಥನು ಸ್ವಲ್ಪ ಚೇತರಿಸಿಕೊಳ್ಳುತ್ತಾ ಹೇಳಿದನು— "ಹೌದು ನೋಡು. ಇತ್ತ ನಾನು ಧಾರ್ಮಿಕ ಸಾಹಿತ್ಯವನ್ನು ಅಭ್ಯಾಸ ಮಾಡಿದಾಗ ಈ ನಿರ್ಣಯವನ್ನು ಮಾಡಬೇಕಾಯಿತು. ಆದರೆ ಇದು ನನ್ನ ಭ್ರಮೆ ಎಂದೂ ಹೇಳಬಹುದು."

ಅಮೃತ:— "ಹಾಗಾದರೆ ನಿನಗೂ ನನಗೂ ತುಂಬಾ ಜಗಳವೇ ಆಗುವುದೆನ್ನು; ಆದರೆ ಒಂದು ವಿಷಯಕ್ಕೆ ನಾವಿಬ್ಬರೂ ಲಕ್ಷ್ಯ ಕೊಡಬೇಕು. ನಮ್ಮ ಸಾಮಾಜಿಕ ಸಿದ್ಧಾಂತಗಳಲ್ಲಿ ಎಷ್ಟೇ ಭೇದವಿರಲಿ, ವೇದಿಕೆಯ ಮೇಲೆ ನಿಂತು ಸಾರ್ವಜನಿಕ ಭಾಷಣ ಮಾಡುವಾಗ ಒಬ್ಬರು ಮತ್ತೊಬ್ಬರನ್ನು ಕಿತ್ತು ತಿನ್ನಲಿ, ಆದರೆ ನಮ್ಮ ಮೈತ್ರಿಗೆ ಯಾವ ರೀತಿಯಿಂದಲೂ ಚ್ಯುತಿ ಬರಕೂಡದು. ನಮ್ಮ ವಾಸ್ತವಿಕ ಸಂಬಂಧಕ್ಕೆ ಅದರ ಕಾವೂ ತಗಲಕೂಡದು. ನನ್ನ ಸ್ವಂತ ವಿಷಯದಲ್ಲಿಯೇನೋ ನನಗೆ ಪೂರ್ಣ ನಂಬಿಕೆ ಇದೆ; ಆದರೆ ನಿನ್ನ ವಿಷಯದಲ್ಲಿ ನನಗೆ ಭರವಸೆ ಇಲ್ಲ. ನನ್ನನ್ನು ಕ್ಷಮಿಸು, ನನಗೇಕೋ ಭಯವಾಗುತ್ತಿದೆ. ನೀನೆಲ್ಲಿಯಾದರೂ—

ದಾನನಾಥನು ಮಧ್ಯೆ ಬಾಯಿ ಹಾಕಿ ಹೇಳಿದನು— "ನನ್ನನ್ನೂ ನೀನು ನಂಬಬಹುದೆಂಬ ಭರವಸೆಯನ್ನು ಕೊಡುತ್ತೇನೆ. ನಮ್ಮ ಧಾರ್ಮಿಕ ವಿಚಾರ

ಗಳ ಪರಿಣಾಮವು ನಮ್ಮ ಗೆಳೆತನದ ಮೇಲೂ ಉಂಟಾಗುವುದೆಂಬುದಕ್ಕೆ ಯಾವ ಕಾರಣವೂ ಇಲ್ಲ."

ಅಮೃತರಾಯನು ಸಂದಿಗ್ಧ ಭಾವದಿಂದಲೇ ಹೇಳಿದನು— "ನೀನೇನೋ ಹೇಳುವೆ. ಆದರೆ ನನಗೆ ನಂಬಿಕೆಯಾಗಲೊಲ್ಲದು."

ದಾನ:— "ತಕ್ಕ ಆಧಾರ ದೊರೆತಲ್ಲಿ ಒಪ್ಪುವೆಯಷ್ಟೆ?"

ಅಮೃತ:— "ಸರಿ, ಮನೆಯಲ್ಲಿ ಎಲ್ಲರೂ ಕುಶಲವಷ್ಟೇ? ತಾಯಿಯವರಿಗೆ ನನ್ನ ನಮಸ್ಕಾರಗಳನ್ನು ತಿಳಿಸು."

ದಾನ:— "ಅಯ್ಯೋ! ಇದೇನು? ಕುಳಿತುಕೊ. ಇಷ್ಟು ಆತುರವೇಕೆ? ಊಟ ಮಾಡಿಕೊಂಡು ಹೋದರಾಯಿತು."

ಅಮೃತ:— "ಅನೇಕ ಕಡೆ ಹೋಗಬೇಕಾಗಿದೆ. ಅನಾಥಾಲಯಕ್ಕಾಗಿ ನಿಧಿಯನ್ನು ಕೂಡಿಸಲು ಜನರನ್ನು ಚಂದಾಕ್ಕಾಗಿ ಪ್ರಾರ್ಥಿಸಿಕೊಳ್ಳಬೇಕಾಗಿದೆ. ಹತ್ತಾರು ಜನರನ್ನು ಭೇಟಿ ಮಾಡಿ ಚರ್ಚಿಸಿದರೆ ಅನುಕೂಲವಾಗಬಹುದು. ಅಯ್ಯಾ ಮಹಾಶಯ, ನನ್ನನ್ನು ವಿರೋಧಿಸಬೇಕಾಗಿದ್ದಲ್ಲಿ ಅನಾಥಾಲಯ ಪ್ರಾರಂಭವಾದ ಮೇಲೆ ಹಾಗೆ ಮಾಡಬಹುದಾಗಿತ್ತು. ನೀನು ನನ್ನ ಸುಗಮವಾದ ರಸ್ತೆಯಲ್ಲಿ ಮುಳ್ಳನ್ನೆರಚಿದೆ."

ಪ್ರೇಮಾ ಇನ್ನೂ ಬೀಡಾ ಕಟ್ಟುತ್ತಿದ್ದಳು; ಅಷ್ಟರಲ್ಲಿಯೇ ಅಮೃತರಾಯನು ಹೊರಟೇ ಹೋದನು. ದಾನನಾಥನು ಬಂದು ಹೇಳಿದನು— "ಬಹಳ ಚೆನ್ನಾಗಿದೆ, ಇದುವರೆಗೂ ನೀನು ಬೀಡಾಗಳನ್ನು ಸಿದ್ಧಪಡಿಸಲೇ ಇಲ್ಲ. ಅವನು ಹೊರಟೇ ಹೋದನು. ನನ್ನ ಭಾಷಣವನ್ನು ಆವನು ತುಂಬಾ ಮೆಚ್ಚಿದನು."

ಪ್ರೇಮಾ:— "ಆವರೂ ಭಾಷಣ ಕೇಳಲು ಬಂದಿದ್ದರೆ?"

ದಾನ:— "ಹೌದು, ಹಿಂದೆ ನಿಂತುಕೊಂಡಿದ್ದನು. ಮುಂದೇನಾದರೂ ನಿಂತಿದ್ದರೆ ಜನರು ಅವನನ್ನು ಛೀಮಾರಿ ಮಾಡದೆ ಬಿಡುತ್ತಿರಲಿಲ್ಲ. ಅನಾಥಾಲಯಕ್ಕಾಗಿ ಚಂದಾ ವಸೂಲ್ಮಾಡಲು ಜನತೆಯಲ್ಲಿ ಮನವಿ ಮಾಡಿಕೊಳ್ಳಬೇಕೆಂದಿದ್ದಾನೆ. ನೀನೇ ನೋಡುತ್ತಿರು, ಅವನಿಗೆ ಒಂದು ಕಾಸೂ ಸಿಕ್ಕಲಾರದು. ಪರಿಸ್ಥಿತಿಯೇ ಸಂಪೂರ್ಣವಾಗಿ ಬದಲಾಯಿಸಿದೆ. ಅವನು ಅನ್ಯ ನಗರಗಳಲ್ಲಿ ಚಂದಾ ವಸೂಲ್ಮಾಡಿದರೂ ಮಾಡಬಹುದು. ಆದರೆ ಇಲ್ಲಿ ಮಾತ್ರ ಆವನಿಗೆ

ಒಂದು ಬಿಡಿ ಕಾಸೂ ಸಿಕ್ಕಲಾರದು."

ಪ್ರೇಮಾ:— "ನೀವು ಇದನ್ನು ಯಾವ ಆಧಾರದ ಮೇಲೆ ಹೇಳುತ್ತೀರಿ? ಸನಾತನಿಗಳೂ ಪಂಡಿತರೂ ಸುಧಾರಣಾ ಕಾರ್ಯಗಳನ್ನು ವಿರೋಧಿಸಬಹುದು; ಆದರೆ ವಿದ್ಯಾವಂತರು ಹಾಗೆಂದಿಗೂ ಮಾಡಲಾರರು."

ದಾಸ:— "ಅವನಿಗೆ ಐದು ಸಾವಿರ ರೂಪಾಯಿ ಕೂಡ ಸಿಕ್ಕಲಾರದೆಂದು ನಾನು ಈಗಲೇ ಬರೆದುಕೊಡುತ್ತೇನೆ."

ಪ್ರೇಮಾ:— "ಸರಿ, ಅವರಿಗೆ ಒಂದು ಕಾಸೂ ಸಿಕ್ಕದೇ ಇರಬಹುದು. ಇದಕ್ಕೇಕೆ ಜಗಳ ? ಎಲ್ಲಿ, ರೂಪಾಯಿ ಕೊಡಿರಿ, ನಾಳೆ ಪೂಜೆ ಮಾಡಿ ಬರುತ್ತೇನೆ. ಅತ್ತಿಗೆ ಮತ್ತು ಪೂರ್ಣಾರನ್ನೂ ಕರೆಯುವೆನು. ಹತ್ತಿಪ್ಪತ್ತು ಬ್ರಾಹ್ಮಣರಿಗೂ ಭೋಜನ ಮಾಡಿಸೋಣ."

ದಾನ:— "ಇಲ್ಲಿ ನಿಷ್ಠಾವಂತರಾದ ದೈವಭಕ್ತರಾರೂ ಇಲ್ಲ. ನನ್ನಲ್ಲಿರುವುದು ಐದಾಣೆ ಚಿಲ್ಲರೆ ಮಾತ್ರ. ಕಾಲು ಪಾವು ಲಾಡು ತರಿಸು. ಅದೇ ಬೇಕಾದಷ್ಟು ಆಗುವುದಲ್ಲವೆ?"

ಪ್ರೇಮಾ:— "ನೀವು ಇಂತಹ ವಚನಭ್ರಷ್ಟರೆಂಬುದು ನನಗೆ ಗೊತ್ತಿರಲಿಲ್ಲ. ಎಮ್ಮೆಗೂ ಇರುವೆಗೂ ಸಮ ಮಾಡುವಿರಲ್ಲ! ನಿನ್ನೆ ಸಾಯಂಕಾಲ ಒಂದೂಕಾಲು ಸೇರು ಅಂತ ಹೇಳಿದ್ದವರು ಈಗ ಕಾಲು ಪಾವಿಗೆ ಇಳಿದಿದ್ದೀರಿ. ನಾನು ಒಂದೂಕಾಲು ಮಣ ಲಾಡು ಹಂಚುವುದಾಗಿ ಹರಕೆ ಹೊತ್ತಿದ್ದೇನೆ."

ದಾನ:— "ಇದು ಸತ್ಯವೆ ? ಹಾಗಾದರೆ ನೀನು ನನ್ನನ್ನು ಕೊಂದೇ ಬಿಟ್ಟೆ. ನೀನು ನನ್ನನ್ನು ಪಾಪರ್ ಮಾಡುವುದು ಖಂಡಿತ."

ಕಮಲಾಪ್ರಸಾದನು ಮನೆಯೊಳಕ್ಕೆ ಕಾಲಿಟ್ಟನು. ಪ್ರೇಮಾ ಬುರುಕೆಯನ್ನು ಮತ್ತಷ್ಟು ಮುಂದಕ್ಕೆ ಎಳೆದುಕೊಂಡಳು ಮತ್ತು ತಲೆ ಬಗ್ಗಿಸಿಕೊಂಡು ನಿಂತುಕೊಂಡಳು. ಕಮಲಾಪ್ರಸಾದನು ಪ್ರೇಮಾಳ ಕಡೆ ನೋಡಲೇ ಇಲ್ಲ. ದಾಸನಾಥನಿಗೆ ಹೇಳಿದನು— "ಮಹಾಶಯ ! ನೀನಂತೂ ಈ ದಿನ ಶತ್ರುಗಳ ಬಾಯಿ ಮುಚ್ಚಿಸಿದೆ. ಎಲ್ಲರೂ ಗಾಬರಿಗೊಂಡಿದ್ದಾರೆ. ಅದರ ಸ್ವಾರಸ್ಯ ಈಗೇನು ಗೊತ್ತಾದೀತು, ಚಂದಾ ವಸೂಲಿಗೆ ಹೋದಾಗ ಬರಿಕೈಯಲ್ಲಿ ಬಂದಾಗಲೇ ಗೊತ್ತಾಗಬೇಕು."

ದಾನ:— "ದಾನಿಗಳ ಸಂಖ್ಯೆಯೂ ಕಡಿಮೆ ಇಲ್ಲ. ಅಧಿಕವಲ್ಲದಿದ್ದರೂ

ಇಪ್ಪತ್ತು–ಇಪ್ಪತ್ತೈದು ಸಾವಿರ ರೂಪಾಯಿಗಳಾದರೂ ದೊರೆತೇ ದೊರೆಯು ವುವು."

ಕಮಲಾ:— "ಯಾರು ಕೊಡುವವರು ? ಐದು ಸಾವಿರಕ್ಕಿಂತ ಹೆಚ್ಚಿಗೆ ವಸೂಲಾದರೆ, ನಾನು ಈ ಮೀಸೆ ಬೋಳಿಸಿ ಬಿಡುತ್ತೇನೆ. ಕಾಶಿಯಲ್ಲಿ ಯಾರಿಗೂ ಮುಖ ತೋರಿಸುವುದಿಲ್ಲ. ಇನ್ನೂ ಒಂದು ವಾರ ಬಾಕಿ ಇದೆ. ಪ್ರತಿಯೊಬ್ಬರ ಮನೆಗೂ ಹೋಗುವೆನು. ತಂದೆಯವರಂತೂ ಈ ಕಾರ್ಯಕ್ಕೆ ಕಲ್ಲು ಹಾಕಲು ಸಿದ್ಧರಾಗಿ ಕುಳಿತಿದ್ದಾರೆ. ಅವರು ಮೊದಲಿನಿಂದಲೇ ಈ ಧರ್ಮಭ್ರಷ್ಟರ ಗರ್ವವನ್ನು ಮುರಿಯಬೇಕೆಂದು ಯೋಚಿಸುತ್ತಲೇ ಇದ್ದರು. ಆದರೆ ಉತ್ತಮ ಭಾಷಣಕಾರರಾರೂ ಅವರ ದೃಷ್ಟಿಗೆ ಬಿದ್ದಿರಲಿಲ್ಲ. ಈಗ ನಿನ್ನ ಸಹಾಯದಿಂದ ನಾವು ಊರಿಗೆ ಊರನ್ನೇ ನಡುಗಿಸಬಲ್ಲೆವು. ಈಗಾಗಲೇ ಒಂದು ಸಾವಿರ ಲಾಠಿಧಾರಿಗಳನ್ನು ಸಿದ್ಧಗೊಳಿಸಲಾಗಿದೆ. ಯಾವ ದಿನ ಅಮೃತರಾಯನು ಸಾರ್ವಜನಿಕ ಸಭೆಯಲ್ಲಿ ಜನರನ್ನು ದ್ರವ್ಯ ಸಹಾಯಕ್ಕಾಗಿ ಪ್ರಾರ್ಥಿಸಿಕೊಳ್ಳುವನೋ, ಅಂದು ಊರಿನ ಎಲ್ಲಾ ಕಡೆಯ ರಸ್ತೆಗಳಿಂದಲೂ ಜನರು ಸಭೆಗೆ ಬಾರದಂತೆ ತಡೆಗಟ್ಟಲಾಗುವುದು. ದೊಡ್ಡ ಮನುಷ್ಯರನ್ನೆಲ್ಲಾ ನಾವು ಸರಿಪಡಿಸುವೆವು; ಉಳಿದವರನ್ನೆಲ್ಲಾ ನಮ್ಮ ಲಾಠಿಧಾರಿಗಳು ನೋಡಿ ಕೊಳ್ಳುವರು. ಹೆಚ್ಚು ವಿದ್ಯಾವಂತರಾದವರೇ ಅವನಿಗೆ ಸಹಾಯಕರಾಗಿದ್ದಾರೆ. ಆದರೂ ವಿದ್ಯಾವಂತರು ಜಗಳಕ್ಕೆ ದೂರದಿಂದಲೇ ಸಲಾಮು ಹೊಡೆಯುತ್ತಾರೆ. ಸರಿ, ನಾಳೆ ಇನ್ನೊಂದು ಭಾಷಣವನ್ನು ಸಿದ್ಧಪಡಿಸಿಡು. ಇಂದಿನ ಭಾಷಣ ಕ್ಕಿಂತಲೂ ಜೋರಾಗಿರಬೇಕು. ಅತ್ತ ಅವರ ಸಭೆ ನಡೆಯುತ್ತಿದ್ದಾಗ ಇತ್ತ ನಮ್ಮ ಸಭೆಯೂ ನಡೆಯುವ ಏರ್ಪಾಡು ಮಾಡಬೇಕು. ಆಮೇಲೆ ನೋಡು— ಎಂತಹ ವಿಚಿತ್ರ ಘಟನೆಯಾಗುವುದೆಂಬುದನ್ನು."

ದಾನನಾಥನು ಮೆರುಗುಕೊಟ್ಟು ಮಾತನಾಡಿದನು—"ಅಧಿಕಾರಿಗಳೆಲ್ಲಾ ಅವನ ಪಕ್ಷಪಾತಿಗಳೆಂಬುದು ನಿನಗೆ ತಿಳಿಯದು. ಜಿಲ್ಲಾಧಿಕಾರಿಯಂತೂ ಭೂಮಿ ಯನ್ನು ಕೊಡುವುದಾಗಿ ವಾಗ್ದಾನ ಮಾಡಿದ್ದಾರೆ."

ಕಮಲಾಪ್ರಸಾದನು ಜಿಲ್ಲಾಧಿಕಾರಿಯ ಹೆಸರನ್ನು ಕೇಳಿ ಸ್ವಲ್ಪ ಗಾಬರಿ ಗೊಂಡನು. ಸ್ವಲ್ಪ ಯೋಚಿಸಿ ಹೇಳಿದನು— "ಅಧಿಕಾರಿಗಳು ಅವನ ಬೆನ್ನು ಕಟ್ಟಿದರೂ ಚಿಂತೆಯಿಲ್ಲ; ಆದರೆ ಅವರು ಹಣದ ಮಾತೆತ್ತಿದರೆ ಹರದಾರಿ ಓಡಿ

ಹೋಗುವರು. ಅವರು ಕೊಡುವುದಿರಲಿ; ಅಮೃತರಾಯನನ್ನೇ ಚೆನ್ನಾಗಿ ಸುಲಿದು ಬಿಡುವರು. ಹೌದು, ಜಿಲ್ಲಾ ಕಲೆಕ್ಟರವರ ವ್ಯವಹಾರವೇನೋ ಸ್ವಲ್ಪ ವಿಲಕ್ಷಣವಾಗಿದೆ. ಆದರೆ ಹೆದರಬೇಕಾದ ವಿಷಯವೇನೂ ಇಲ್ಲ. ನಾನು ನಮ್ಮ ತಂದೆಯವರಿಗೆ ಹೇಳುತ್ತೇನೆ— "ನೀವು ಪಟ್ಟಣದ ಹತ್ತಿಪ್ಪತ್ತು ಜನ ಶ್ರೀಮಂತರನ್ನು ಕರೆದುಕೊಂಡುಹೋಗಿ ಕಲೆಕ್ಟರರ ಭೇಟಿಮಾಡಿ, ಮತ್ತು ಅವರಿಗೆ ಈ ವಿಷಯಕ್ಕೆ ಪ್ರವೇಶ ಮಾಡುವುದರಿಂದ ಊರಿನಲ್ಲಿ ದಂಗೆಯಾಗುವುದು ಖಂಡಿತವೆಂಬುದನ್ನು ಚೆನ್ನಾಗಿ ತಿಳಿಯಪಡಿಸಿ."

ಹೀಗೆ ಹೇಳುತ್ತಿದ್ದಂತೆಯೇ ಕಮಲಾಪ್ರಸಾದನು ತಕ್ಷಣವೇ ಪ್ರೇಮಾಳನ್ನು ಕೇಳಿದನು— "ನೀನು ಯಾರ ಕಡೆಗಿದ್ದೀಯೆ, ಪ್ರೇಮಾ ?"

ಪ್ರೇಮಾ ಈ ಮಾತುಗಳನ್ನು ಕೇಳಿ ಮೊದಲಿನಿಂದಲೇ ಚಿಂತಿಸುತ್ತಾ ಕುಳಿತಿದ್ದಳು. ಕಮಲಾಪ್ರಸಾದನ ಈ ಪ್ರಶ್ನೆಯು ಅವಳ ಕೋಪವನ್ನು ಕೆರಳಿಸಿತು; ಆದರೆ ಅವಳು ಏನು ತಾನೆ ಹೇಳಬಲ್ಲಳು ? ಬಿಗುಮಾನದಿಂದಲೇ ಹೇಳಿದಳು— "ನಾನು ಈ ಜಗಳಗಳಿಗೆ ಸಿಕ್ಕಿಕೊಳ್ಳಲಾರೆ. ನೀವು ಉಂಟು ಅವರು ಉಂಟು. ನಾನು ಎರಡು ಕಡೆಯ ತಮಾಷೆಯನ್ನೂ ನೋಡುವೆನು. ಹೇಳು, ಅಮ್ಮ ಆರೋಗ್ಯವಷ್ಟೆ ? ಅತ್ತಿಗೆ ಈಗಲೂ ಕೋಪಿಸಿಕೊಂಡಿರುವಳೆ? ಕೆಲವು ದಿನಗಳ ಮುಂಚೆ ತಾನು ಶೀಘ್ರವಾಗಿಯೇ ತೌರುಮನೆಗೆ ಹೊರಟು ಹೋಗುವುದಾಗಿ ನನಗೆ ಒಂದು ಪತ್ರ ಬರೆದಿದ್ದಳು."

ಕಮಲಾ:— "ಅದೃಷ್ಟಹೀನರಿಗೆ ನರಕದಲ್ಲಿಯೂ ಸ್ಥಳ ಸಿಕ್ಕಲಾರದು. ಒಂದು ಡಜನ್ ಪತ್ರ ಬರೆದಿದ್ದಾಳೆ; ಆದರೆ ತೌರುಮನೆಯವರು ಅವಳ ಒಂದು ಮಾತಿಗೂ ಬೆಲೆ ಕೊಡುವುದಿಲ್ಲ. ಅವಳ ಇಷ್ಟವೇನಿದೆಯೆಂಬುದೇ ಗೊತ್ತಾಗುವುದಿಲ್ಲ. ಹಗಲು ರಾತ್ರಿಯೆಲ್ಲಾ ಉರಿದುರಿದು ಬೀಳುತ್ತಾಳೆ. ಪ್ರಾಯಶಃ ಪರಮಾತ್ಮನು ಅವಳನ್ನು ಕರುಬುವುದಕ್ಕಾಗಿಯೇ ಸೃಷ್ಟಿಸಿದ್ದಾನೇನೊ. ನಾನೇ ಒಂದು ದಿನ ಅವಳನ್ನು ತೌರುಮನೆಗೆ ಕಳುಹಿಸಿ ಬರುತ್ತೇನೆ. ನಾನು ಅವಳ ಕೈಗೆ ಹಣದ ಚೀಲ ಕೊಟ್ಟುಬಿಟ್ಟು ಅವಳ ಇಚ್ಛಾನುಸಾರವಾಗಿ ಖರ್ಚು ಮಾಡಲು ಅವಕಾಶ ಕೊಟ್ಟಲ್ಲದೆ ಅವಳಿಗೆ ಸಂತೋಷವಾಗಲಾರದು. ಇಲ್ಲಿ ಯಾರಲ್ಲಿಯೂ ಅವಳಿಗೆ ನಂಬಿಕೆಯೇ ಇಲ್ಲ."

ಕಮಲಾಪ್ರಸಾದನು ಹೊರಟು ಹೋದನು. ದಾನನಾಥನೂ ಕೂಡ

ಅವನ ಜೊತೆಯಲ್ಲಿಯೇ ಹೊರಕ್ಕೆ ಹೋದನು. ಇಬ್ಬರೂ ಮಾತನಾಡುತ್ತಾ ಬಹಳ ದೂರ ಹೊರಟು ಹೋದರು.

ಇದ್ದಕ್ಕಿದ್ದಂತೆಯೇ ಕಮಲಾಪ್ರಸಾದನು ನಿಂತು ಹೇಳಿದನು— "ಈಗಾಗಲೇ ಒಂಬತ್ತೂವರೆ ಗಂಟೆಯಾಗಿದೆ. ನಡೆ, ಸಿನೇಮಾ ನೋಡಿಕೊಂಡು ಬರೋಣ."

ದಾನ:— "ಇಷ್ಟೊತ್ತಿನಲ್ಲಿ! ಕನಿಷ್ಠ ಪಕ್ಷ ರಾತ್ರಿ ಒಂದು ಗಂಟೆಯ ವರೆಗೆ ಆಗಬಹುದು. ನನ್ನಿಂದಾಗದು, ನೀನು ಹೋಗು. ನಾನು ಮನೆಗೆ ಹೋಗುತ್ತೇನೆ."

ಕಮಲಾಪ್ರಸಾದನು ದಾನನಾಥನ ಕೈಹಿಡಿದುಕೊಂಡು ತನ್ನ ಕಡೆಗೆ ಎಳೆದುಕೊಳ್ಳುತ್ತಾ ಹೇಳಿದನು— "ಇದೇನು ಬಿಡಯ್ಯಾ! ಅಲ್ಲಿಯೇ ಹೊಟೇಲಿನಲ್ಲಿಯೇ ಊಟ ಮಾಡೋಣ. ನಿನ್ನನ್ನು ಮ್ಯಾನೇಜರಿಗೆ ಭೇಟಿ ಮಾಡಿಸುತ್ತೇನೆ. ಬಹಳ ಸ್ನೇಹಪರನಾದ ವ್ಯಕ್ತಿ. ಅವನ ಮನೆಯಲ್ಲಿಯೇ ಊಟ ಮಾಡೋಣ."

ದಾನ:— "ಇಲ್ಲ, ಇದು ನನ್ನಿಂದಾಗದು. ನನ್ನನ್ನು ಕ್ಷಮಿಸು. ಪಾಪ, ಮನೆಯಲ್ಲಿ ಹೆಂಗಸರು ನನ್ನ ದಾರಿ ಕಾಯುತ್ತ ಕುಳಿತುಕೊಳ್ಳುವರು."

ಕಮಲಾ:— "ಸರಿ, ಒಂದು ದಿನ ಹನ್ನೆರಡು ಗಂಟೆಯ ವರೆಗೆ ಊಟವಿಲ್ಲದೆ ಕುಳಿತುಕೊಂಡರೆ ಯಾರೂ ಸಾಯುವುದಿಲ್ಲ. ಹೆಂಗಸರನ್ನು ತಲೆಯ ಮೇಲೆ ಕುಳ್ಳಿರಿಸಿಕೊಳ್ಳುವುದು ಚೆನ್ನಾಗಿರುವುದಿಲ್ಲ."

ದಾನನಾಥನು ಎರಡು ಮೂರು ಸಲ ತಡೆದನು; ಆದರೆ ಕಮಲಾಪ್ರಸಾದನು ಬಿಡಲಿಲ್ಲ. ಇಬ್ಬರೂ ಮ್ಯಾನೇಜರ ಮನೆಯಲ್ಲಿಯೇ ಊಟಮಾಡಿದರು. ನಂತರ ಸಿನೆಮಾ ಮಂದಿರಕ್ಕೆ ಹೋಗಿ ಕುಳಿತರು. ಆದರೆ ದಾನನಾಥನಿಗೆ ಸ್ವಲ್ಪವೂ ಸಂತೋಷವಾಗುತ್ತಿರಲಿಲ್ಲ. ಅವನ ಮನಸ್ಸೆಲ್ಲಾ ಮನೆಯ ಕಡೆಗೇ ಇತ್ತು. "ಪ್ರೇಮಾ ಕುಳಿತಿರಬಹುದು. ಅವಳು ತನ್ನ ಮನಸ್ಸಿನಲ್ಲಿ ಏನಂದುಕೊಳ್ಳುತ್ತಿರಬಹುದು ? ಒಂದು ವೇಳೆ ಗಾಬರಿಗೊಂಡಿರಬಹುದು. ಎಂತಹ ಪೇಚಿಗೆ ಸಿಕ್ಕಿದೆ ?"

ಕಮಲಾಪ್ರಸಾದನು ಮಧ್ಯೆ ಮಧ್ಯೆ ಹೇಳುತ್ತಿದ್ದ— "ಅಗೋ ನೋಡು, ಚಾಪ್ಲಿನ್ ಬಂದನು. ಭೇಷ್ ! ಭೇಷ್ ! ಏನು ಹೇಳಬೇಕು ಆ ಧಾಂಡಿಗ

ನಿಗೆ! ಅಯ್ಯೋ ಮಿತ್ರ, ನೀನು ಯಾವ ಕಡೆ ನೋಡುತ್ತಿರುವೆ? ಸ್ವಲ್ಪ ಈ ಹೆಂಗಸನ್ನು ನೋಡು. ಇವಳಿಗೇನಾದರೂ ನನ್ನಂತಹ ಗಂಡ ಸಿಕ್ಕಿದ್ದರೆ ಖಂಡಿತ ನೀರು ಹೊರಿಸುತ್ತಿದ್ದಳು. ಆದರೂ ಚಿಂತೆಯಿಲ್ಲ. ನಾನು ಅವಳ ಹತ್ತಿರವೇ ಆಳಾಗಿ ಇದ್ದು ಬಿಡಲೇ! ಅಲ್ಲಾ, ಪ್ರಪಂಚದಲ್ಲಿ ಎಂಥೆಂಥ ಅಪ್ಸರೆಯರು ಇರುತ್ತಾರೆ! ನಮ್ಮದೂ ಒಂದು ಗೂಬೆ ದೇಶವಿದೆ, ನೀನಂತೂ ನಿದ್ದೆ ಹೊಡಿತಿದ್ದೀಯೆ!"

ಬಹಳ ಕಷ್ಟದಿಂದ ವಿರಾಮ ಕಾಲದವರೆಗೂ ದಾನನಾಥನು ಕುಳಿತಿದ್ದನು. ಕಮಲಾಪ್ರಸಾದನು ಬೀಡಾ, ಸಿಗರೇಟು ತರಲು ಹೋದನು. ದಾನನಾಥನು ಇನ್ನೊಂದು ಬಾಗಿಲಿನಿಂದ ಹೊರಟು ಮನೆ ದಾರಿ ಹಿಡಿದನು.

ಪ್ರೇಮಾ ಹೇಳಿದಳು— "ಬಹಳ ಬೇಗ ಬಂದಿರಿ; ಇನ್ನೂ ಹನ್ನೊಂದು ಗಂಟೆ ಕೂಡ ಹೊಡೆದಿಲ್ಲ!"

ದಾನ:— "ಪ್ರಿಯೆ, ಏನು ಹೇಳಲಿ? ನಿಮ್ಮಣ್ಣ ಎಳೆದುಕೊಂಡು ಹೋಗಿಬಿಟ್ಟನು."

ಪ್ರೇಮಾ ಕೆರಳಿ ಹೇಳಿದಳು— "ಸುಳ್ಳು ಹೇಳಬೇಡಿರಿ. ಅಣ್ಣ ಏಕೆ ನಿಮ್ಮನ್ನು ಎಳೆದುಕೊಂಡು ಹೋದಾನು. ಹಾಗೆಯೇ ಸಿನೇಮಾ ನೋಡಿ ಬರೋಣವೆಂತ ಅವನು ಹೇಳಿರಬಹುದು. ನೀವು ಆಗುವುದಿಲ್ಲವೆಂತ ಒಂದು ಸಾರಿಯೂ ಹೇಳದೆ ಅವನ ಹಿಂದೆ ಸುಮ್ಮನೆ ಹೊರಟುಬಿಟ್ಟಿರಿ ತಾನೆ! ಈ ದಾಸಿ ಕಾದುಕೊಂಡು ಬಿದ್ದಿರುತ್ತಾಳೆ ಎಂದು ತಿಳಿದಿದ್ದಿರಲ್ಲವೆ?"

ದಾನ:— "ಹೌದು, ಅಪರಾಧ ನನ್ನದು. ನಾನು ಹೋಗದೆ ಇದ್ದಿದ್ದರೆ, ಅವನೇನು ನನ್ನನ್ನು ಎತ್ತಿಕೊಂಡು ಹೋಗುತ್ತಿರಲಿಲ್ಲ; ಆದರೆ ನಾನು ಶಿಷ್ಟಾಚಾರಕ್ಕೆ ತಲೆ ಬಾಗಲೇ ಬೇಕಾಯಿತು."

ಪ್ರೇಮಾ:— "ತಾವು ಎಂತಹ ಶೀಲವಂತರು ಅನ್ನುವುದು ನನಗೆ ಗೊತ್ತು. ಅಲ್ಲಿನ ಲಾವಣ್ಯವನ್ನು ನೋಡಲು ಮನಸ್ಸು ಹಾತೊರೆಯಿತು ಎಂದೇಕೆ ಹೇಳಬಾರದು?"

ದಾನ:— "ಇಷ್ಟ ಬಂದಂತೆ ಹೇಳಿಬಿಡು; ಆದರೆ ನೀನು ನನ್ನ ವಿಷಯದಲ್ಲಿ ಅನ್ಯಾಯ ಮಾಡುತ್ತಿರುವೆ. ನಾನು ಬಂಧನದಿಂದ ಬಿಡಿಸಿಕೊಂಡು ಓಡಿ

ಬಂದಿದ್ದೇನೆ. ಇದು ಸತ್ಯವೆಂದು ತಿಳಿ. ಅಮ್ಮ ಕೂಡ ಊಟ ಬಿಟ್ಟು ಕುಳಿತಿದ್ದಾಳೆಯೆ ?"

ಪ್ರೇಮಾ:— "ಅವರಿಗೇನೋ ಊಟ ಮಾಡಿಸಿ ಮಲಗಿಸಿ ಬಿಟ್ಟೆ. ಈಗ ಅವರು ಎಚ್ಚರವಾಗಿದ್ದರೆ, ದೊಣ್ಣೆಯಿಂದ ನಿಮ್ಮನ್ನು ಮಾತನಾಡಿಸುತ್ತಿದ್ದರು. ಆಗಲಾದರೂ ನೀವು ಈ ತುಂಟತನವನ್ನು ಮರೆಯುತ್ತಿದ್ದಿರೋ ಏನೋ."

ದಾನ:— "ನೀನೂ ಏಕೆ ಊಟ ಮಾಡಬಾರದಾಗಿತ್ತು ?"

ಪ್ರೇಮಾ:— "ನೀವು ಕಲಿಸಿದರೆ ಅದನ್ನೂ ಕಲಿತುಕೊಳ್ಳುವೆ. ಅಣ್ಣನೊಡನೆ ಸ್ನೇಹವಾಯ್ತು ಅಂದರೆ ನನ್ನ ಸ್ಥಿತಿಯೂ ಅತ್ತಿಗೆಯಂತೆಯೇ ಆಗುವುದು."

ದಾನನಾಥನು ಈ ಒತ್ತಾಯಪೂರ್ವಕವಾದ ಪ್ರೇಮದಿಂದ ಗದ್ಗದಿತನಾದನು. ಪ್ರೇಮಾಳನ್ನು ಆಲಂಗಿಸಿಕೊಂಡು ಹೇಳಿದನು— "ಇಲ್ಲ ಪ್ರಿಯೆ, ನಾನು ನಿನಗೆ ಆಣೆ ಇಟ್ಟು ಹೇಳುತ್ತೇನೆ ಕೇಳು. ಇನ್ನು ಮುಂದೆ ನೀನು ದೂರಲು ಅವಕಾಶವನ್ನೇ ಕೊಡುವುದಿಲ್ಲ. ಹೋಗಿ ಊಟ ಮಾಡು."

ಪ್ರೇಮಾ:— "ನೀವು ?"

ದಾನ:— "ನಾನು ಊಟ ಮಾಡಿಕೊಂಡು ಬಂದಿದ್ದೇನೆ."

ಪ್ರೇಮಾ:— "ಹಾಗಾದರೆ, ನಾನು ಮಾಡಿದ್ದೇನೆ ಅಂತಲೇ ತಿಳಿಯಿರಿ."

ದಾನ:— "ನೋಡು, ಪ್ರೇಮಾ, ನನ್ನ ಮನಸ್ಸಿಗೆ ನೋವನ್ನುಂಟು ಮಾಡಬೇಡ. ನಾನು ಕಂಠಪೂರ್ತಿ ಊಟ ಮಾಡಿ ಬಂದಿದ್ದೇನೆ. ಇದರಲ್ಲಿ ಎಳ್ಳಷ್ಟೂ ಸುಳ್ಳಿಲ್ಲ."

ಪ್ರೇಮಾ ಒಪ್ಪಲೇ ಇಲ್ಲ. ದಾನನಾಥನನ್ನು ಊಟ ಮಾಡಿಸಿಯೇ ಬಿಟ್ಟಳು. ಅನಂತರ ತಾನು ಊಟ ಮಾಡಿದಳು. ದಾನನಾಥನು ಇಂದು ತುಂಬಾ ಹರ್ಷಚಿತ್ತನಾಗಿದ್ದನು. ಯಾವ ಸಂಶಯರಹಿತವಾದ ಆನಂದದ ಕಲ್ಪನೆಯನ್ನು ಅವನು ಮಾಡಿದ್ದನೋ ಅದರ ಸ್ವಲ್ಪ ಅನುಭವವು ಅವನಿಗಾಗುತ್ತಿತ್ತು. ಅವನ ಮನಸ್ಸು ಹೇಳುತ್ತಿತ್ತು— "ನಾನು ವ್ಯರ್ಥವಾಗಿ ಇವಳಲ್ಲಿ ಸಂಶಯ ಪಡುತ್ತೇನೆ; ಪ್ರೇಮಾ ಸಂಪೂರ್ಣ ನನ್ನವಳೇ. ಅಮೃತರಾಯನಿಗೆ ವಿರುದ್ಧವಾಗಿ ಇಂದು ನಾನು ಎಷ್ಟು ಮಾತುಗಳನ್ನಾಡಿಲ್ಲ ಮತ್ತು ಅವಳಿಗೆ ಹೇಳಿಲ್ಲ ? ಇಷ್ಟಾದರೂ ಕೂಡ ಅವಳಿಗೆ ಕೋಪ ಬರಲಿಲ್ಲ." ಎಂದು ಎಂಟು

ತಿಂಗಳ ನಂತರ ದಾನನಾಥನಿಗೆ ಜೀವನದಲ್ಲಿ ನಿಜವಾದ ಆನಂದದ ಅನುಭವ ವಾಯಿತು.

ಪ್ರೇಮಾ ಕೇಳಿದಳು—"ಏನು ಯೋಚಿಸುತ್ತಿರುವಿರಿ?"

ದಾನ;— "ನನಗಿಂತಲೂ ಭಾಗ್ಯಶಾಲಿಯಾದವನು ಪ್ರಪಂಚದಲ್ಲಿ ಯಾರೂ ಇಲ್ಲವೆಂದು ಯೋಚಿಸುತ್ತಿರುವೆನು."

ಪ್ರೇಮಾ:— "ನಾನೇ ಇರುವೆನಲ್ಲಾ!"

ದಾನ:— "ನೀನು ಸಾಕ್ಷಾತ್ ದೇವಿ."

ಪ್ರೇಮಾ:— "ನೀವು ನನ್ನ ಪ್ರಾಣೇಶ್ವರ."

ಆರು ದಿನಗಳು ಕಳೆದುಹೋದುವು. ಕಮಲಾಪ್ರಸಾದ ಮತ್ತು ಅವನ ಮಿತ್ರವೃಂದ ನಿತ್ಯವೂ ಬರುತ್ತಿದ್ದರು ಮತ್ತು ನಗರದಲ್ಲಿ ನಡೆಯುತ್ತಿರುವ ಸಮಾಚಾರಗಳನ್ನೆಲ್ಲಾ ತಿಳಿಸುತ್ತಿದ್ದರು. ಯಾವ ಯಾವ ಶ್ರೀಮಂತರ ಮನೆ ಮುರಿಯಲಾಯಿತು, ಯಾವ ಅಧಿಕಾರಿಗಳು ಸಿಕ್ಕಿಬಿದ್ದರು, ಯಾವ ಯಾವ ಬೀದಿಗಳಲ್ಲಿ ಧಾಳಿ ನಡೆಯಿತು, ಯಾವ ಯಾವ ಕಛೇರಿ ಮತ್ತು ಆಫೀಸುಗಳ ಮೇಲೆ ಮುತ್ತಿಗೆ ಹಾಕಲಾಯಿತು—ಈ ಎಲ್ಲಾ ವರದಿಯನ್ನೂ ದಾನನಾಥನಿಗೆ ತಂದೊಪ್ಪಿಸುತ್ತಿದ್ದರು. ಇಂದು ಜಿಲ್ಲಾಧಿಕಾರಿಗಳು ಅಮೃತರಾಯನಿಗೆ ಜಮೀನು ಕೊಡಲಾಗುವುದಿಲ್ಲವೆಂದು ತಿಳಿಸಿದ ಸುದ್ದಿಯೂ ತಿಳಿಯಿತು. ಅವನು ಇಟ್ಟಿಗೆ, ಕಲ್ಲುಗಳನ್ನೆಲ್ಲಾ ತನ್ನ ಮನೆಯಲ್ಲಿ ತುಂಬಿಟ್ಟಿದ್ದಾನೆ. ಅವನ ಸಹಾಯಕ್ಕೆ ಕಾಲೇಜಿನ ಕೆಲವು ಹುಡುಗರಿದ್ದಾರೆ. ಸರಿ, ಅವರು ಏನು ತಾನೆ ಮಾಡಬಲ್ಲರು? ದಾನನಾಥನು ಪ್ರೇಮಾಳಿಗೆ ಈ ಸಮಾಚಾರವನ್ನೇ ತಿಳಿಸಬಾರದೆಂದಿದ್ದನು. ಆದರೆ ಕಮಲಾಪ್ರಸಾದನಿಗೆ ಅವಳಿಗೆ ಹೇಳಿದ ಹೊರತು ಶಾಂತಿಯೇ ಸಿಕ್ಕುತ್ತಿರಲಿಲ್ಲ. ಅವನು ಹೋಗುವಾಗ ಅವಳಿಗೂ ಸಂಕ್ಷಿಪ್ತವಾದ ವರದಿ ಒಪ್ಪಿಸಿ ಹೋಗುತ್ತಿದ್ದನು.

ಏಳನೆಯ ದಿನ ಮಧ್ಯಾಹ್ನ ಕಮಲಾಪ್ರಸಾದನು ತನ್ನ ಸ್ನೇಹಿತರ ತಂಡದೊಡನೆ ಬಂದು ಹೇಳಿದನು—"ನಡೆ, ಸ್ವಲ್ಪ ಹಾಗೆಯೇ ಹೊರಗೆ ಸುತ್ತಾಡಿಕೊಂಡು ಬರೋಣ."

ದಾನನಾಥನು ಉದಾಸೀನ ಭಾವದಿಂದಲೇ ಹೇಳಿದನು— "ನನ್ನನ್ನು ಕರೆದುಕೊಂಡು ಹೋಗಿ ನೀನೇನು ಮಾಡುವೆ? ನೀವೆಲ್ಲಾ ಇರುವಾಗ

ನಾನೇಕೆ ಬರಬೇಕು ?"

ಕಮಲಾ:—"ಹಾಗಲ್ಲವಯ್ಯಾ, ಸ್ವಲ್ಪ ಹಾಗೆ ಹೊರಗೆ ಬಂದು ನೋಡು. ಒಂದು ಸಾವಿರ ಜನರನ್ನು ಈಗಿನಿಂದಲೇ ಸಜ್ಜುಗೊಳಿಸಿಟ್ಟಿದ್ದೇನೆ. ಅವರು ಅಮೃತರಾಯನ ಭಾಷಣ ಕೇಳುವ ನೆಪದಿಂದ ಹೋಗಿ, ಆ ಮಹಾರಾಯ ಭಾಷಣ ಮಾಡದಂತೆ ಗಲಭೆ ಮಾಡುವರು. ಇನ್ನೂರು ಮುನ್ನೂರು ಜನರಿಗೆ ಕೇವಲ ಒಂದೊಂದು ಕಾಸಿನಂತೆ ಚಂದಾ ಕೊಟ್ಟು ಬರುವಂತೆ ತಿಳಿಯ ಹೇಳಿದ್ದೇನೆ. ಸ್ವಲ್ಪ ಹಾಗೆಯೇ ಹೊರಗೆ ಬಂದು ಇವರೆಲ್ಲರ ಮಾತನ್ನಾದರೂ ಕೇಳು."

ದಾನ:— "ಇನ್ನೂ ನನ್ನ ಭಾಷಣ ಸಿದ್ಧವಾಗಿಲ್ಲ. ಅತ್ತ ಹೋದರೆ ಅದು ಇನ್ನೂ ಅಪೂರ್ಣವಾಗಿಯೇ ಉಳಿದುಕೊಳ್ಳುವುದು."

ಕಮಲಾ:— "ಭಲೆ! ಭಲೆ! ಇಷ್ಟು ದಿನಗಳ ವರೆಗೆ ನೀನೇನು ಮಾಡುತ್ತಿದ್ದೆ ? ಅದಷ್ಟು ಜಾಗ್ರತೆ ಬರೆದು ಪೂರೈಸು."

ಹೀಗೆ ಹೇಳುತ್ತಾ ಕಮಲಾಪ್ರಸಾದನು ಒಳಗೆ ಹೊರಟು ಹೋದನು. ಪ್ರೇಮಾ ಇಂದಿನ ವರದಿಯನ್ನು ಕೇಳಲು ಕಾತುರಳಾಗಿದ್ದಳು. "ಬಾ, ಅಣ್ಣಾ, ಇಂದು ನಿಮ್ಮ ಹೋರಾಟದ ದಿನವಲ್ಲವೆ ?"

ಕಮಲಾಪ್ರಸಾದನು ಮೀಸೆಯನ್ನು ಹುರಿ ಮಾಡುತ್ತಾ ಹೇಳಿದನು— " ಎಂತಹ ಹೋರಾಟ ? ( ಚುಟಿಕೆ ಬಾರಿಸಿ ) ಹೀಗೆಯೇ ಹಾರಿಸಿಬಿಡುವೆ."

ಪ್ರೇಮಾ:— "ಹೊಡೆದಾಟ-ಬಡಿದಾಟವೇನೂ ಆಗಲಾರದಲ್ಲವೇ ?"

ಕಮಲಾ:— ಹೊಡೆದಾಟ-ಬಡಿದಾಟಕ್ಕೆ ಅವಕಾಶವೇ ಇರುವುದಿಲ್ಲ. ಹೌದು, ಅವನ ಕಡೆಯವರೇನಾದರೂ ರೇಗಿಸಿದರೆ, ಇದಕ್ಕೂ ಸಿದ್ಧರಾಗಿಯೇ ಇದ್ದೇವೆ. ಅವನ ಸಭೆಯಲ್ಲಿ ನಮ್ಮ ಕಡೆಯವರೇ ಅಧಿಕ ಸಂಖ್ಯೆಯಲ್ಲಿರುವರು ಇದಕ್ಕೆಲ್ಲಾ ತಕ್ಕ ಏರ್ಪಾಡು ಮಾಡಲಾಗಿದೆ. ಭಾಷಣವಾಗುವುದಕ್ಕೆ ಅವಕಾಶವನ್ನೇ ಕೊಡುವುದಿಲ್ಲ. ಶ್ರೀಮಂತರಾರೂ ಸಭೆಗೆ ಹೋಗುವುದಿಲ್ಲ. ಸರಿ, ನಾಲ್ಕಾರು ಜನ ಅಮೃತರಾಯನ ಸ್ನೇಹಿತರು ಬಂದರೆ ಅದೇ ಹೆಚ್ಚು. ಆದರೆ ಅವರಿಂದ ಎಷ್ಟು ಹಣ ಸಿಕ್ಕೀತು ? ಕೊಡುಗೈಯ ದಾನಿಗಳೆಂದರೆ ಸೇಠ್ ಮತ್ತು ಸಾಹುಕಾರರು. ಇವರನ್ನು ನಾವು ಮೊದಲಿನಿಂದಲೇ ನಮ್ಮ ಬಲೆಗೆ ಸಿಕ್ಕಿಸಿಕೊಂಡಿದ್ದೇವೆ."

ಪ್ರೇಮಾಗೆ ಬಹಳ ಚಿಂತೆಯಾಯಿತು. ಇಷ್ಟು ಮಂದಿ ವಿರೋಧಿಗಳು ಸೇರುವ ಸ್ಥಳದಲ್ಲಿ ದಂಗೆಯಾಗುವುದು ಖಚಿತವಾಗಿತ್ತು. ಅಯ್ಯೋ, ಎಲ್ಲಿ ಯಾದರೂ ಈ ಅವಿವೇಕಿಗಳು ಅವರ ಮೇಲೆ ಬಿದ್ದರೆ ಗತಿಯೇನು? ಅವರಿಗೆ ಈ ವಿಷಯಗಳೊಂದೂ ಗೊತ್ತಿಲ್ಲವೆ? ಅವರಿಗೂ ಕೆಲವರಾದರೂ ಸಹಾಯಕ ರಿರಬಹುದು. ಹೀಗಿದ್ದು ಅವರೇಕೆ ಈ ಸಭೆಯನ್ನು ಮುಂದೆ ಹಾಕಕೂಡದು? ತನ್ನ ಪ್ರಾಣಕ್ಕೇ ಏಕೆ ಸಂಚಕಾರ ತಂದುಕೊಳ್ಳಬೇಕು? ಇಂದು ಈ ಜನರೇ ಸಭೆ ನಡೆಯಿಸಿಕೊಳ್ಳಲಿ. ಇವರೆಲ್ಲಾ ಸ್ವಲ್ಪ ಶಾಂತರಾದ ಮೇಲೆ ನಾಲ್ಕಾರು ತಿಂಗಳು ಕಳೆದ ನಂತರ ತಮ್ಮ ಸಭೆಯನ್ನು ಸೇರಿಸಿಕೊಳ್ಳಲಿ; ಆದರೆ ಅವರೋ ತುಂಬಾ ಹಠವಾದಿಗಳು. ಉರಿಯುವ ಬೆಂಕಿಗೆ ಹಾರಲೂ ಅವರು ಹಿಂಜರಿ ಯುವುದಿಲ್ಲ. ನಾನು ಸಮಾಧಾನ ಮಾಡಿದರೆ, ಅವರು ಒಪ್ಪಿಕೊಳ್ಳುವರೆ? ಇವಳೂ ತನ್ನ ಗಂಡನ ಪಕ್ಷವನ್ನೇ ಹಿಡಿಯುತ್ತಿದ್ದಾಳೆಂದು ಅವರು ತಿಳಿದರೆ ಗತಿ ಯೇನು?"

ಎರಡು—ಮೂರು ಗಂಟೆಗಳ ವರೆಗೆ ಪ್ರೇಮಾ ಈ ಚಿಂತೆಯಲ್ಲಿಯೇ ಮುಳುಗಿದ್ದಳು. ಅವಳು ಯಾವ ನಿರ್ಧಾರವನ್ನೂ ಮಾಡಲು ಅಸಮರ್ಥಳಾ ದಳು. ಎರಡು ಮೂರು ಸಲ ಪತ್ರ ಬರೆಯಬೇಕೆನಿಸಿತು ಅವಳಿಗೆ. ಆದರೆ ಪತ್ರವೆಲ್ಲಾದರೂ ಅವರ ಕೈಸೇರದಿದ್ದರೆ ಅನರ್ಥವಾಗುವುದೆಂದು ಯೋಚಿಸಿ ಸುಮ್ಮನಾದಳು. ಅವರು ಮನೆಯಲ್ಲಿ ಇಲ್ಲದಿರಬಹುದು. ಆಗ ಅವರನ್ನು ಹುಡುಕಿ ಪತ್ರವನ್ನು ತಲುಪಿಸುವ ಬಗೆ ಹೇಗೆ?

ನಾಲ್ಕು ಗಂಟೆ ಹೊಡೆಯಿತು. ದಾನನಾಥನು ತನ್ನ ತಂಡದವರೊಡನೆ ಉತ್ಸವದಲ್ಲಿ ಭಾಗ ವಹಿಸಲು ಹೊರಟನು. ಪ್ರೇಮಾಗೆ ಆಗ ತನ್ನ ಅಸಹಾ ಯಕ ಪರಿಸ್ಥಿತಿಗಾಗಿ ಅಳು ಬಂದಿತು. ಒಬ್ಬರ ಎಂಜಲನ್ನು ಮತ್ತೊಬ್ಬರು ತಿನ್ನುತ್ತಿದ್ದ ಈ ಇಬ್ಬರು ಮಿತ್ರರು ನನ್ನ ಕಾರಣದಿಂದಲೇ ಪರಸ್ಪರ ಶತ್ರುಗಳಾ ಗುತ್ತಿದ್ದಾರೆ. ಮೊದಲು ನನಗೆ ಅಮೃತರಾಯನ ಪರಿಚಯವಾಗದಿದ್ದರೆ ಇಂದು ಇಂತಹ ಪೋಟಾಪೋಟಿಯೇ ಆಗುತ್ತಿರಲಿಲ್ಲ. ಮಾನಸಿಕ ವ್ಯಗ್ರತೆಯ ಈ ಪರಿಸ್ಥಿತಿಯಲ್ಲಿ ಅವಳು ಸ್ವಲ್ಪ ಹೊತ್ತು ನಿಂತುಕೊಳ್ಳುತ್ತಿದ್ದಳು. ಮತ್ತೆ ಕೆಲವು ವೇಳೆ ಕುಳಿತುಕೊಳ್ಳುತ್ತಿದ್ದಳು. ಅವಳ ಸಮಸ್ತ ಕರುಣೆ, ಕೋಮಲತೆ ಮತ್ತು ಮಮತೆಗಳೆಲ್ಲವೂ ಅಮೃತರಾಯನನ್ನು ಸಮಾರಂಭಕ್ಕೆ ಹೋಗದಂತೆ ತಡೆ

ಯಲು ಅವಳನ್ನು ಅವನ ಮನೆಗೆ ಹೋಗುವಂತೆ ಪ್ರೇರೇಪಿಸತೊಡಗಿದುವು. ಅವಳ ಸ್ತ್ರೀಸಹಜವಾದ ಲಜ್ಜೆ ಕ್ಷಣಕಾಲ ಲುಪ್ತವಾಯಿತು. ದಾನನಾಥನಿಗೆ ತನ್ನ ಈ ಕೆಲಸವು ಅಪ್ರಿಯವಾಗಬಹುದೆಂಬ ಅನುಮಾನವೂ, ಭಯವೂ ಅವಳಿಗೆ ಒಂದು ಸಲ ಕಾಡಿದುವು; ಆದರೆ ಅವಳು ಈ ವಿಷಯವನ್ನು ತನ್ನ ಹೃದಯದಿಂದ ತಳ್ಳಿ ಹಾಕಿದಳು. ತೇಜಸ್ಸಿನಿಂದ ಕೂಡಿದ ಹೆಮ್ಮೆಯಿಂದ ಅವಳ ಮುಖಮಂಡಲವು ದೇದೀಪ್ಯಮಾನವಾಯಿತು. "ನಾನು ಯಾರಿಗೂ ದಾಸಿಯಾಗಿಲ್ಲ—ನನ್ನ ವಿಚಾರಶಕ್ತಿಯನ್ನು ಯಾರಿಗೂ ಮಾರಿಕೊಂಡಿಲ್ಲ—ಹೃದಯದಲ್ಲಿ ಪ್ರೇಮವು ಪತಿಗೆ ಮೀಸಲು; ಆದರೆ ಭಕ್ತಿಯು ಯಾವಾಗಲೂ ಅಮೃತರಾಯನಿಗೇ ಮೀಸಲು."

ಕೂಡಲೇ ಅವಳು ಸೇವಕನನ್ನು ಕರೆದು ಹೇಳಿದಳು—"ಒಂದು ಜಟಕಾ ಗೊತ್ತು ಮಾಡಿಕೊಂಡು ಬಾ."

ತಾಯಿ ಕೇಳಿದಳು— "ಮಗೂ, ಎಲ್ಲಿಗೆ ಹೋಗುವೆಯಮ್ಮಾ ?"

ಪ್ರೇಮಾ:— "ಸ್ವಲ್ಪ ಹಾಗೆಯೇ ಬಾಬೂ ಅಮೃತರಾಯರ ಮನೆಯವರೆಗೂ ಹೋಗಿ ಬರುವೆನಮ್ಮಾ. ಇಂದು ದಂಗೆಯಾಗುವುದು ಖಂಡಿತವೆಂದು ನನಗೇಕೋ ಭಯವಾಗುತ್ತಿದೆ. ಇಂದಿನ ಅಧಿವೇಶನಕ್ಕೆ ಹೋಗಕೂಡದೆಂದು ಅವರನ್ನು ತಡೆಯಲು ಪ್ರಯತ್ನಿಸುತ್ತೇನೆ."

ತಾಯಿ:— "ನೀನು ಹೇಳುವುದು ಸರಿ. ನಾನೂ ನಿನ್ನೊಡನೆ ಬರುವೆ. ನನ್ನ ಮಾತನ್ನು ಅವನೆಂದಿಗೂ ಮೀರುವುದಿಲ್ಲ. ಅವನು ಎಳೆಯ ಮಗುವಾಗಿದ್ದ ಸಮಯದಿಂದಲೂ ನಮ್ಮ ಮನೆಗೆ ಬಂದು ಹೋಗುತ್ತಿದ್ದಾನೆ. ಇವರಿಬ್ಬರಲ್ಲೂ ಇಂತಹ ಮನಸ್ತಾಪವಾಗಲು ಏನಾಯಿತೆಂಬುದೇ ನನಗೆ ಯದು. ಮಗೂ, ಇಬ್ಬರು ಒಡಹುಟ್ಟಿದವರಲ್ಲೂ ನಾನಿಂತಹ ಪ್ರೇಮವನ್ನು ನೋಡಿರಲಿಲ್ಲ."

ಪ್ರೇಮಾ:— "ಇದೆಲ್ಲಾ ನಮ್ಮಣ್ಣ ಕಲಿಸಿರುವ ಪಾಠ. ಅವನಿಗೆ ಮೊದಲಿನಿಂದಲೂ ಅಮೃತರಾಯನನ್ನು ಕಂಡರೆ ಆಗದು. ಅವನು ವಿಚಿತ್ರ ಸ್ವಭಾವದವನು. ಅವನಿಗಿಂತಲೂ ಹೆಚ್ಚು ಯೋಗ್ಯರೂ, ವಿವೇಕಿಗಳೂ ಬೇರೆಯವರಾರಾದರೂ ಇದ್ದರೆ ಅವನ ದೃಷ್ಟಿಯಲ್ಲಿ ಅದೇ ಒಂದು ಅಪರಾಧ. ಅದನ್ನು ಅವನೆಂದಿಗೂ ಕ್ಷಮಿಸುವುದಿಲ್ಲ."

ತಾಯಿ:— "ಪಾಪ, ನಮ್ಮ ದಾನು ಬಹಳ ಸಾಧು. ನಿಮ್ಮಣ್ಣನ ಮಾತಿಗೆ ಮರುಳಾಗಿ ಮೋಸಹೋಗಿದ್ದಾನೆ."

ಟಾಂಗಾ ಬಂದಿತು. ಇಬ್ಬರೂ ಅಮೃತರಾಯನ ಮನೆಗೆ ಹೊರಟರು. ಹತ್ತು ನಿಮಿಷಕ್ಕೆ ಮುಂಚೆ ಅವನು ಟೌನ್ ಹಾಲ್ ಕಡೆ ಹೊರಟು ಹೋದ ನೆಂದು ಅಲ್ಲಿ ತಿಳಿಯಿತು. ಪ್ರೇಮಾ ಈಗ ಪೇಚಾಟಕ್ಕೆ ಸಿಕ್ಕಿದಳು. ಟೌನ್ ಹಾಲಿನಲ್ಲಿ ಸಾವಿರಾರು ಜನ ಸೇರಿರಬಹುದು ಮತ್ತು ಒಬ್ಬರಿಗಿಂತ ಮತ್ತೊಬ್ಬರು ಪುಂಡರೇ ಆಗಿರುವಲ್ಲಿ ಸಂಶಯವೂ ಇಲ್ಲ. ಅಲ್ಲಿಗೆ ಹೋಗುವುದು ಸರಿಯಲ್ಲ; ಆದರೆ ಇನ್ನೂ ಸಭೆ ಪ್ರಾರಂಭವಾಗಿರಲಾರದು; ಅಷ್ಟರಲ್ಲಿಯೇ ಅಮೃತರಾಯರೊಡನೆ ನಾಲ್ಕಾರು ಮಾತನಾಡಬಹುದು. ಹೆಚ್ಚು ಆಲೋಚಿಸಲು ಸಮಯವೇ ಇರಲಿಲ್ಲ. ಟಾಂಗಾದವನಿಗೆ ಹೇಳಿದಳು— "ಟೌನ್ ಹಾಲಿಗೆ ಹೊಡೆದುಕೊಂಡು ನಡೆ. ಬಹಳ ವೇಗವಾಗಿ ಹೋಗಬೇಕು. ನಿನಗೆ ಒಂದು ರೂಪಾಯಿ ಬಹುಮಾನ ಕೊಡುವೆನು."

ಆದರೆ ಜಟಕಾದ ಕುದುರೆ ದಿನವೆಲ್ಲಾ ದುಡಿದು ದಣಿದಿತ್ತು. ಎಲ್ಲಿಯವರೆಗೆ ಓಡೀತು ? ಜಟಕಾದವನು ಪದೇ ಪದೇ ಕುದುರೆಯನ್ನು ಚಾವಟಿಯಿಂದ ಹೊಡೆಯುತ್ತಿದ್ದನು; ಆದರೆ ಕುದುರೆಯು ಕತ್ತನ್ನು ಅತ್ತಿತ್ತ ಕೊಂಕಿಸಿ ಸುಮ್ಮನಾಗುತ್ತಿತ್ತು. ಟೌನ್ ಹಾಲ್ ವರೆಗೆ ಬರಲು ಇಪ್ಪತ್ತು ನಿಮಿಷಗಳು ಹಿಡಿದುವು. ಇಬ್ಬರು ಮಹಿಳೆಯರೂ ಗಾಡಿಯಿಂದಿಳಿದು ಬೇಗ ಬೇಗ ಒಳಕ್ಕೆ ಹೋಗಿ ನೋಡಿದರು—ಅಮೃತರಾಯನು ವೇದಿಕೆಯ ಮೇಲೆ ನಿಂತಿದ್ದಾನೆ; ಮತ್ತು ನೂರಾರು ಜನರು ಕೆಳಗೆ ನಿಂತುಕೊಂಡು ಗಲಾಟೆ ಮಾಡುತ್ತಿದ್ದಾರೆ. ಮಹಿಳೆಯರಿಗಾಗಿ ಒಂದು ಪಕ್ಕದಲ್ಲಿ ಪರದೆಗಳು ಹಾಕಲ್ಪಟ್ಟಿದ್ದುವು. ಇಬ್ಬರೂ ಪರದೆಯಲ್ಲಿ ಬಂದು ನಿಂತರು. ದೊಡ್ಡ ಗುಂಪು ಸೇರಿತ್ತು ಮತ್ತು ಬಹಳವಾಗಿ ಪೋಲಿಗಳು ಸೇರಿಕೊಂಡಿದ್ದರು. ಆದ್ದರಿಂದ ಪ್ರೇಮಾಗೆ ವೇದಿಕೆಯ ಕಡೆಗೆ ಹೋಗುವ ಸಾಹಸವಾಗಲಿಲ್ಲ.

ಅಮೃತರಾಯನು ಹೇಳಿದನು— "ಸಜ್ಜನರೆ, ಕೃಪೆಮಾಡಿ ಶಾಂತರಾಗಿರಿ. ನಾನೇನೂ ದೀರ್ಘವಾದ ಭಾಷಣ ಮಾಡುವವನಾಗಿಲ್ಲ. ನಾನು ಕೇವಲ ನಾಲ್ಕಾರು ಮಾತುಗಳನ್ನು ತಮ್ಮಲ್ಲಿ ನಿವೇದಿಸಿಕೊಂಡು ಕುಳಿತುಕೊಳ್ಳುವೆನು ...................? "

ಕೆಲವರು ಕಿರಚುತ್ತಾ ಹೇಳಿದರು—"ಧರ್ಮದ್ರೋಹಿ !"

ಅಮೃತ:—"ನಾನು ಧರ್ಮದ್ರೋಹಿಯೆಂದು ಯಾರು ಹೇಳುತ್ತಾರೆ ?"

ಅನೇಕ ಧ್ವನಿಗಳು—"ಮತ್ತೇನು ನೀನು ? ಯಾವ ಯಾವ ವೇದಗಳನ್ನು ಓದಿರುವೆಯೆಂಬುದನ್ನಾದರೂ ತಿಳಿಸು."

ಇದನ್ನು ಕೇಳಿ ಸುತ್ತಲೂ ಇದ್ದವರೆಲ್ಲರೂ ಚಪ್ಪಾಳೆ ಹೊಡೆದರು; ಮತ್ತು ಜನರು ಜೋರಾಗಿ ಗಲಭೆ ಮಾಡಲಾರಂಭಿಸಿದರು.

ಅಮೃತರಾಯನು ಪುನಃ ಹೇಳಿದನು—"ಕೆಲವು ಜನರು ಇಲ್ಲಿ ಸಭಾಕಾರ್ಯಕ್ಕೆ ವಿಘ್ನವನ್ನುಂಟು ಮಾಡುವ ಉದ್ದೇಶದಿಂದ ಬಂದಿದ್ದಾರೆಂಬುದು ನನಗೆ ಗೊತ್ತಿದೆ. ಯಾರು ಯಾರು ಅವರಿಗೆ ಉಪದೇಶ ಮಾಡಿ ಕಳುಹಿಸಿದ್ದಾರೆಂಬುದೂ ನನಗೆ ಗೊತ್ತು................"

ಇದನ್ನು ಕೇಳಿ ಒಬ್ಬ ಮಹಾಶಯರು ಹೇಳಿದರು—"ತಾವು ಯಾರ್ಯಾರನ್ನೋ ಆಕ್ಷೇಪಿಸುತ್ತಿರುವಿರಿ. ಇದರ ಪರಿಣಾಮ ಒಳಿತಾಗದು."

ಅಮೃತರಾಯನ ಪಕ್ಷದ ಯುವಕನೊಬ್ಬನು ರೇಗಿ ಹೇಳಿದ—"ತಾವು ಇಲ್ಲಿರುವುದಾದರೆ ಶಾಂತರಾಗಿ ಭಾಷಣ ಕೇಳಿರಿ; ಇಲ್ಲವಾದಲ್ಲಿ ಅಂಗಳವನ್ನು ಬಿಟ್ಟು ಹೊರಡಬಹುದು."

ಅನೇಕರು ದೊಣ್ಣೆಗಳನ್ನು ಕೈಗೆ ತೆಗೆದುಕೊಳ್ಳುತ್ತಾ ಹೇಳಿದರು—"ಅಂಗಳ ಯಾರ ಅಪ್ಪನದೇನೂ ಅಲ್ಲ. ಧೈರ್ಯವಿದ್ದರೆ ಸ್ವಲ್ಪ ಕೆಳಗಿಳಿದು ಬಾ."

ಅಮೃತರಾಯನು ಗರ್ಜಿಸಿ ಹೇಳಿದನು—"ಏನು, ತಾವುಗಳೆಲ್ಲರೂ ದಂಗೆ ಮಾಡಲು ಸಿದ್ಧರಾಗಿ ಬಂದಿರುವಿರಾ ? ದಂಗೆಯೇನಾದರೂ ಆದರೆ ಅದರ ಜವಾಬ್ದಾರಿಯು ತಮ್ಮ ಮೇಲೆಯೇ ಇರುವುದೆಂಬುದು ನೆನಪಿರಲಿ."

ಅನೇಕರು ಒಟ್ಟಾಗಿ ಹೇಳಿದರು—"ಹಾಗಾದರೆ ತಾವು ನಮ್ಮನ್ನೆಲ್ಲಾ ಗಲ್ಲಿಗೇರಿಸುವಿರಾ ? ಪ್ರಪಂಚದಲ್ಲೆಲ್ಲಾ ತಮ್ಮದೇ ಅಖಂಡ ಸಾಮ್ರಾಜ್ಯವಿದೆಯೆಂದು ತಿಳಿದಿರುವಿರಾ ? ತಾವೇನು ಜರ್ಮನಿಯ ಕೈಸರರೆ ?"

ಇದನ್ನು ಕೇಳಿ ಪುನಃ ಸಭೆಯಲ್ಲೆಲ್ಲಾ ಕರತಾಡನಗಳಾದುವು. ಅಂಗಳದ ಗೋಡೆಗಳೆಲ್ಲವೂ ನಡುಗುವಂತೆ ಅಟ್ಟಹಾಸದ ನಗುವು ಮೊಳಗಿತು.

ಭಂಗಿಯ ಅಮಲೇರಿದ್ದ ಘಟಿಂಗನೊಬ್ಬನು ಮುಂದೆ ಬಂದು ಹೇಳಿದನು—

"ವರ್ಣನೆ, ಪ್ರಶಂಸೆಗಳೆಲ್ಲವೂ ಹಿಂದಿನಿಂದಾಗಲಿ. ಮೊದಲು ನಿನಗೂ ನನಗೂ ಒಂದು ಸಾರಿ ಕುಸ್ತಿಯೇ ಆಗಿಹೋಗಲಿ."

ಕಾಲೇಜಿನ ಯುವಕನೊಬ್ಬನು ಕೋಪಗೊಂಡು ಆ ಪುಂಡನನ್ನು ಬಲವಾಗಿ ನೂಕಿದನು. ಅನೇಕರು ಅವನನ್ನು ಹಿಡಿದುಕೊಳ್ಳಲು ಪ್ರಯತ್ನಿಸಿದರೂ ಕೂಡ ಅವನು ಬಿದ್ದೇಬಿಟ್ಟನು. ಇನ್ನು ಹೇಳುವುದೇನು? ನೂರಾರು ಜನರು ದೊಣ್ಣೆ, ಕುರ್ಚಿಗಳನ್ನು ತೆಗೆದುಕೊಂಡು ವೇದಿಕೆಯ ಕಡೆಗೆ ನುಗ್ಗಿದರು. ಕಾಲೇಜಿನ ವಿದ್ಯಾರ್ಥಿಗಳೆಲ್ಲರೂ ಮೊದಲಿನ ಸಾಲಿನಲ್ಲಿಯೇ ಕುಳಿತಿದ್ದರು. ಅವರ ರಕ್ತವೂ ಕುದಿಯಿತು. ಅವರು ಕುರ್ಚಿಗಳನ್ನೆತ್ತಿಕೊಂಡರು. ಅಮೃತರಾಯನೂ ಕೂಡ ವೇದಿಕೆಯಿಂದ ಇಳಿದು ಬಂದನು. ವಿದ್ಯಾರ್ಥಿಗಳನ್ನು ಸಮಾಧಾನಪಡಿಸಲಾರಂಭಿಸಿದನು. ಆದರೆ ಅಂತಹ ಸಮಯದಲ್ಲಿ ಯಾರು ಯಾರ ಮಾತನ್ನು ಕೇಳಬಲ್ಲರು? ಇನ್ನೇನು ಕ್ಷಣಕಾಲದಲ್ಲಿ ಎರಡು ಪಕ್ಷಗಳಿಗೂ ಭಯಂಕರವಾದ ಕದನವಾಗುವುದರಲ್ಲಿತ್ತು. ಅಷ್ಟರಲ್ಲಿಯೇ ಓರ್ವ ಮಹಿಳೆ ವೇದಿಕೆಯ ಮೇಲೆ ಬಂದು ನಿಂತಳು. ಎಲ್ಲರ ದೃಷ್ಟಿಯೂ ಅವಳಕಡೆ ತಿರುಗಿತು. ಅವಳ ವಿಶಾಲವಾದ ನೇತ್ರಗಳಲ್ಲಿ ವಿನಯ ತುಂಬಿತ್ತು. ಜ್ಯೋತಿಯಂತೆ ಕಂಗೊಳಿಸುತ್ತಿದ್ದ ಅವಳ ಮುಖಮಂಡಲದ ಮೇಲೆ ಯಾಚನಾಭಾವವು ಸುಳಿಯುತ್ತಿತ್ತು. ಅವಳನ್ನು ನೋಡುತ್ತಲೇ ಎತ್ತಿದ ಕುರ್ಚಿಗಳು ಎತ್ತಿದಂತೆಯೇ ಇದ್ದುವು. ಮೇಲಕ್ಕೆತ್ತಿದ್ದ ದೊಣ್ಣೆಗಳು ಕೆಳಗಿಳಿದುವು. ಈ ಯುವತಿ ಯಾರೆಂಬ ಪ್ರಶ್ನೆಯು ಅಲ್ಲಿ ನೆರೆದಿದ್ದ ಪ್ರತಿಯೊಬ್ಬನ ಹೃದಯದಲ್ಲೂ ಉಂಟಾಯಿತು. ಈ ಮೋಹಿನಿಯು ಎಲ್ಲಿಂದ ಬಂದಳು? ಎಲ್ಲರೂ ಕೌತುಕದಿಂದ ಅವಳನ್ನೇ ಎವೆಯಿಕ್ಕದೆ ನೋಡಲಾರಂಭಿಸಿದರು.

ರಮಣಿಯು ಕಂಪಿತ ಸ್ವರದಲ್ಲಿ ನುಡಿದಳು— "ಸತ್ಪುರುಷರೇ, ತಮ್ಮ ಎದುರಿನಲ್ಲಿ ತಮ್ಮ ಸೋದರಿ—ತಮ್ಮ ಒಬ್ಬ ಪುತ್ರಿ ನಿಂತುಕೊಂಡು ತಮ್ಮಲ್ಲಿ ಬಂದು ಭಿಕ್ಷೆ ಬೇಡುತ್ತಿದ್ದಾಳೆ. ಅವಳನ್ನು ನಿರಾಶೆಗೊಳಿಸಬೇಡಿರಿ..........!"

ಒಬ್ಬ ವೃದ್ಧ ಮಹಾಶಯರು ಕೇಳಿದರು—"ತಾವು ಯಾರು?"

ರಮಣಿ:— "ನಾನು ತಮ್ಮ ಪಟ್ಟಣದ ಆಗರ್ಭ ಶ್ರೀಮಂತ ಲಾಲಾ ಬದರೀಪ್ರಸಾದರ ಪುತ್ರಿ; ಈ ಸಂಬಂಧದಿಂದ ನೋಡಿದರೆ ನಾನು ತಮ್ಮೆಲ್ಲರಿಗೂ ಸಹೋದರಿ ಮಗಳು, ಎನ್ನುವುದರಲ್ಲಿ ಸಂಶಯವಿಲ್ಲವಲ್ಲವೆ? ಪರಮಾತ್ಮನಲ್ಲಿ

ನಂಬಿಕೆಯಿಟ್ಟು ಕುಳಿತುಕೊಳ್ಳಿರಿ. ಒಬ್ಬ ಸೋದರಿಗೆ ತನ್ನ ಸೋದರರಲ್ಲಿ ಇಂತಹ ಯಾಚನೆ ಮಾಡುವ ಅಧಿಕಾರವೂ ಬೇಡವೇ ? ಈ ಸಭೆಯನ್ನು ಇಂದು ಸೇರಿಸಿರುವ ಉದ್ದೇಶವಿಷ್ಟೆ. ತಮ್ಮಿಂದ ಸಹಾಯವನ್ನು ಪಡೆದು ನಮ್ಮ ಅನಾಥೆಯರೂ, ಆಶ್ರಯಹೀನೆಯರೂ ಆದ ಸಹೋದರಿಯರ ಮಾನ ಮರ್ಯಾದೆ ಗಳನ್ನು ರಕ್ಷಿಸಿ ಅವರಿಗೆ ಸುಖಶಾಂತಿಗಳನ್ನು ಒದಗಿಸಬಲ್ಲ ಒಂದು ಭವನವನ್ನು ಈ ನಗರದಲ್ಲಿ ಸ್ಥಾಪಿಸಬೇಕಾಗಿದೆ. ಇಂತಹ ಹತ್ತಾರು ಸಹೋದರಿಯರಿಲ್ಲದಿ ರುವ ಕೇರಿಯೇ ಈ ನಗರದಲ್ಲಿ ಇಲ್ಲ. ಅವರಿಗೆ ಬಂದೊದಗುತ್ತಿರುವ ವಿಪತ್ತು ಗಳನ್ನು ತಾವೂ ನೋಡುತ್ತಲೇ ಇರುವಿರಿ. ಕಣ್ಣಿನಿಂದ ನೋಡದೆ ಇರುವವರು ಊಹಾಶಕ್ತಿಯಿಂದಲಾದರೂ ತಿಳಿಯಬಲ್ಲಿರಿ. ಅವರು ಎತ್ತ ಕಣ್ಣೆತ್ತಿದರೂ ಅವರ ದೃಷ್ಟಿಗೆ ಬೀಳುವವರು ನರಪಿಶಾಚಿಗಳೇ. ಅಸಹಾಯಕರಾದ ಸೋದರಿ ಯರ ದೀನಾವಸ್ಥೆಯನ್ನೇ ತಮ್ಮ ಕಾಮವಾಸನೆಯನ್ನು ಪೂರ್ಣಗೊಳಿಸುವ ಸಾಧನವನ್ನಾಗಿ ಮಾಡಿಕೊಳ್ಳುವ ಕಾಮಾಂಧರೇ ಕಾಣಿಸುತ್ತಾರೆ. ನಮ್ಮ ಲಕ್ಷಾಂತರ ಸಹೋದರಿಯರು ಈ ರೀತಿಯಾಗಿ ಕೇವಲ ಜೀವನ ನಿರ್ವಾಹಕ್ಕಾ ಗಿಯೇ ಪತಿತೆಯರಾಗುತ್ತಾರೆ. ಅಂತಹ ಅಬಲೆಯರ ಮೇಲೆ ತಮಗೆ ದಯೆ ಬರುವುದಿಲ್ಲವೆ ?

ಆ ಸೋದರಿಯರಿಗೆ ಒಂದು ಹೊತ್ತಿನ ಕೂಳು, ಒರಟು ಬಟ್ಟೆಗಳ ಸಹಾಯವಾದರೂ ದೊರೆತಲ್ಲಿ ಅವರು ತಮ್ಮ ಕೊನೆಗಾಲದ ವರೆಗೂ ತಮ್ಮ ಸತೀತ್ವವನ್ನು ರಕ್ಷಿಸಿಕೊಂಡಿರಬಲ್ಲರೆಂಬ ಪೂರ್ಣ ಭರವಸೆಯನ್ನು ನಾನು ಕೊಡ ಬಲ್ಲೆ. ಸ್ತ್ರೀ ಒಮ್ಮೆ ಜಾರಿದಳೆಂದರೆ ಅವಳ ಕುಲಕೋಟಿಯೆಲ್ಲಾ ದುರ್ಮಾರ್ಗ ಕ್ಕಿಳಿಯುತ್ತದೆ. ಅವಳಿಗೆ ತನ್ನ ಸತೀತ್ವಕ್ಕಿಂತಲೂ ಪ್ರಪಂಚದ ಬೇರಾವ ವಸ್ತು ವಿನ ಮೇಲೂ ಹೆಚ್ಚು ಹೆಮ್ಮೆ ಇರುವುದಿಲ್ಲ. ಅವಳು ಬೇರಾವ ವಸ್ತುವನ್ನೂ ಇಷ್ಟು ಅಮೂಲ್ಯವಾದುದೆಂದು ತಿಳಿಯುವುದಿಲ್ಲ. ಸದ್ಗೃಹಸ್ಥರಾದ ತಮ್ಮೆಲ್ಲ ರಿಗೂ ಸತ್ಪುತ್ರಿಯರೂ, ಸಹೋದರಿಯರೂ ಇರಬಹುದು. ಅವರ ವಿಷಯ ದಲ್ಲಿ ತಾವು ಮಾಡಬೇಕಾದ ಕರ್ತವ್ಯವೇನೂ ಇಲ್ಲವೆ ? ತಮ್ಮಲ್ಲಿ ಇಂತಹ ಪಾಷಾಣ ಹೃದಯಿಗಳಿದ್ದಾರೆಂದು ನಾನು ಹೇಳಲಾರೆ. ಅನಾಥ ಜೀವರಕ್ಷಣೆ ಮಾಡುವುದು ಧರ್ಮವಿರುದ್ಧವಾದುದೆಂದು ಯಾರು ತಾನೆ ಹೇಳಬಲ್ಲರು ? ಹೀಗೆ ಹೇಳುವವನು ಧರ್ಮದ ಹೆಸರನ್ನೇ ಅಪವಿತ್ರಗೊಳಿಸುತ್ತಾನೆ. ದಯೆಯು

ಧರ್ಮಕ್ಕೆ ಮೂಲ. ನನ್ನ ಸೋದರ ಬಾಬು ಅಮೃತರಾಯರು ಇಂತಹ ಒಂದು ಆಶ್ರಯಸ್ಥಾನವನ್ನು ನಿರ್ಮಿಸಬೇಕೆಂದು ನಿಶ್ಚಯಿಸಿದ್ದಾರೆ. ಅವರು ತಮ್ಮ ಸಂಪತ್ತೆಲ್ಲವನ್ನೂ ಅದಕ್ಕಾಗಿಯೇ ಧಾರೆಯೆರೆದಿದ್ದಾರೆ. ಈಗ ಅವರು ಈ ಕಾರ್ಯಕ್ಕಾಗಿ ತಮ್ಮ ಸಹಾಯ, ಸಹಕಾರ್ಯಗಳನ್ನು ಕೇಳುತ್ತಿದ್ದಾರೆ. ಯಾವನಲ್ಲಿ ನಿನ್ನೆ ಮೊನ್ನೆಯವರೆಗೂ ಲಕ್ಷಾಂತರ ರೂಪಾಯಿಗಳ ಆಸ್ತಿಯಿತ್ತೋ ಅಂತಹವನು ಇಂದು ಭಿಕ್ಷುಕನಂತೆ ತಮ್ಮ ಮುಂದೆ ನಿಂತು ಭಿಕ್ಷೆ ಬೇಡುತ್ತಿದ್ದಾನೆ. ಕೊಡುವ ಸಾಮರ್ಥ್ಯವಿದ್ದರೆ ಅವನಿಗೆ ಭಿಕ್ಷೆ ಕೊಡಿರಿ. ಇಲ್ಲದಿದ್ದರೆ ಬೇರೆಲ್ಲಿಯಾದರೂ ಪ್ರಯತ್ನಿಸು ಎಂದು ಹೇಳಿಬಿಡಿರಿ; ಆದರೆ ಅವನನ್ನು ಹೊಡೆಯಬೇಡಿರಿ ಮತ್ತು ಬಯ್ಯಬೇಡಿರಿ. ಈ ರೀತಿಯ ವ್ಯವಹಾರವು ತಮ್ಮಂತಹ ಪುರುಷರಿಗೆ ಯೋಗ್ಯವಲ್ಲ."

ಓರ್ವ ನಾಗರಿಕನೆಂದನು— "ಕಮಲಾಪ್ರಸಾದನಿಗೇಕೆ ಬುದ್ಧಿ ಹೇಳಬಾರದು ?"

ಮತ್ತೋರ್ವನೆಂದನು— "ಬಾಬೂ ದಾನನಾಥರೂ ಸೇರಿದ್ದಾರೆ."

ಪ್ರೇಮಾ ಒಂದು ಕ್ಷಣಕಾಲ ಗಾಬರಿಗೊಂಡಳು. ಈ ಗಂಡಾಂತರಕ್ಕೆ ಅವಳು ಯಾವ ಉತ್ತರ ಕೊಟ್ಟಾಳು ? ಜನತೆಯ ಈ ವಿರೋಧವು ನ್ಯಾಯ ಸಂಗತವಾಗಿತ್ತು. ಯಾವನು ತನ್ನ ಮನೆಯವರಿಗೇ ವಿವೇಕ ಹೇಳಲಾರನೋ ಅವನು ಇತರರಿಗೆ ಯಾವ ಮುಖ ಬಿಟ್ಟುಕೊಂಡು ವಿವೇಕ ಹೇಳಿಯಾನು ? ಸ್ವಲ್ಪ ಯೋಚಿಸಿ ಹೇಳಿದಳು— "ಹೌದು, ತಾವು ಹೇಳುವುದು ಸರಿ. ಆದರೆ ಈಗ ಅರ್ಧ ಗಂಟೆಗೆ ಮುಂಚೆ ಅವರ ಸಾಮಾಜಿಕ ಉಪದೇಶಗಳ ಪರಿಣಾಮವು ನಮ್ಮೆದುರಿಗೆ ಕಾಣುತ್ತಿರುವ ರೂಪವನ್ನು ತಾಳುವುದೆಂದು ನನಗೆ ತಿಳಿದಿರಲಿಲ್ಲ. ತಂದೆಯೇ ಆಗಲಿ, ಗಂಡನಾಗಲಿ ಅಥವಾ ಸಹೋದರನಾಗಲಿ—ಅವನೇನಾದರೂ ಈ ಸಭೆಗೆ ವಿಘ್ನವನ್ನುಂಟು ಮಾಡುವ ಯಾವ ಪ್ರಯತ್ನವನ್ನಾದರೂ ಮಾಡಿದ್ದರೆ, ನಾನು ಅವನ ಈ ಕೆಲಸವನ್ನು ಹೇಯವೆಂದು ಭಾವಿಸುತ್ತೇನೆ; ಯಾವನಾದರೂ ವಿಚಾರಶೀಲನಾದ ಮನುಷ್ಯನು ಇಂತಹ ನೀಚ ಕಾರ್ಯವನ್ನೆಸಗುವನೇ ಎಂಬ ಅನುಮಾನವಾಗುತ್ತಿದೆ ನನಗೆ."

ಪೇಟವನ್ನು ಧರಿಸಿದ ಭೀಮಕಾಯನೊಬ್ಬನು ಹೇಳಿದನು— "ಹಾಗಾದರೆ ನಾವು ಕಮಲಾಬಾಬುಗಳನ್ನು ಕೇಳೋಣವೆ ? ನಮ್ಮನ್ನು ಇಲ್ಲಿಗೆ ಬರ

ಮಾಡಿಕೊಂಡವರು ಅವರೇ! ಜನಗಳನ್ನು ಎಲ್ಲಾ ಕಡೆಗೂ ಕಳುಹಿಸಿ ನಮ್ಮ ನ್ನೆಲ್ಲಾ ಇಲ್ಲಿಗೆ ಅವರೇ ಕರೆಸಿಕೊಂಡಿದ್ದಾರೆ."

ಪುಂಡನ ಮನಸ್ಸು ಎಷ್ಟು ಸರಳವೂ ನ್ಯಾಯಪೂರ್ಣವೂ ಆಗಿತ್ತು? ಅಮೃತರಾಯನು ಅಧರ್ಮವನ್ನಲ್ಲ—ಧರ್ಮಪ್ರಚಾರ ಮಾಡುತ್ತಿದ್ದಾನೆಂದು ಅವನಿಗೆ ಈಗ ಅರ್ಥವಾಗುತ್ತಿತ್ತು. ಸ್ವತಃ ಅವನ ವಿಧವೆಯಾದ ಸೋದರಿ ಯೊಬ್ಬಳು ದಾರಿ ತಪ್ಪಿ ಹೋಗಿದ್ದಳು. ಇಂತಹ ಉಪಯೋಗಕರವಾದ ಸಂಸ್ಥೆಯನ್ನು ವಿರೋಧಿಸಿದುದಕ್ಕಾಗಿ ಅವನಿಗೆ ಈಗ ತುಂಬಾ ನಾಚಿಕೆಯಾಗು ತ್ತಿತ್ತು. ಅವನು ಈ ಅಪರಾಧವನ್ನು ತಾನು ಒಪ್ಪಿಕೊಳ್ಳದೆ, ತನ್ನನ್ನು ಈ ಕೆಲಸಕ್ಕೆ ಪ್ರೇರೇಪಿಸಿದ್ದವರ ಮೇಲೆ ಹೊರಿಸುತ್ತಿದ್ದನು.

ಪ್ರೇಮಾ ಇದೇ ರೀತಿಯಲ್ಲಿ ಸುಮಾರು ಅರ್ಧ ಗಂಟೆ ಕಾಲ ತನ್ನ ಮಧುರವಾಣಿ, ತನ್ನ ನಿರ್ಭಯ ಸತ್ಯಪ್ರೇಮ ಮತ್ತು ತನ್ನ ಪ್ರತಿಭೆಯಿಂದ ಜನ ರನ್ನು ಮಂತ್ರ ಮುಗ್ಧರನ್ನಾಗಿ ಮಾಡಿದಳು. ಅವಳು ಆಕಸ್ಮಿಕವಾಗಿ ವೇದಿ ಕೆಯ ಮೇಲೆ ಹೋದದ್ದು ಇಂದ್ರಜಾಲವನ್ನೇ ಮಾಡಿತು. ಅಮೃತರಾಯ ನನ್ನು ಅಪಮಾನ ಪಡಿಸಿದಷ್ಟು, ಒಬ್ಬ ಮಹಿಳೆಯನ್ನು ಅಪಮಾನಪಡಿಸುವುದು ಸುಲಭವಾಗಿರಲಿಲ್ಲ. ಪುರುಷನನ್ನು ಅಪಮಾನ ಪಡಿಸುವುದು ಸಾಧಾರಣ ವಿಷಯ. ಸ್ತ್ರೀಯನ್ನು ಅಪಮಾನ ಪಡಿಸುವುದು ಬೆಂಕಿಯಲ್ಲಿ ಹಾರಿದಂತೆ. ಅದರಲ್ಲೂ ಆ ಸ್ತ್ರೀ ಯಾರು? ನಗರದ ಆಗರ್ಭ ಶ್ರೀಮಂತನ ಮಗಳು! ಜನರ ಭಾವನೆಗಳಲ್ಲಿಯೇ ಒಂದು ವಿಧವಾದ ಕ್ರಾಂತಿಯುಂಟಾಯಿತು. ವಿಘ್ನ ಮಾಡಲು ಬಂದಿದ್ದವರೇ ಸಹಾಯ ಮಾಡಲು ಮುಂದಾದರು. ಪ್ರೇಮಾ ಚಂದಾ ಕೊಡಬೇಕೆಂದು ಜನರನ್ನು ಪ್ರಾರ್ಥಿಸಿಕೊಂಡು ಸೆರಗನ್ನು ಮುಂದೆ ಚಾಚಿದಾಗಿನ ದೃಶ್ಯವು ದೇವತೆಗಳನ್ನೂ ತೃಪ್ತಿಪಡಿಸುವಷ್ಟು ಭಾವಪರಿಪೂರ್ಣ ವಾಗಿತ್ತು. ಇಲ್ಲಿಗೆ ಲಾಠಿ ಪ್ರಹಾರ ಮಾಡಲು ಬಂದಿದ್ದ ಪುಂಡರೇ ಎಲ್ಲರಿಗಿಂ ತಲೂ ಧಾರಾಳವಾಗಿ ಧನ ಸಹಾಯಮಾಡಿದರು.

ಪುಂಡರು ಕೆಲವರಿಗೆ ಪ್ರಾಣಘಾತಕರಾದರೆ ಮತ್ತೆ ಕೆಲವರಿಗೆ ತಮ್ಮ ಪ್ರಾಣವನ್ನೇ ಅರ್ಪಿಸಲು ಸಿದ್ಧರಾಗುತ್ತಾರೆ. ಅವರನ್ನು ನೋಡಿ ಗಣ್ಯರೆನಿಸಿ ಕೊಂಡ ಮಹಾಶಯರಿಗೂ ಆವೇಶ ಬಂದಂತಾಯಿತು. ಕೇವಲ ತಮಾಷೆ ಯನ್ನು ನೋಡಲು ಬಂದವರೂ ಕೂಡ ಅಲ್ಪ ಸ್ವಲ್ಪ ಕೊಟ್ಟು ಹೋದರು. ಜನ

ಸಮೂಹವು ತರ್ಕದಿಂದಲ್ಲ, ಆವೇಶದಿಂದ ಕೆಲಸ ಮಾಡುತ್ತದೆ. ಒಳ್ಳೆಯ ಅಥವಾ ಕೆಟ್ಟ ಕೆಲಸಗಳನ್ನು ಮಾಡುವ ಮುಕ್ತತೆಯನ್ನುಂಟು ಮಾಡುವುದೂ ಸಮೂಹವೇ. ಎಷ್ಟೋ ಜನರು ಮನೆಗೆ ಹೋಗಿ ಹಣ ತಂದುಕೊಟ್ಟರು. ಬಂಗಾರದ ಉಂಗುರಗಳು, ತಾಯಿತಗಳು ಮತ್ತು ಕಂಠಾಭರಣಗಳು ರಾಶಿ ರಾಶಿಯಾಗಿ ಶೇಖರವಾದುವು. ಇದು ಪುಂಡರ ಕೀರ್ತಿಯನ್ನು ಉಜ್ವಲಗೊಳಿ ಸುತ್ತಿತ್ತು. ಹತ್ತಾರು ಗೂಂಡಾಗಳಂತೂ ಪ್ರೇಮಾಳಿಗೆ ಪಾದ ಮುಟ್ಟಿ ನಮಸ್ಕ ರಿಸಿ ಹೋದರು. ಪುಣ್ಯಕ್ಷೇತ್ರಗಳ ಯಾತ್ರೆ ಮಾಡಿಕೊಂಡು ಹಿಂತಿರುಗಿ ಬಂದವ ರಂತೆ ಅವರೆಲ್ಲರೂ ಸಂತೋಷಚಿತ್ತರಾಗಿದ್ದರು.

ಸಭೆಯು ಮುಗಿದ ನಂತರ ಅಮೃತರಾಯನು ಪ್ರೇಮಾಳಿಗೆ ಹೇಳಿದನು— "ಪ್ರೇಮಾ, ನೀನು ಇದೇನನರ್ಥವನ್ನು ಮಾಡಿದೆ? ದಾನನಾಥನು ನಿನ್ನನ್ನು ಕೊಂದೇ ಹಾಕುವನು."

ಪ್ರೇಮಾ ನಕ್ಕು ಹೇಳಿದಳು— "ಇಂತಹ ವಜ್ರಮೂರ್ಖರನ್ನೇ ಸಮಾ ಧಾನ ಪಡಿಸಿರುವಾಗ, ಅವರನ್ನೂ ಸಮಾಧಾನಪಡಿಸಬಲ್ಲೆನೆಂಬ ಧೈರ್ಯ ನನ ಗಿದೆ."

ಅಮೃತ:— "ಹೌದು ಪ್ರೇಮಾ, ನೀನು ಎಲ್ಲವನ್ನೂ ಮಾಡಬಲ್ಲೆ. ನಾನಂತು ಇಂದು ದಂಗುಬಡಿದು ಹೋದೆನು. ನನ್ನ ತಪ್ಪಿಗಾಗಿ ಪಶ್ಚಾತ್ತಾಪ ಪಡುತ್ತಿದ್ದೇನೆ."

ಪ್ರೇಮಾ ಕಠೋರಳಾಗಿ ಹೇಳಿದಳು— "ಅದೂ ತಮ್ಮ ಕೈಯಿಂದಲೆ!"

## ೧೧

ಪೂರ್ಣಾ ಪ್ರಾತಃಕಾಲ ಇತರ ದಿನಗಳಿಗಿಂತ ಅರ್ಧ ಗಂಟೆ ಮುಂಚೆ ಎದ್ದಳು. ಅವಳು ಸದ್ದಿಲ್ಲದಂತೆ ಸುಮಿತ್ರಾಳ ಕೊಠಡಿಗೆ ಕಾಲಿಟ್ಟಳು. ಸುಮಿ ತ್ರೆಯು ನಿದ್ರಿಸುತ್ತಿದ್ದಾಳೋ ಅಥವಾ ಎಚ್ಚತ್ತಿದ್ದಾಳೋ ಎಂಬುದನ್ನು ಅವಳು ನೋಡಬೇಕೆಂದಿದ್ದಳು. ಅವಳಿಗೆ ರಾತ್ರಿ ನಡೆದ ಘಟನೆಯ ವಿಷಯವೇನಾ ದರೂ ತಿಳಿದಿದೆಯೇ ಎಂಬುದನ್ನು ಅವಳ ಮುಖ ನೋಡುವುದರಿಂದಲೇ ತಿಳಿಯ

ಬೇಕೆಂದಿದ್ದಳು. ಪೂರ್ಣಾಳನ್ನು ನೋಡುತ್ತಲೇ ಅವಳು ನಸುನಕ್ಕಳು. ಅವಳ ಮಂದಹಾಸದ ಕಾರಣವು ಅವಳಿಗಲ್ಲದೆ ಬೇರೆಯವರಿಗೆ ತಿಳಿಯದು; ಆದರೆ ಪೂರ್ಣಾಳ ಹೃದಯದ ಚಲನೆ ತಟಕ್ಕನೆ ನಿಂತಂತಾಯಿತು. ಅವಳ ಮುಖ ಕಾಂತಿಯು ಮಾಯವಾಯಿತು. ಪರಮಾತ್ಮ, ಎಲ್ಲಿಯಾದರೂ ಇವಳು ನೋಡಿಬಿಟ್ಟಳೆ ?

ಸುಮಿತ್ರೆಯು ಮೇಲೆದ್ದು ಕೆದರಿ ಹೋಗಿದ್ದ ತಲೆಗೂದಲುಗಳನ್ನು ಸರಿಪಡಿಸಿಕೊಳ್ಳುತ್ತಾ ಹೇಳಿದಳು— "ಇಂದು ಬೆಳಿಗ್ಗೆ ಇಷ್ಟು ಬೇಗ ಹೇಗೆ ಎಚ್ಚರವಾಯಿತು, ಪೂರ್ಣಾ ?"

ಪ್ರಶ್ನೆಯೇನೋ ಸಾಮಾನ್ಯವಾಗಿತ್ತು; ಆದರೆ ಪೂರ್ಣಾಗೆ ಇದು ಮುಖ್ಯ ವಿಷಯಕ್ಕೆ ಪೀಠಿಕೆಯೋ ಎಂಬಂತೆ ಭಾಸವಾಯಿತು. ಬೆಳಿಗ್ಗೆ ಇಷ್ಟು ಬೇಗ ಏಳುವುದು ಕಳಂಕಾಸ್ಪದವಾಗಿ ಕಂಡಿತು. ಇದನ್ನು ಸ್ವೀಕರಿಸುವುದರಿಂದ ಯಾವುದೋ ಅಜ್ಞಾತವಾದ ಭಯಂಕರ ಆಪತ್ತು ಒದಗಬಹುದೆಂಬ ಸಂಶಯವೂ ಆಯಿತು. ಹೇಳಿದಳು— "ಇದೇನು ಬಹಳ ಮುಂಚೆಯೇ? ನಿತ್ಯ ಏಳುವ ಹೊತ್ತೇ ಆಗಿದೆ."

ಸುಮಿತ್ರಾ:— "ಇಲ್ಲ ಸೋದರಿ, ಈ ದಿನ ನೀನು ಮುಂಜಾವಿನಲ್ಲಿಯೇ ಎದ್ದಿದ್ದೀಯೆ. ನಿನಗೆ ರಾತ್ರಿ ನಿದ್ದೆ ಬರಲಿಲ್ಲವೆ? ಕಣ್ಣುಗಳು ಕೆಂಪೇರಿವೆ."

ಪೂರ್ಣಾಳ ಹೃದಯದ ಬಡಿತ ಹೆಚ್ಚಾಯಿತು. ಈ ಎರಡನೆಯ ಪ್ರಶ್ನೆಯು ಮೊದಲನೆಯದಕ್ಕಿಂತ ಲಾಂಛನಾಸ್ಪದವಾಗಿ ಕಂಡಿತು. ಇದನ್ನು ಅವಳು ಹೇಗೆ ತಾನೇ ಒಪ್ಪಿಕೊಂಡಾಳು ? ಹೇಳಿದಳು—"ಇಲ್ಲ ಅಕ್ಕ, ನಿನಗೇನೋ ಭ್ರಾಂತಿಯಾಗುತ್ತಿದೆ. ರಾತ್ರಿ ಬಹಳ ಹೊತ್ತು ನಿದ್ರಿಸಿದೆ. ನಾನು ಕಣ್ಣು ಮುಚ್ಚಿದ್ದೊಂದೇ ತಡ, ಕಣ್ಣು ಬಿಟ್ಟಾಗ ಬೆಳಗಾಗಿತ್ತು. ಬಹಳ ನಿದ್ರಿಸುವುದರಿಂದಲೂ ಕಣ್ಣುಗಳು ಕೆಂಪಾಗುವುದುಂಟು."

ಸುಮಿತ್ರೆ ನಕ್ಕು ಹೇಳಿದಳು— "ಇರಬಹುದು, ನನಗೆ ಗೊತ್ತಿರಲಿಲ್ಲ."

ಪೂರ್ಣಾ ಒತ್ತಿ ಹೇಳಿದಳು— "ಭೇಷ್ ! ಇಷ್ಟು ಅಲ್ಪ ವಿಷಯ ನಿನಗೆ ತಿಳಿಯದೆ? ಸರಿ, ನಿನಗಂತೂ ಸುತರಾಂ ನಿದ್ದೆ ಬರಲಿಲ್ಲ. ರಾತ್ರಿಯೆಲ್ಲಾ ಎಚ್ಚರವಾಗಿದ್ದೆಯಾ ?"

ಸುಮಿತ್ರಾ:— "ನನಗೇನು ಪೀಡೆ ಎಚ್ಚರವಾಗಿರಲು? ನಾನು ಬೇಕಾದರೆ ಅವರೇ ಬರುವರು. ನನಗೇನೂ ಅಂತಹ ಕುತೂಹಲವಿಲ್ಲವಲ್ಲ. ಅವರು ನನ್ನ ಮೇಲೆ ಕೋಪ ಮಾಡಿಕೊಳ್ಳದೇ ಇದ್ದರೂ ನನಗೆ ಸಿಕ್ಕುತ್ತಿದ್ದ ಸ್ವರ್ಗ ಸುಖವೂ ಅಷ್ಟರಲ್ಲಿಯೇ ಇರಲಿ. ಆಗಂತೂ ಮತ್ತಷ್ಟು ನನ್ನ ಹೊಟ್ಟೆ ಉರಿಸುತ್ತಿದ್ದರು. ಇಲ್ಲಿ ನನ್ನ ಭಾಗ್ಯದಲ್ಲಿ ಅಳುವುದನ್ನು ಬಿಟ್ಟರೆ ಬೇರೇನೂ ಬರೆದಿಲ್ಲವೆಂತ ಕಾಣುತ್ತೆ."

ಪೂರ್ಣಾ :— "ನೀನಂತೂ ವ್ಯರ್ಥವಾಗಿ ಹಠ ಮಾಡಿಕೊಂಡು ಕುಳಿತಿರುವೆ, ಅಕ್ಕ! ಒಂದು ಸಲ ನೀನೇ ಅವರ ಬಳಿಗೆ ಏಕೆ ಹೋಗಬಾರದು?"

ರಾತ್ರಿಯ ಕಥೆಯನ್ನೆಲ್ಲಾ ಹೇಳಿ ಬಿಡಬೇಕೆನಿಸಿತು ಸುಮಿತ್ರಾಗೆ; ಆದರೆ ನಾಚಿಕೆಯು ಅವಳ ನಾಲಿಗೆಯನ್ನು ಬಿಗಿ ಹಿಡಿಯಿತು. ಹೇಳಿದಳು— "ಇದಂತೂ ನನ್ನಿಂದಾಗದ ವಿಷಯ ಸೋದರಿ! ನನ್ನ ಜೀವನವೆಲ್ಲಾ ಇದೇ ರೀತಿ ಕಳೆದು ಹೋದರೂ ಚಿಂತೆಯಿಲ್ಲ. ನನ್ನಿಂದೇನಾದರೂ ತಪ್ಪಾಗಿದ್ದರೆ ನಾನೇ ಹೋಗಿ ಅವರನ್ನು ಸಮಾಧಾನಪಡಿಸುತ್ತಿದ್ದೆ. ಅನ್ಯಾಯ ಮಾಡುವವರು ಅವರು; ಸಮಾಧಾನ ಮಾಡಲು ಹೋಗುವವಳು ನಾನು. ಇದೆಂದಿಗಾದರೂ ಸಾಧ್ಯವೆ?"

ಹೀಗೆ ಹೇಳುತ್ತಿರುವಂತೆಯೇ ಅವಳಿಗೆ ರಾತ್ರಿಯಲ್ಲಾದ ಅಪಮಾನ ಜ್ಞಾಪಕಕ್ಕೆ ಬಂತು. ಅವಳು ಗಂಟೆಗಟ್ಟಲೆ ಬಾಗಿಲ ಬಳಿ ನಿಂತಿದ್ದಳು. ಅವರು ಎಚ್ಚರವಾಗಿದ್ದರು—ಖಂಡಿತ ಎಚ್ಚರವಾಗಿದ್ದರು. ಆದರೂ ಬಾಗಿಲು ತೆರೆಯಲಿಲ್ಲ. ಹುಬ್ಬುಗಂಟಿಕ್ಕಿಕೊಂಡು ಹೇಳಿದಳು— "ಪುನಃ ಏಕೆ ಸಮಾಧಾನ ಪಡಿಸುವುದಕ್ಕೆ ಹೋಗಲಿ? ನನಗೆ ಯಾರ ವಿಷಯವೂ ತಿಳಿಯದು. ನನಗೆ ಇಷ್ಟವಾದರೆ ಒಂದು ರೂಪಾಯಿ ಖರ್ಚುಮಾಡುತ್ತೇನೆ ಅಥವಾ ನೂರು ರೂಪಾಯಿಯಾದರೂ ಖರ್ಚು ಮಾಡುತ್ತೇನೆ. ನಮ್ಮ ತಂದೆಯವರು ಕೊಟ್ಟರು ಮತ್ತು ಈಗಲೂ ಕೊಡುತ್ತಲೇ ಇರುತ್ತಾರೆ. ಇವರ ಮನೆಯಲ್ಲಿ ಬಿದ್ದುಕೊಂಡಿರುತ್ತೇನೆ; ಇಷ್ಟು ಅಪರಾಧವನ್ನು ಖಂಡಿತ ಮಾಡಿದ್ದೇನೆ. ಅಲ್ಲಾ ಪುರುಷನು ತನ್ನ ಸ್ತ್ರೀಯ ಮೇಲೆ ಇಷ್ಟೇಕೆ ದರ್ಪ ತೋರಿಸುತ್ತಾನೆ? ಸೋದರಿ, ಇದರ ಕಾರಣ ನಿನಗೇನಾದರೂ ತಿಳಿಯುತ್ತದೆಯೆ?"

ಪೂರ್ಣಾ ಗೂಢವಾಗಿ ನಕ್ಕು ಹೇಳಿದಳು— "ಇದೇನು ಇಂದಿನ

ಹೊಸ ವಿಷಯವೆ ? ಪುರುಷನು ಪ್ರಾಚೀನ ಕಾಲದಿಂದಲೂ ಸ್ತ್ರೀಯನ್ನು ರಕ್ಷಿಸಿಕೊಂಡು ಬಂದಿದ್ದಾನೆ; ಹೀಗಿರುವಾಗ ದರ್ಪವನ್ನೇಕೆ ತೋರಿಸಬಾರದು?"

ಸುಮಿತ್ರಾ:— "ಕಾಪಾಡಿಕೊಂಡು ಬಂದಿರುವುದಾದರೂ ತನ್ನ ಸ್ವಾರ್ಥಕ್ಕಾಗಿಯೆ; ಸ್ತ್ರೀಯರ ವಿಷಯವಾಗಿ ಅವರ ಭಾವನೆಗಳು ಔದಾರ್ಯದಿಂದ ಕೂಡಿವೆಯೆಂದಲ್ಲ. ತನ್ನ ಆಸ್ತಿಗಾಗಿ ಮಕ್ಕಳ ಬಯಕೆಯಾಗದಿದ್ದರೆ, ಯಾರೂ ಸ್ತ್ರೀಯರ ವಿಷಯವನ್ನೇ ಕೇಳುತ್ತಿರಲಿಲ್ಲ. ಬಂಜೆಯರಾದ ಸ್ತ್ರೀಯರ ದುಃಸ್ಥಿತಿಯನ್ನು ನೀನು ನಿತ್ಯ ನೋಡುತ್ತಿರುವೆ. ವೇಶ್ಯೆಯರಿಗಾಗಿ ಹಾತೊರೆಯುತ್ತಿರುವ ಲಂಪಟ ವಿಷಯ ಬೇರೆ."

ಪೂರ್ಣಾ:— "ನಾನಾದರೋ ಪುರುಷರ ಮೇಲೆಯೇ ಅಧಿಕಾರ ನಡೆಸುತ್ತಿರುವ ಎಷ್ಟೋ ಮಂದಿ ಸ್ತ್ರೀಯರನ್ನು ನೋಡಿದ್ದೇನೆ, ಇದೇಕೆ ?"

ಸುಮಿತ್ರಾ:— "ಅವನೆಲ್ಲೋ ಮುಟ್ಠಾಳ ಗಂಡಸಾಗಿರಬಹುದು."

ಪೂರ್ಣಾ:— "ಇಲ್ಲ ಅಕ್ಕ, ಅವರು ಮುಟ್ಠಾಳರಲ್ಲ, ಸಂಪಾದನೆಯಲ್ಲಿ ಗಟ್ಟಿಗರಾದವರು. ಒಬ್ಬರಲ್ಲ, ಹತ್ತು–ಹದಿನೈದು ಜನರನ್ನು ನಮ್ಮ ಕೇರಿಯಲ್ಲಿಯೇ ಎಣಿಸಬಲ್ಲೆ. ಹೊರಗೆಲ್ಲಿಗೆ ಹೋಗಲಿ? ನನ್ನ ಸೋದರಮಾವ ಒಬ್ಬರಿದ್ದರು. ಅವರು ಅತ್ತೆಯ ಅಪ್ಪಣೆಯಿಲ್ಲದೆ ಬಾಗಿಲಿನಿಂದ ಹೊರಕ್ಕೆ ಕಾಲಿಡುತ್ತಿರಲಿಲ್ಲ. ಒಂದು ಸಲ ಅವರಿಗೆ ನ್ಯಾಯಾಲಯದಿಂದ ಸಮನ್ ಬಂದಿತ್ತು. ಆಗ ಅವರು ಹೋಗಿ ಅತ್ತೆಯನ್ನು ಕೇಳಿದರು— "ಲೇ, ಕೇಳಿದೆಯೇನೆ, ಕಛೇರಿಯಿಂದ ಸಮನ್ ಬಂದಿದೆ. ಹೋಗಲೋ ಬೇಡವೋ ?"

ಸುಮಿತ್ರಾ:— "ನಿಮ್ಮ ಅತ್ತೆ ಬೇಡವೆಂದಿದ್ದರೆ ಅವರು ಹೋಗದೆ ಇರುತ್ತಿದ್ದರೆ ?"

ಪೂರ್ಣಾ:— "ಅವರು ಹೋಗುತ್ತಿರಲಿಲ್ಲವೆಂಬುದು ನನಗೆ ಗೊತ್ತು. ಆಳು ಬಲವಂತದಿಂದ ಹಿಡಿದುಕೊಂಡು ಹೋಗುತ್ತಿದ್ದ."

ಸುಮಿತ್ರಾ:— "ಹಾಗಾದರೆ ನಿಮ್ಮತ್ತೆ ಶ್ರೀಮಂತರ ಮನೆಯಲ್ಲಿ ಹುಟ್ಟಿರಬೇಕು."

ಪೂರ್ಣಾ:— "ಎಂತಹ ಶ್ರೀಮಂತರ ಮನೆ? ಮಾವ ಆಕೆಯನ್ನು ಕೊಂಡು ತಂದಿದ್ದರು. ಮಾವನವರ ಹಿರಿಯ ಹೆಂಡತಿ ಸತ್ತುಹೋದರು. ಆಗ ಅವರು ಆಕೆಯನ್ನು ಕೊಂಡು ತಂದರು."

ಸುಮಿತ್ರಾ:— "ಏನು ಹೇಳುತ್ತಿರುವೆ ಸೋದರಿ ? ಎಲ್ಲಿಯಾದರೂ ಹೆಂಗಸರ ಕ್ರಯ-ವಿಕ್ರಯವಾಗುವುದುಂಟೆ ?"

ಪೂರ್ಣಾ;— "ಹೆಂಗಸರು ಗಂಡಸರೆಲ್ಲಾ ಮಾರಾಟವಾಗುತ್ತಾರೆ. ಕನ್ಯಾಪಿತೃವು ವರನ ಪಿತೃವಿನಿಂದ ಸ್ವಲ್ಪ ಹಣ ಪಡೆದು ಕನ್ಯೆಯನ್ನು ಮದುವೆ ಮಾಡುವುದು ಮತ್ತು ವರನ ಪಿತೃವು ವಧುವಿನ ತಂದೆಯಿಂದ ಅಲ್ಪ ಹಣ ಪಡೆದು ವರನ ಮದುವೆ ಮಾಡುವುದು ಮಾರಾಟವಲ್ಲದೆ ಮತ್ತೇನು ? ಆದರೆ ಗಂಡನ ಕಡೆಯವರು ಹಣವನ್ನು ತೆಗೆದುಕೊಳ್ಳುವುದು ಹೊಸ ವಿಷಯವೇನೂ ಅಲ್ಲ. ಒಂದು ವೇಳೆ ಹುಡುಗಿಯ ತಂದೆಯೂ ಶುಲ್ಕವನ್ನು ಪಡೆದು ಲಗ್ನಮಾಡಿದರೂ ನಿಂದನೀಯವೇನೂ ಅಲ್ಲ. ಇದು ರೂಢಿಯಲ್ಲಿಲ್ಲ."

ಸುಮಿತ್ರಾ:— "ಹುಡುಗಿಯರ ತಂದೆ ತಾಯಿಗಳೂ ಕೂಡ 'ವಧುದಕ್ಷಿಣೆ' ಯನ್ನು ತೆಗೆದುಕೊಳ್ಳಲಾರಂಭಿಸಿದರೆ ಇನ್ನೂ ಚೆನ್ನಾಗುವುದು. ಕೈ ತುಂಬ 'ವಧುದಕ್ಷಿಣೆ' ತೆಗೆದುಕೊಂಡದ್ದಲ್ಲದೆ ಮದುವೆ ಮಾಡಲೇ ಕೂಡದು. ಆಗ ಪುರುಷರ ಬುದ್ಧಿಸ್ಥಿಮಿತಕ್ಕೆ ಬರುವುದು. ನಮ್ಮ ತಂದೆಯವರು ನನ್ನ ಲಗ್ನ ಮಾಡದಿದ್ದರೆ ನನಗೆ ಎಂದೂ ಇದರ ಯೋಚನೆಯೇ ಬರುತ್ತಿರಲಿಲ್ಲ. ಹೆಣ್ಣು ಹೆತ್ತವರಿಗೇ ತಮ್ಮ ಹೆಣ್ಣುಮಕ್ಕಳನ್ನು ಲಗ್ನ ಮಾಡಬೇಕೆಂಬ ಇಷ್ಟು ಕುತೂಹಲವಿರುತ್ತದೆಯೆಂಬುದು ನನಗೆ ಅರ್ಥವಾಗುವುದಿಲ್ಲ."

ಪೂರ್ಣಾ:—"ಅಕ್ಕಾ, ನೀನಂತೂ ಮಕ್ಕಳ ಹಾಗೆ ಮಾತನಾಡುತ್ತೀಯೆ? ಹೆಣ್ಣುಮಕ್ಕಳ ಲಗ್ನವಾಗುವುದು ಒಂದೆರಡು ವರ್ಷ ಸಾವಕಾಶವಾದರೆ ಎಲ್ಲರೂ ಅಪಹಾಸ್ಯ ಮಾಡುವರು. ಗಂಡುಮಕ್ಕಳ ವಿವಾಹವೇ ಆಗದಿದ್ದರೂ ಯಾರೂ ಚುಚ್ಚು ನುಡಿಗಳನ್ನು ಆಡಲಾರರು. ಲೋಕರೀತಿಯೇ ವಿಚಿತ್ರವಮ್ಮಾ!"

ಸುಮಿತ್ರಾ:— "ಆಂಗ್ಲರಲ್ಲಿ ಹೆಚ್ಚು ಸಂಖ್ಯೆಯ ಸ್ತ್ರೀಯರು ಅವಿವಾಹಿತರಾಗಿಯೇ ಇರುತ್ತಾರೆ. ಅದರಿಂದಾಗುವ ಹಾನಿಯೇನು ? ಅವರು ಪತಿತೆಯರಾಗಿದ್ದಾರೆಯೆ ?"

ಪೂರ್ಣಾ;— "ವರರ ಮನಸ್ಸಿನಲ್ಲಿರುವುದನ್ನು ಯಾರು ತಿಳಿಯಬೇಕು, ಅಕ್ಕಾ ! ಸ್ತ್ರೀಯು ಅಬಲೆ—ಒಬ್ಬ ರಕ್ಷಕನಿಲ್ಲದೆ ಅವಳ ಜೀವನ ಸುಖಶಾಂತಿಯಿಂದ ಕಳೆಯಲಾರದು."

ಸುಮಿತ್ರಾ:— "ಹಾಗಾದರೆ ಈ ಆಂಗ್ಲ ಕುಮಾರಿಯರು ಅವಿವಾಹಿತ ರಾಗಿಯೇ ಹೇಗೆ ತಾನೇ ಇರಬಲ್ಲರು ?"

ಪೂರ್ಣಾ:— "ಏತಕ್ಕೆಂದರೆ ಅವರು ಜೀವನವನ್ನು ವಿಲಾಸಪೂರ್ಣವಾಗಿ ಕಳೆಯಬೇಕೆಂದಿರುತ್ತಾರೆ; ಅಥವಾ ಮಕ್ಕಳ ಲಾಲನೆ ಪಾಲನೆಯ ಕಷ್ಟವನ್ನು ಸಹಿಸಲಿಚ್ಛಿಸುವುದಿಲ್ಲ; ಅಥವಾ ಇನ್ನೊಬ್ಬರ ಅಡಿಯಾಳಾಗಿ ಅವರಿಗೆ ಹೆದರಿ ಕೊಂಡಿರಲು ಇಷ್ಟಪಡುವುದಿಲ್ಲ."

ಸುಮಿತ್ರಾ:— "ಸರಿ, ನಿಮ್ಮ ಸೋದರ ಮಾವಂದಿರು ತಮ್ಮ ಪತ್ನಿಗೇಕೆ ಹೆದರುತ್ತಾರೆ? ಅವರೇನು ದುರ್ಬಲರಾದ ನಿರ್ಜೀವ ಪ್ರಾಣಿಗಳೇ ? ನಿಮ್ಮ ಅತ್ತೆಯವರು ಅಷ್ಟು ಭಾರಿ ಶರೀರಧಾರಿಗಳೇ ?"

ಪೂರ್ಣಾ:— "ಎಲ್ಲಿ ಬರಬೇಕು ಅಕ್ಕಾ, ಅತ್ತೆ ಉಫ್ ಎಂದರೆ ಉರುಳಿ ಬೀಳುವಷ್ಟು ತೆಳ್ಳಗಿದ್ದರು; ಮಾವನಾದರೋ ಭೀಮಕಾಯರಾಗಿದ್ದರು. ಸರಿ ಯಾಗಿ ಒಂದೂಕಾಲು ಸೇರು ಅಕ್ಕಿ ಬೇಕಾಗುತ್ತಿತ್ತು ಅವರ ಊಟಕ್ಕೆ. ಆದರೆ ಅತ್ತೆಯ ಕೈಗೊಂಬೆಯಾಗಿದ್ದರು. ತಮ್ಮ ಇಷ್ಟಾನುಸಾರವಾಗಿ ಅವರು ಒಂದು ಕಾಸನ್ನೂ ಖರ್ಚು ಮಾಡುವುದಿಲ್ಲ. ದಿನವೆಲ್ಲಾ ಲೇವಾದೇವಿಯ ಕೆಲಸ ಗಳನ್ನು ಮಾಡಿಕೊಂಡು ಹಿಂತಿರುಗಿದ ಮೇಲೆ ಅವರು ಮನೆಯಲ್ಲಲ್ಲದೆ ಬೇರೆ ಲ್ಲಿಯೂ ಊಟ ಮಾಡುವುದಿಲ್ಲ."

ಸುಮಿತ್ರಾ:— "ಅವರು ಬುದ್ಧಿಹೀನರಾಗಿರಬಹುದು."

ಪೂರ್ಣಾ:— "ಹಾಗಾದರೆ ಸರಿ, ಪುರುಷನೂ ಕೂಡ ಬುದ್ಧಿಹೀನರಾಗಿ ರುವ ಸ್ತ್ರೀಯರ ಮೇಲೆಯೇ ಅಧಿಕಾರ ತೋರಿಸುತ್ತಾನೆ. ಚತುರಳಾದ ಸ್ತ್ರೀಯ ಮೇಲೆ ಪುರುಷನು ದರ್ಪ ತೋರಿಸಲಾರನು ಮತ್ತು ಚತುರನಾದ ಪುರುಷನ ಮೇಲೆ ಸ್ತ್ರೀಯೂ ದರ್ಪ ತೋರಿಸಲಾರಳು. ಇಬ್ಬರಲ್ಲಿ ಯಾರ ಬುದ್ಧಿ ಪ್ರಬಲ ವಾಗಿರುವುದೋ ಅವರ ಅಧಿಕಾರವೇ ನಡೆಯುವುದು."

ಸುಮಿತ್ರಾ:— "ನಾನಂತೂ ಮೂರ್ಖರೂ ತಮ್ಮ ಸ್ತ್ರೀಯರನ್ನು ಹೆದರಿ ಸುತ್ತಿರುವುದನ್ನು ನೋಡಿದ್ದೇನೆ."

ಪೂರ್ಣಾ:— "ಇದು ಪ್ರಪಂಚದ ಪದ್ಧತಿ, ಅಕ್ಕ ! ಪುರುಷನು ಬಲ ದಲ್ಲಿ, ಬುದ್ಧಿಯಲ್ಲಿ, ಪೌರುಷದಲ್ಲಿ ಪ್ರಾಯಶಃ ಸ್ತ್ರೀಗಿಂತ ಮಿಗಿಲಾಗಿರುತ್ತಾನೆ. ಆದ್ದರಿಂದಲೇ ಅವನ ಅಧಿಕಾರವಿದೆ. ಎಲ್ಲ ಪುರುಷರಿಗೆ ಬದಲು ಸ್ತ್ರೀಯರಲ್ಲಿ

ಈ ಗುಣಗಳಿವೆಯೋ ಅಲ್ಲಿ ಸ್ತ್ರೀಯರ ಅಧಿಕಾರವೇ ನಡೆಯುತ್ತದೆ. ಪುರುಷನು ಸಂಪಾದನೆ ಮಾಡಿ ಪರಿವಾರದವರನ್ನೆಲ್ಲಾ ಸಲಹುವುದರಿಂದ ಅವನೇಕೆ ಪರ್ತೋರಿಸಬಾರದು ?"

ಸುಮಿತ್ರಾ:— "ಸಾಕು, ಸಾಕು. ನೀನು ಅತ್ಯಮೂಲ್ಯವಾದ ಮಾತನ್ನೇ ಹೇಳಿದೆ. ನಾನು ಯೋಚಿಸುವುದೂ ಇದೆ. ಅಸಹಾಯಕ ಸ್ತ್ರೀ ಸಂಪಾದಿಸಲಾರಳು, ಆದ್ದರಿಂದಲೇ ಅವಳಿಗೆ ಈ ದುರ್ಗತಿ ಬಂದಿದೆ. ಆದರೆ ಗಂಡಸು ತನ್ನ ಪರಿವಾರದವರನ್ನೆಲ್ಲಾ ಸಾಕಿದರೆ, ಸ್ತ್ರೀ ತನ್ನ ಸ್ಸಂಪಾದನೆಯಿಂದ ತನ್ನ ಹೊಟ್ಟೆಯನ್ನಾದರೂ ತುಂಬಿಕೊಳ್ಳಲಾರಳೆ ?"

ಪೂರ್ಣಾ:— "ಆದರೆ ಇಲ್ಲಿ ಬರುವುದು ರಕ್ಷಣೆಯ ಪ್ರಶ್ನೆ. ಅವರ ರಕ್ಷಣೆ ಮಾಡುವವರಾರು ?"

ಸುಮಿತ್ರಾ:— "ಎಂತಹ ರಕ್ಷಣೆ ? ಅವರನ್ನು ಯಾರಾದರೂ ತಿಂದು ಬಿಡುವರೋ ಅಥವಾ ಲೂಟಿ ಮಾಡುವರೋ !"

ಪೂರ್ಣಾ:— "ಲಂಪಟರ ದೆಸೆಯಿಂದ ಅವರು ಇರುವುದೇ ಕಷ್ಟವಾಗುವುದು !"

ಸುಮಿತ್ರಾ:— "ಯಾವಾಗ ಇಂತಹ ಅನೇಕ ಸ್ತ್ರೀಯರು ಒಟ್ಟುಗೂಡಿ ಇರುವರೋ ಅವರನ್ನು ಯಾರೂ ಕೆಡಿಸಲಾರರು. ಪ್ರತಿಯೊಬ್ಬ ಸ್ತ್ರೀಯೂ ತನ್ನ ಬಳಿ ಹರಿತವಾದ ಚಾಕುವನ್ನು ಇಟ್ಟುಕೊಳ್ಳಬೇಕು. ಯಾವನಾದರೂ ಪುರುಷನು ಅವರ ತಂಟೆಗೆಬಂದರೆ ತಮ್ಮ ಪ್ರಾಣವನ್ನೂ ಲೆಕ್ಕಿಸದೆ ಚೂರಿಯಿಂದ ಇರಿಯಬೇಕು. ಇಂತಹ ಹತ್ತಿಪ್ಪತ್ತು ಘಟನೆಗಳಾದರೆ ಪುರುಷರು ಹೆದರುವರು. ಆಮೇಲೆ ಯಾವನೂ ಸ್ತ್ರೀಯರ ಕಡೆ ಕಣ್ಣೆತ್ತಿಯೂ ನೋಡುವುದಿಲ್ಲ."

ಪೂರ್ಣಾ ಗಾಂಭೀರ್ಯದಿಂದ ಹೇಳಿದಳು— "ಕಾಲಬಂದರೆ ಅದೂ ಆಗುವುದಕ್ಕಾ ! ಈಗಂತೂ ಪುರುಷನೇ ಸ್ತ್ರೀಯ ರಕ್ಷಣೆ ಮಾಡುತ್ತಿದ್ದಾನೆ."

ಸುಮಿತ್ರಾ :— "ನಾವೇ ಗಂಡಸರನ್ನು ಮುಖಸ್ತುತಿ ಮಾಡಿ ಅಟ್ಟಕ್ಕೇರಿಸಿದ್ದೇವೆ."

ಪೂರ್ಣಾ:— "ಯಜಮಾನರು ಕೋಪಿಸಿಕೊಂಡಿರುವ ತನಕ ಈ ಮಾತುಗಳನ್ನಾಡುವೆಯಲ್ಲವೆ ? ಈಗಲೇ ಬಂದು ನಿನ್ನನ್ನೊಂದು ಬಾರಿ ಆಲಿಂಗಿಸಿಕೊಂಡರೆ, ಅವರ ಪಾದಕಮಲಗಳನ್ನು ಮುತ್ತಿಟ್ಟು ಮುದ್ದಿಸುವೆಯಲ್ಲವೆ ?"

ಸುಮಿತ್ರಾ:— "ಯಾರು, ನಾನೇ ? ನಾನು ಯಾವಾಗಲೂ ಮೂದಲಿಸುತ್ತಿರುತ್ತೇನೆ. ಅದರಿಂದಲೇ ರಾಯರು ನನ್ನನ್ನು ಕಂಡರೆ ಬೆಕ್ಕಿನ ಮರಿಯ ಹಾಗೆ ಇರೋದು. ಅವರು ಒಂದು ಕಾಸು ಖರ್ಚು ಮಾಡಲು ಕಣ್ಣು ಬಾಯಿ ಬಿಡುತ್ತಾರೆ. ನಾನು ಎಷ್ಟು ಸಾಧ್ಯವೋ ಅಷ್ಟು ಖರ್ಚು ಮಾಡಿಯೇ ತೀರುತ್ತೇನೆ. ಅವರನ್ನು ಬೇಡಿ ಖರ್ಚು ಮಾಡುವುದಿಲ್ಲ. ಈ ಸಾರಿ ಮತ್ತಷ್ಟು ರೇಗುತ್ತಾರೆ. ಇಂದೇ ಗಂಗಾಸ್ನಾನಕ್ಕೆ ಹೋಗುತ್ತೇನೆ. ಮನೆಯ ಸಾರೋಟಂತೂ ಸಿಕ್ಕುವುದಿಲ್ಲ. ಅದು ನನಗೋಸ್ಕರ ಖಾಲಿಯಾಗಿರುವುದಿಲ್ಲ. ಬಾಡಿಗೆ ಗಾಡಿಯಲ್ಲಿಯೇ ಹೋಗುವೆನು. ನಾಲ್ಕು ರೂಪಾಯಿಗಿಂತ ಕಡಿಮೆ ಖರ್ಚಾಗುವುದಿಲ್ಲ. ಆಗ ನೋಡುವೆಯಂತೆ ಅವರ ಕೋಪವನ್ನು."

ಇಷ್ಟರಲ್ಲಿಯೇ ಸೇವಕನು ಬಂದು ಹೇಳಿದನು— "ಅಮ್ಮಾ, ರಾಯರಿಗೆ ನಿಲುವಂಗಿ ಬೇಕಂತೆ."

ಸುಮಿತ್ರಾ ರೇಗಿ ಹೇಳಿದಳು— "ಎಲ್ಲಿ ಇಟ್ಟಿದ್ದಾರೋ ಹುಡುಕಿ ತೆಗೆದುಕೊಂಡು ಹೋಗುವಂತೆ ಹೇಳು. ಇಲ್ಲಿ ಅವರ ದಾಸಿ ಯಾರೂ ಇಲ್ಲ. ಹೊರಗೆ ಕುಳಿತುಕೊಂಡೇ ನವಾಬಗಿರಿ ಮಾಡಲು ಹೊರಟಿದ್ದಾರೆ."

ಸೇವಕನು ಕೈ ಮುಗಿದುಕೊಂಡು ಹೇಳಿದನು— "ಅಮ್ಮಾ, ಹಾಗೆಯೇ ಸ್ವಲ್ಪ ತೆಗೆದುಕೊಡಿ. ತೆಗೆದುಕೊಂಡು ಹೋಗದಿದ್ದರೆ, ನನ್ನ ಚರ್ಮ ಸುಲಿದು ಬಿಡುತ್ತಾರೆ."

ಸುಮಿತ್ರಾ:— "ಏಟು ತಿನ್ನಬೇಕೆಂದು ನಿನ್ನ ಹಣೆಯಲ್ಲಿ ಬರೆದಿದ್ದರೆ, ಹೋಗಿ ಏಟು ತಿನ್ನು. ನೀನು ಗಂಡಸು, ನಿನಗೆ ಬೇರೆಲ್ಲಿಯೂ ಕೆಲಸ ಸಿಕ್ಕುವುದಿಲ್ಲವೆ ?"

ಸೇವಕನು ಹೊರಟು ಹೋದನು. ಅದುವರೆಗೂ ಸುಮ್ಮನಿದ್ದ ಪೂರ್ಣಾ ಹೇಳಿದಳು— "ಅಕ್ಕ, ಜಗಳವನ್ನೇಕೆ ಹೆಚ್ಚಿಸಿಕೊಂಡು ಹೋಗುತ್ತೀಯೆ ? ಎಲ್ಲಿ, ಬೀಗದ ಕೈಯನ್ನು ಕೊಡು ನಾನೇ ತಂದುಕೊಡುತ್ತೇನೆ. ಅವರ ಕೋಪದ ಅನುಭವ ನಿನಗೆ ಚೆನ್ನಾಗಿದೆಯಲ್ಲವೇ ?"

ಸುಮಿತ್ರಾ:— "ಇಲ್ಲಿ ಜಬ್ಬು ನೋಡಿ ಥರಥರನೆ ನಡುಗುವವರು ಯಾರೂ ಇಲ್ಲ. ಅಗತ್ಯವಿದ್ದರೆ ನೂರು ಸಲ ಬಂದು ತೆಗೆದುಕೊಂಡು ಹೋಗಲಿ. ನನಗೇನು ಸಂಬಳ ಕೊಟ್ಟು ಇಟ್ಟಿಲ್ಲ."

ಸೇವಕನು ಹಿಂತಿರುಗಿ ಬಂದು ಹೇಳಿದನು— "ನಿಲುವಂಗಿ ಕಬ್ಬಿಣದ ಪೆಟ್ಟಿಗೆಯಲ್ಲಿದೆಯೆಂದು ರಾಯರು ಹೇಳಿದರು."

ಸುಮಿತ್ರಾ:— "ನೀವೇ ಹೋಗಿ ತರಬೇಕೆಂದು ನೀನು ಅವರಿಗೆ ಹೇಳಲಿಲ್ಲವೆ? ಇಷ್ಟು ಹೇಳಿದ್ದರೆ ನಿನ್ನ ನಾಲಿಗೆ ಬಿದ್ದು ಹೋಗುತ್ತಿತ್ತೆ?"

ಸೇವಕ:— "ಇದನ್ನೇನೋ ನಾನು ಹೇಳಲಿಲ್ಲ, ತಾಯಿ. ನೀವಿಬ್ಬರೂ ಒಂದಾಗಿ ಬಿಟ್ಟಿದ್ದೀರಿ. ಮಧ್ಯೆ ಸಿಕ್ಕಿಕೊಂಡು ನನ್ನ ಪ್ರಾಣ ಹೋಗುತ್ತಾ ಇದೆ. "

ಸುಮಿತ್ರಾ:— ಸರಿ, ಹಾಗಾದರೆ ಇಲ್ಲಿಂದ ಮೊದಲು ಓಡಿ ಹೋಗು. ಇಲ್ಲವಾದಲ್ಲಿ ಮೊದಲು ನಾನೇ ನಿನ್ನನ್ನು ಹೊಡೆಯುವೆನು."

ಸೇವಕನು ಸುಮಿತ್ರೆಯೊಡನೆ ಬಹಳ ಸಲಿಗೆಯಿಂದ ನಡೆದುಕೊಳ್ಳುತ್ತಿದ್ದನು. "ಮಹಾತಾಯಿಯವರು ಎಷ್ಟು ಬೇಕಾದರೂ ಹೊಡೆಯಿರಿ. ಆದರೆ ಯಜಮಾನರಿಂದ ಮಾತ್ರ ಹೊಡೆಸಬೇಡಿ. ಅವರು ಒಂದು ಗುದ್ದು ಗುದ್ದಿದರೆ ಒಂದು ಹರದಾರಿ ಕೇಳುತ್ತೆ." ಎಂದನು.

ಸುಮಿತ್ರೆಗೆ ನಗು ಬಂದಿತು. ನಗುತ್ತಲೆ ಹೇಳಿದಳು— "ನೀನೂ ಕೂಡ ಇದೇ ರೀತಿಯಲ್ಲಿಯೇ ನಿನ್ನ ಹೆಂಡತಿಯನ್ನು ಹೊಡೆಯುತ್ತೀಯೆ. ಇದು ಅದಕ್ಕೆ ತಕ್ಕ ದಂಡನೆ."

ಸೇವಕ:— "ಅಮ್ಮಾ, ತಾಯಿ, ಅವಳ ವಿಷಯ ಮಾತ್ರ ಕೇಳಬೇಡಿರಿ. ನನಗೆ ಸರ್ವಗುಣ ಸಂಪನ್ನೆಯಾದ ಹೆಂಡತಿ ಸಿಕ್ಕಿದ್ದಾಳೆ. ಅವಳು ಮೊದಲು ಕಸಪರಿಕೆ ಕೈಗೆತ್ತಿಕೊಂಡು, ಅನಂತರ ಮಾತ್ನಾಡ್ತಾಳೆ. ತಾಯಿ, ನಾನೆಲ್ಲಿಯಾದರೂ ಅನ್ಯ ಸ್ತ್ರೀಯೊಡನೆ ನಗ್ತಾ ಮಾತ್ನಾಡ್ತಿದ್ದಿದ್ದನ್ನು ಅವಳು ನೋಡಿ ಬಿಟ್ಟಳೆಂದರೆ ರಂಪ ಮಾಡ್ಬಿಡ್ತಾಳೆ. ನೀವಂತೂ ಯಜಮಾನರಿಗೆ ಖೋ ಹೆದರಿಕೊಳ್ಳುತ್ತೀರಿ. ಯಜಮಾನರ ಕಂಡರೆ ನಿಮ್ಮಷ್ಟು ಮತ್ತಾರೂ ಹೆದರುವುದಿಲ್ಲ. "

ಸುಮಿತ್ರಾ:— "ನೀನು ಆಜನ್ಮ ಒದೆ ತಿನ್ನುವವನು. ಓಡಿ ಹೋಗಿ, ಅವರೇ ಬಂದು ನಿಲುವಂಗಿ ತೆಗೆದುಕೊಂಡು ಹೋಗುವಂತೆ ಹೇಳು. ನೀನೇನು ನಾಚಿಕೆಪಟ್ಟುಕೊಳ್ಳಲು ಮದವಣಿಗನೆ? ನಾನು ಹೇಳಿದ್ದನ್ನು ಖಂಡಿತವಾಗಿ ಹೇಳು. "

ಸೇವಕ:— "ಹೋಗ್ತೀನಿ ತಾಯಿ, ಇವತ್ತು ಒಳ್ಳೆಯವರ ಮುಖ ನೋಡಲಿಲ್ಲ, ನನ್ನ ಪರಾಣ ಹೋಗ್ತದೆ."

ಸೇವಕನು ಹೊರಟು ಹೋದ ಮೇಲೆ ಪೂರ್ಣಾ ಹೇಳಿದಳು— "ಸಖಿ, ನೀನು ಇಲ್ಲದ ಜಗಳ ಗಂಟು ಹಾಕಿಕೊಳ್ತೀಯೆ. ನಾನಂತೂ ಇಲ್ಲಿಂದ ಓಡಿ ಹೋಗುತ್ತೇನೆ."

ಸುಮಿತ್ರೆ ಅವಳ ಸೆರಗನ್ನು ಹಿಡಿದುಕೊಂಡು ಹೇಳಿದಳು— "ಎಲ್ಲಿಗೆ ಓಡಿ ಹೋಗುವುದು ? ಸ್ವಲ್ಪ ವಿನೋದವನ್ನು ನೀನೂ ನೋಡು ! ಅವರೇನು ಸಿಂಹವೇ ತಿಂದು ಬಿಡಲು ?"

ಪೂರ್ಣಾ:— ಅಕ್ಕ, ಕೋಪದಲ್ಲಿ ಮನುಷ್ಯನು ಕುರುಡನಾಗುತ್ತಾನೆ. ಎಲ್ಲಿಯಾದರೂ, ಏನಾದರೂ ಕೆಟ್ಟ ಮಾತನ್ನಾಡಿದರೆ— ?"

ಸುಮಿತ್ರಾ:— " ಕೆಟ್ಟ ಮಾತನಾಡಿದರೆ, ಕೆಟ್ಟ ಮಾತನ್ನೂ ಕೇಳು ವರು. "

ಪೂರ್ಣಾ:— "ಎಲ್ಲಿಯಾದರೂ ನಿನ್ನ ಮೇಲೆ ಕೈ ಮಾಡಿದರೆ?"

ಸುಮಿತ್ರಾ:— "ಕೈಮಾಡುವುದು ಏನು ವಿನೋದವೆ ? ಹಾಗಾದರೆ ಮುಖ ಕೂಡ ನೋಡುವುದಿಲ್ಲ."

ಕಮಲಾಪ್ರಸಾದನ ಪಾದರಕ್ಷೆಗಳ ಶಬ್ದ ಕೇಳಿಸಿತು. ಪೂರ್ಣಾಳ ಎದೆ ಬಡಿದುಕೊಳ್ಳಲಾರಂಭವಾಯಿತು. ಸುಮಿತ್ರಾ ಕೂಡ ಒಂದು ಕ್ಷಣಕಾಲ ಕಕ್ಕಾವಿಕ್ಕಿಯಾದಳು; ಆದರೆ ಮರುಕ್ಷಣದಲ್ಲಿಯೇ ತನ್ನ ಮನಸ್ಸನ್ನು ಸ್ತಿಮಿತಕ್ಕೆ ತಂದುಕೊಂಡು, ಭರ್ಚಿಯಿಂದ ತಿವಿಯುವವನ ಹೊಡೆತವನ್ನು ತಪ್ಪಿಸಿಕೊಳ್ಳು ವವನಂತೆ ಸತರ್ಕಳಾಗಿ ಕುಳಿತಳು.

ಕಮಲಾಪ್ರಸಾದನು ಕೊಠಡಿಯೊಳಕ್ಕೆ ಕಾಲಿಡುತ್ತಲೇ ಕಠೋರ ಸ್ವರದಲ್ಲಿ ಹೇಳಿದನು-- "ಕುಳಿತುಕೊಂಡು ಹರಟೆ ಹೊಡೆಯುವುದಕ್ಕೆ ಆಗುತ್ತೆ, ನಾನು ನಿಲುವಂಗಿಗೆ ಹೇಳಿ ಕಳುಹಿಸಿದರೆ, ನಿನಗೆ ಎದ್ದು ಕೊಡುವುದಕ್ಕೆ ಆಗಲಿಲ್ಲವೋ? ನಿಮ್ಮಪ್ಪನಿಗೆ ಹೇಳಿದ್ದರೆ, ಯಾವನಾದರೂ ಕೋಟ್ಯಾಧೀಶ್ವರನ ಕೊರಳಿಗೇ ನಿನ್ನನ್ನು ಕಟ್ಟುತ್ತಿದ್ದರಲ್ಲವೆ ? ಇಲ್ಲಿನ ಸ್ಥಿತಿ ಅವರಿಗೆ ಗೊತ್ತೇ ಇತ್ತು."

ಸುಮಿತ್ರಾ ಚಡಪಡಿಸುತ್ತಾ ಹೇಳಿದಳು— "ನಾನು ಸಾರಿ ಸಾರಿ ಹೇಳು ತ್ತೇನೆ, ನೀವು ನನ್ನ ತಂದೆ ತಾತಂದಿರ ಮಾತೆತ್ತಕೂಡದು. ಆ ಮಂಚದಮೇಲೆ

ಬೀಗದ ಕೈ ಇದೆ ಮತ್ತು ಎದುರಿಗೇ ಪೆಟ್ಟಿಗೆ ಇದೆ. ನಿಲುವಂಗಿಯನ್ನು ತೆಗೆದು ಕೊಂಡು ದಯಮಾಡಿಸಬಹುದು. ಇಲ್ಲಿ ಯಾರೂ ನಿಮ್ಮ ದಾಸಿ ಇಲ್ಲ; ನಿಮ್ಮ ಸಂಪಾದನೆಯಿಂದಲೇ ನನ್ನ ಆರೈಕೆ ಮಾಡಿದಾಗ ನೀವು ನನ್ನನ್ನು ಹೆದರಿಸ ಬಹುದು. ಈ ದೊಡ್ಡಸ್ತಿಕೆಯೆಲ್ಲವೂ ಥಳಕಿನದೆಂದು ನಮ್ಮ ತಂದೆಯವರಿಗೆ ಗೊತ್ತಿರಲಿಲ್ಲ."

ಕಮಲಾ:— "ನೀನಂತೂ ಬಹಳ ವಿವೇಕಿಯಾಗಿದ್ದೆ, ನೀನೇ ಈ ವಿಷ ಯವನ್ನು ತಿಳಿದುಕೊಳ್ಳಬಹುದಿತ್ತಲ್ಲಾ."

ಸುಮಿತ್ರಾ:— "ಜಗಳವಾಡಬೇಕೆಂದು ಬಂದಿದ್ದೀರೋ ಅಥವಾ ಕೋಟು ತೆಗೆದುಕೊಂಡು ಹೊರಕ್ಕೆ ಹೋಗುವಿರೋ ?"

ಕಮಲಾ;— "ಇಲ್ಲ, ಜಗಳವಾಡಬೇಕೆಂದಿದ್ದೇನೆ."

ಸುಮಿತ್ರಾ:— "ಸರಿ, ಹಾಗಾದರೆ ನೀವು ಹೇಳುವ ಮಾತುಗಳನ್ನೇ ನಾನೂ ಆಡಬೇಕಾಗುತ್ತದೆ."

ಕಮಲಾ:— "ನನ್ನ ನಿಲುವಂಗಿಯನ್ನು ತೆಗೆದು ಕೊಡುತ್ತೀಯೋ ಇಲ್ಲವೋ ?"

ಸುಮಿತ್ರಾ:— "ಒಳ್ಳೆಯ ಮನಸ್ಸಿನಿಂದ ಹೇಳಿದರೆ ತೆಗೆದುಕೊಡುತ್ತೇನೆ, ದರ್ಪದಿಂದ ಹೇಳಿದರೆ, ಇಲ್ಲ."

ಕಮಲಾ:— "ನಾನೇನೋ ದರ್ಪದಿಂದಲೇ ಹೇಳುತ್ತೇನೆ."

ಸುಮಿತ್ರಾ:— "ಹಾಗಾದರೆ, ತೆಗೆದುಕೊಳ್ಳಿರಿ."

ಕಮಲಾ:— "ನೀನೇ ತೆಗೆದುಕೊಡಬೇಕು."

ಸುಮಿತ್ರಾ:— "ನಾನು ತೆಗೆದುಕೊಡುವುದಿಲ್ಲ."

ಕಮಲಾ:— "ಅನರ್ಥವಾಗುವುದು ಸುಮಿತ್ರಾ ! ಇದರ ಪರಿಣಾಮ ಒಳಿತಾಗದು."

ಸುಮಿತ್ರಾ;— "ಮನಸ್ಸಿಗೆ ಬಂದಂತೆ ಮಾಡಬಹುದು ! ನಾನು ನಿಮ್ಮ ಮಾತಿಗೆ ಒಂದು ಕೂದಲೆಳೆಯಷ್ಟು ಲಕ್ಷ್ಯ ಕೊಡಲಾರೆ."

ಕಮಲಾ:— "ನೀನು ನಿನ್ನ ತೌರುಮನೆಗೆ ಹೊರಟು ಹೋಗು."

ಸುಮಿತ್ರಾ:— "ಇದೇ ನನ್ನ ಮನೆ. ಇಲ್ಲಿಂದ ಮತ್ತೆಲ್ಲಿಗೂ ಹೋಗ ಲಾರೆ."

ಕಮಲಾ:— "ಲಕ್ಷಾಧಿಪತಿಯಾದ ಅಪ್ಪನ ಮನೆಯಿಲ್ಲವೆ?"

ಸುಮಿತ್ರಾ:— "ಅಪ್ಪನ ಮನೆಯೂ ಒಂದು ಕಾಲದಲ್ಲಿ ನನ್ನ ಮನೆಯಾಗಿತ್ತು; ಈಗ ಇದೇ ನನ್ನ ಮನೆ. ಕೋರ್ಟಿನಲ್ಲಿ ಜೀವನಾಂಶಕ್ಕೆ ದಾವಾ ಹಾಕಿ ಐನೂರು ರೂಪಾಯಿ ಮಾಸಾಶನ ತೆಗೆದುಕೊಂಡು ತೆಪ್ಪಗಿರುವಳೆಂದು ನನ್ನನ್ನು ಭಾವಿಸಬೇಡಿ. ಅದು ಕೇವಲ ನಿಮ್ಮ ಭ್ರಾಂತಿಮಾತ್ರವಾಗಿರುವುದು. ಹೊಸದಾದರೆ ಉಪಯೋಗಿಸಬಹುದು, ಹಳೆಯದಾದರೆ ಎಸೆಯಬಹುದು—ಎಂದು ತಿಳಿಯಲು ನಾನೇನು ನಿಮ್ಮ ಕಾಲಿನ ಪಾದರಕ್ಷೆಯಲ್ಲ."

ಇಂತಹ ಕಟು ಉತ್ತರವನ್ನು ಇಂದಿನವರೆಗೆ ಕಮಲಾಪ್ರಸಾದನು ತನ್ನ ಪತ್ನಿಯ ಬಾಯಿಂದ ಎಂದೂ ಕೇಳಿರಲಿಲ್ಲ. ಅವನ ಬತ್ತಳಿಕೆಯಲ್ಲಿದ್ದ ತೀಕ್ಷ್ಣವಾದ ಬಾಣಗಳನ್ನೆಲ್ಲಾ ಅವನು ಪ್ರಯೋಗಿಸಿದನು. ಮನೆಯಿಂದ ಹೊರಟು ಹೋಗಬೇಕೆಂತಲೂ ಹೆದರಿಸಿದನು. ಆದರೆ ಸುಮಿತ್ರೆಯ ಮೇಲೆ ಈ ಮಾತುಗಳ ಪರಿಣಾಮವೇನೂ ಆಗಲಿಲ್ಲ. ಅವನು ಈಗ ಏನು ತಾನೆ ಮಾಡಿಯಾನು? ಪುರುಷನಿಗೆ ತನ್ನ ಪತ್ನಿಯ ಮೇಲೆ ಇರಬಹುದಾದ ಅಧಿಕಾರವೇನೆಂಬುದು ಇಂದು ಅವನಿಗೆ ಸ್ಪಷ್ಟವಾಗಿ ತಿಳಿಯಿತು. ಅವನು ಸುಮಿತ್ರೆಯನ್ನು ದಂಡಿಸಲಾರ. ಮನೆಯಿಂದ ಹೊರಡಿಸಲಾರ. ಹೆಚ್ಚೆಂದರೆ ಅವನು ಅವಳ ಮುಖವನ್ನು ನೋಡದೆ ಇರಬಲ್ಲ. ಇದರಿಂದ ಸುಮಿತ್ರೆಗೆ ಯಾವ ವಿಧವಾದ ವ್ಯಸನವೂ ಆಗುತ್ತಿರಲಿಲ್ಲ. ಈಗ ನಿರುಪಾಯನಾಗಿ ಅವನು "ದುರ್ಬಲರ ಅಸ್ತ್ರ ಇದೇ"— ಯೆಂದು ನಾಲ್ಕಾರು ಸಲ ಮನಸ್ಸಿನಲ್ಲಿಯೇ ಹೇಳಿಕೊಂಡನು. ಪೂರ್ಣಾಗೆ ಹೇಳಿದನು— "ಇವಳ ಮಾತುಗಳನ್ನು ಕೇಳುತ್ತಿರುವೆಯಲ್ಲವೇ ಪೂರ್ಣಾ! ನಾನು ಎಷ್ಟು ಮೆತ್ತಗಾಗುತ್ತಿರುವೆನೋ ಅವಳು ಅಷ್ಟೇ ಸಿಂಹಿಣಿಯಂತಾಗುತ್ತಿರುವಳು."

ಪೂರ್ಣಾ:— "ವಿವೇಕಿಗಳಾದವರೇ ತಿಳಿಗೇಡಿಗಳಂತೆ ವರ್ತಿಸಿದರೆ ಅಂತಹವರಿಗೆ ಏನು ತಾನೇ ಹೇಳಲು ಸಾಧ್ಯ?"

ಸುಮಿತ್ರಾ ಮುಖ ಗಂಟಿಕ್ಕಿಕೊಂಡು ಹೇಳಿದಳು— "ತಂಗಿ, ಮುಖ ನೋಡಿ ಬಿರುದು ಕೊಡಬೇಡ. ಏತರಿಂದಲೋ ಇವರು ವಿವೇಕ ಶಿಖಾಮಣಿಗಳಾದದ್ದು ಮತ್ತು ನಾನು ಅವಿವೇಕಿಯಾದದ್ದು? ಇದೇ ಮೀಸೆಯಿಂದಲೋ!

ಯಾವ ಮನುಷ್ಯನು ನನ್ನಂತಹ ಸಾಧು ಸ್ತ್ರೀಯನ್ನು ಇಂದಿನವರೆಗೂ ವಶ ಮಾಡಿಕೊಳ್ಳಲಸಮರ್ಥನಾದನೋ, ಅವನು ವಿವೇಕಿಯಲ್ಲ. ಮೂರ್ಖನೂ ಅಲ್ಲ—ಎತ್ತು. ಇವರ ಆಟೋಪವನ್ನು ನಾನೇಕೆ ಸಹಿಸಲಿ? ಹತ್ತು ಪ್ರೀತಿ ಮಾತನಾಡುವವರ ಒಂದು ಬೆದರಿಕೆಯನ್ನೂ ಸಹಿಸಬಹುದು. ಕಟು ವಚನ ಗಳನ್ನಾಡಿ ಮನನೋಯಿಸುವವರ ಬೆದರಿಕೆಯನ್ನು ಎಷ್ಟೂ ಅಂತ ಸಹಿಸುವುದಕ್ಕೆ ಸಾಧ್ಯ?"

ಕಮಲಾ:— "ನಾನು ಹೇಳುವುದನ್ನು ಕೇಳು ಸುಮಿತ್ರಾ, ಹಗಲೂ ರಾತ್ರೆ ಅತ್ತೂ ಅತ್ತೂ ಕಾಲ ಕಳೆಯಬೇಕಾಗುವುದು."

ಸುಮಿತ್ರಾ:— "ಅಳುವುದಕ್ಕೆ ನನಗೇನು ಕೇಡು! ಸರಿ, ಸರಿ, ನೀವೇ ಅಳಬೇಕಾಗಬಹುದು."

ಕಮಲಾ:— "ನಾನು ನೂರು ಮದುವೆ ಮಾಡಿಕೊಳ್ಳಬಲ್ಲೆ."

ಸುಮಿತ್ರಾ ಕ್ಷಣಕಾಲ ಸ್ತಂಭೀಭೂತಳಾದಳು. ಈ ಉಪಹಾಸಕ್ಕೆ ತಕ್ಕ ಕಠೋರ ಉತ್ತರವನ್ನು ಅವಳು ಕೊಡಲಾರದವಳಾದಳು. ತಾನೂ ಸಾವಿರ ಮದುವೆ ಮಾಡಿಕೊಳ್ಳುವೆನೆಂದು ಹೇಳುವ ಸಾಮರ್ಥ್ಯ ಅವಳಿಗಿರಲಿಲ್ಲ. ತಿರಸ್ಕಾರದಿಂದ ನುಡಿದಳು— "ಯಾವನು ಒಬ್ಬಳನ್ನೇ ಸುಖವಾಗಿ ಇಟ್ಟುಕೊಳ್ಳಲಾರನೋ, ನೂರು ಜನ ಸ್ತ್ರೀಯರನ್ನು ಎಷ್ಟು ಚೆನ್ನಾಗಿ ಇಟ್ಟುಕೊಳ್ಳುವನೋ! ಸರಿ, ವೇಶ್ಯೆಯರ ಸಹವಾಸ ಮಾಡಿದರೆ, ಅದು ಬೇರೆ ವಿಷಯ."

ಕಮಲಾಪ್ರಸಾದನು ಪರಾಜಿತನಾದನು. ಸಣ್ಣ ಸಣ್ಣ ವಿಷಯಗಳಿಗೆಲ್ಲ ರೇಗಿ ರೇಗಿ ಬೀಳುತ್ತಿದ್ದವನು ಒಬ್ಬ ಅಬಲೆಗೆ ಸೋತು ಹೋದನು. ಅವನ ಬಾಯಿಂದ ಮಾತೇ ಹೊರಡಲಿಲ್ಲ. ರಕ್ತವರ್ಣದ ನೇತ್ರಗಳಿಂದ ಸುಮಿತ್ರೆ ಯತ್ತ ಒಮ್ಮೆ ನೋಡಿ, ಹಿಂತಿರುಗಿ ಹೊರಟು ಹೋದನು.

ಕ್ಷಣಕಾಲ ಮಹಿಳೆಯರೀರ್ವರೂ ಮೌನವಾಗಿದ್ದರು. ಇಬ್ಬರೂ ತಮ್ಮ ತಮ್ಮ ಸ್ವಭಾವಕ್ಕನುಸಾರವಾಗಿ ಈ ವಾಗ್ಯುದ್ಧದ ವಿಷಯವನ್ನು ಕುರಿತು ಆಳ ವಾಗಿ ಆಲೋಚಿಸುತ್ತಿದ್ದರು. ಸುಮಿತ್ರೆಯು ವಿಜಯಗರ್ವದಿಂದ ಉಬ್ಬಿ ಹೋಗಿದ್ದಳು. ಅವಳ ಆತ್ಮವು ಅವಳನ್ನು ಎಳ್ಳಷ್ಟೂ ತಿರಸ್ಕರಿಸಲಶಕ್ಯವಾಗಿತ್ತು. ಅವಳು ಮಾಡಬೇಕೆಂದಿದ್ದುದನ್ನೇ ಮಾಡಿದಳು. ಆದರೆ ಪೂರ್ಣಾಳ ದೃಷ್ಟಿ ಯಲ್ಲಿ ಅಪರಾಧವೆಲ್ಲಾ ಸುಮಿತ್ರೆಯದಾಗಿತ್ತು. ಸ್ವಲ್ಪ ಎದ್ದು ನಿಲುವಂಗಿ

ಯನ್ನು ತೆಗೆದುಕೊಟ್ಟಿದ್ದರೆ ಈ ಕೂಗಾಟದ ಪ್ರಸಂಗವೇ ಬರುತ್ತಿರಲಿಲ್ಲ. ಗಂಡಿಸಿ ನೊಡನೆ ಜಗಳಕ್ಕೆ ನಿಲ್ಲುವುದು ಹೆಂಗಸಿಗೆ ಕಳಂಕಪ್ರಾಯವಾದುದು. ಇವಳ ಬಾಯಿಂದ ಇಂತಹ ಕಠೋರ ಶಬ್ದಗಳು ಹೇಗೆ ಹೊರಟವೋ ತಿಳಿಯದಾಗಿದೆ. ಕಲ್ಲು ಮನಸ್ಸಿನವಳು. ಪಾಪ, ಕಮಲಾಪ್ರಸಾದರಂತೂ ಸ್ತಂಭಿತರಾದರು. ಇಂತಹ ಹೆಂಗಸಿನ ಮಾತನ್ನು ಗಂಡಸು ಕೇಳದಿದ್ದರೆ ಹೇಗೆ?

ತಕ್ಷಣವೇ ಸುಮಿತ್ರಾ ಹೇಳಿದಳು— "ಬಹಳ ಜಂಭ ಕೊಚ್ಚಿಕೊಂಡು ಹೋಗಿದ್ದಾರೆ, ನನ್ನನ್ನು ಏನು ಮಾಡಿಯಾರು? ನೀನೇ ನೋಡುತ್ತಿರು, ಈಗ ದಾರಿಗೆ ಬರ್‍ತಾರೆ. ಇಂತಹ ಗಂಡಸರಿಗೆ ಇದೇ ಔಷಧಿ. ನಿನ್ನ ದಾಕ್ಷಿಣ್ಯಕ್ಕೆ ನಾನು ಸುಮ್ಮನಾದೆ, ಇಲ್ಲದಿದ್ದರೆ ಕಿವಿ ಕಿವುಡಾಗುವಂತೆ ಜೋರು ಮಾಡಿ ಬಿಡುತ್ತಿದ್ದೆ."

ಪೂರ್ಣಾ:— "ನೀನು ಹೇಳಬೇಕಾದ ಮಾತನ್ನಾವುದನ್ನೂ ಬಿಡಲಿಲ್ಲ, ಸೋದರಿ! ಬೇರೆ ಗಂಡಸಾಗಿದ್ದರೆ, ಏನು ಮಾಡುತ್ತಿದ್ದನೋ ಕಾಣೆ."

ಸುಮಿತ್ರಾ:— "ಹೇಳುವವನು ಒಂದಲ್ಲ ನೂರು ಸಲ ಕೇಳಬೇಕಾಗು ವುದು. ಅಸ್ಥಿರ ಹೆಂಗಿನ ಕೂಳನ್ನು ತಿನ್ನುವವರು ಅಂಜಿ ನಡೆಯಬೇಕು. ನಾನು ನನ್ನ ತಂದೆಗೆ ಎಂದೂ ಹೆದರಲಿಲ್ಲ, ಇವರಿಗೇಕೆ ಹೆದರಲಿ? ನೂರಾರು ಮದುವೆ ಮಾಡಿಕೊಳ್ಳುವೆನೆಂದು ಹೇಳಿಕೊಳ್ಳಲು ಯಾರಿಗೆ ನಾಚಿಕೆಯಾಗುವು ದಿಲ್ಲವೋ, ಅವರೂ ಮನುಷ್ಯರೆ?"

ಪೂರ್ಣಾ:— "ಅಕ್ಕ, ಬೇರೆ ದಿನಗಳ ವಿಷಯವನ್ನು ನಾನು ಹೇಳುವು ದಿಲ್ಲ; ಆದರೆ ನೀನು ಇಂದು ಬಹಳ ಹಠ ಮಾಡಿದೆ."

ಸುಮಿತ್ರಾ:— "ಉರಿಯುವ ಘಾಯದ ಮೇಲೆ ಉಪ್ಪು ಸುರಿಯಬೇಡ, ತಂಗಿ. ಕಷ್ಟ ಅನುಭವಿಸುವವಳಿಗೇ ಗೊತ್ತು."

ಪೂರ್ಣಾ:— "ನಾನಂತೂ ಇಂತಹ ಯಾವ ಮಾತನ್ನೂ ಆಡಲಿಲ್ಲ, ಅಕ್ಕ. ನನ್ನ ಮೇಲೆ ವ್ಯರ್ಥವಾಗಿ ರೇಗುತ್ತಿರುವೆ!"

ಸುಮಿತ್ರಾ:— "ಅಪರಾಧವನ್ನೆಲ್ಲಾ ನನ್ನ ಮೇಲೆಯೇ ಹೊರಿಸುತ್ತಿ ರುವೆ. ನನ್ನನ್ನೇನು ದೊಣ್ಣೆಯಿಂದ ಹೊಡೆಯುವೆಯೋ? ಸ್ತ್ರೀ ದುರ್ಬಲಳು, ಅವಳಿಗೆ ಉಪದೇಶ ಮಾಡುವವರು ಬಹು ಮಂದಿ ಇರುವರು. ಗಂಡಸರಿಗೆ ಬುದ್ಧಿ ಹೇಳುವವರು ಯಾರೂ ಇಲ್ಲ. ಇಷ್ಟು ಹೊತ್ತಿನ ವರೆಗೂ ಕುಳಿತು

ಕೊಂಡು ಕೇಳುತ್ತಾ ಇದ್ದೆಯಲ್ಲ, 'ಅಣ್ಣಾ ಎಂತಹ ಮಾತನಾಡುವಿರಿ' ಎಂಬು ದಾಗಿ ಒಂದು ಸಾರಿಯಾದರೂ ನಿನ್ನ ಬಾಯಿಂದ ಬಂತೆ? ಇವಳಿಗೆ ಹೀಗಾಗು ವುದೇ ಸರಿಯೆಂದು ನೀನು ಸಂತೋಷಪಡುತ್ತಿದ್ದೆಯೇನೋ !"

ಪೂರ್ಣಾಗೆ ಈ ಕೊನೆಯ ಮಾತು ಬಾಣದಂತೆ ನಾಟಿಕೊಂಡಿತು. ಅವಳು ಕಕ್ಕಾವಿಕ್ಕಿಯಾಗಿ ಸುಮಿತ್ರಾಳ ಮುಖವನ್ನು ನೋಡಲಾರಂಭಿಸಿದಳು. ಅವಳು ಯಾವಾಗಲೂ ಸುಮಿತ್ರಾಳ ಮುಖಸ್ತುತಿ ಮಾಡುತ್ತಿದ್ದಳು; ಆದಾಗ್ಯೂ ಯಾವ ದಿನ ಕಮಲಾಪ್ರಸಾದನು ಸೀರೆಗಳನ್ನು ತಂದಿದ್ದನೋ, ಅದೇ ದಿನದಿಂದ ಸುಮಿತ್ರೆಯು ತನ್ನನ್ನು ಸಂಶಯ ದೃಷ್ಟಿಯಿಂದ ನೋಡುತ್ತಿದ್ದಾಳೆಂಬುದೂ ಅವ ಳಿಗೆ ಗೊತ್ತಿತ್ತು; ಆದರೆ ಆ ಸಮಯದಲ್ಲಿ ಪೂರ್ಣಾ ಕಮಲಾಪ್ರಸಾದನ ಉಡು ಗೊರೆಯನ್ನು ತಿರಸ್ಕರಿಸುವುದರ ಮೂಲಕ ಸುಮಿತ್ರೆಯ ಮನಸ್ಸಿನಲ್ಲಿದ್ದ ಸಂದೇ ಹವನ್ನು ನಿವಾರಿಸಲು ಪ್ರಯತ್ನಿಸಿದ್ದಳು. ಹೀಗಿದ್ದರೂ ಇಂದು ಸುಮಿತ್ರಾ ಅಕಾರಣವಾಗಿ ಅವಳ ಮೇಲೆ ಕಠೋರ ಪ್ರಹಾರ ಮಾಡುತ್ತಿದ್ದಾಳೆ. ಎಲ್ಲಿಯಾ ದರೂ ಸುಮಿತ್ರಾಗೆ ರಾತ್ರಿಯಲ್ಲಿ ನಡೆದ ಮಾತುಕತೆಗಳೆಲ್ಲಾ ತಿಳಿದಿವೆಯೇನೋ ಎಂಬ ಭ್ರಮೆಯಾಯಿತು ಅವಳಿಗೆ. ಅವಳು ಪೆಟ್ಟು ತಿಂದವಳಂತೆ ಭೀತಿ ಯಿಂದ ಹೇಳಿದಳು— "ಅಕ್ಕ, ನಿನ್ನ ಮನಸ್ಸಿನಲ್ಲಿರುವುದನ್ನು ಸ್ಪಷ್ಟವಾಗಿ ಹೇಳು. ನನ್ನಂತಹ ಅನಾಥೆಯ ಹೊಟ್ಟೆ ಉರಿಸುವುದರಿಂದ ನಿನಗೇನು ಲಾಭವಾಗುವುದು? ನಾನು ಇಲ್ಲಿ ಇರುವುದು ಸರಿಬೀಳದಿದ್ದರೆ, ಇಂದೇ ಕಳಂಕಿನಿಯಾದ ನಾನು ಇಲ್ಲಿಂದ ಹೊರಟು ಹೋಗುವೆನು. ಪ್ರಪಂಚದಲ್ಲಿ ಲಕ್ಷಾಂತರ ವಿಧವೆಯರಿದ್ದಾರೆ. ಅವರಿಗೆಲ್ಲಾ ರಕ್ಷಕರಿದ್ದಾರೆಯೇ? ಹೇಗೋ ಕಾಲವು ಕಳೆದೇ ಹೋಗುವುದು. ನನ್ನ ಕಾಲವೂ ಹಾಗೆಯೇ ಕಳೆಯು ವುದು. ಮತ್ತೆಲ್ಲಿಯೂ ಆಶ್ರಯ ಸಿಕ್ಕದಿದ್ದರೆ ಗಂಗಾ ನದಿಯಂತೂ ಇದ್ದೇ ಇದೆ."

ಸುಮಿತ್ರೆಯು ಪುನಃ ಪೂರ್ಣಾಳ ನೊಂದ ಹೃದಯಕ್ಕೆ ಮತ್ತಷ್ಟು ವೇದನೆ ಯನ್ನುಂಟು ಮಾಡಿದಳು. ಮತ್ತಷ್ಟು ಮುಖ ಗಂಟುಹಾಕಿಕೊಂಡು ಹೇಳಿ ದಳು— "ನೀನು ಇಲ್ಲಿರುವುದು ನನಗೇಕೆ ಕೆಡುಕೆನಿಸಬೇಕು? ಸೋದರಿ! ನೀನೇನು ನನ್ನ ಎದೆ ಮೇಲೆ ಕುಳಿತಿದ್ದೀಯೋ? ನನ್ನ ಮನೆಯೂ ಅಲ್ಲ, ಲೇವಾದೇವಿಯ ಅಧಿಕಾರವಂತೂ ನನಗಿಲ್ಲ. ಹೀಗಿರುವಲ್ಲಿ ನಾನೇಕೆ ನಿನ್ನನ್ನು

ಕೆಟ್ಟವಳೆಂದು ತಿಳಿಯಲಿ? ಮನೆಯೆಲ್ಲಾ ಶಾಂತವಾಗಬೇಕಾದರೆ ನಾನೇ ಎಲ್ಲಿ ಯಾದರೂ ಮುಳುಗಿ ಸಾಯಬೇಕು. ನಾನೇ ವಿಷದ ಬೀಜ. ನನ್ನಿಂದಲೇ ಮನೆಯವರೆಲ್ಲಾ ಬೇಸತ್ತಿದ್ದಾರೆ. ನನ್ನ ಮೇಲೆಯೇ ಎಲ್ಲರಿಗೂ ಕಣ್ಣು."

ಪೂರ್ಣಾ ಈ ಮಾತುಗಳನ್ನು ಕೇಳಿದರೂ ಕೇಳಿಸದವಳಂತೆ ಇದ್ದು ಬಿಟ್ಟಳು. ಸ್ತ್ರೀಯರು ಗಂಡಂದಿರೊಡನೆ ಕೋಪಿಸಿಕೊಂಡಾಗ ಪ್ರಾಯಶಃ ಈ ರೀತಿಯ ವೈರಾಗ್ಯ ಪೂರ್ಣವಾದ ಮಾತುಗಳನ್ನು ಆಡುತ್ತಿರುತ್ತಾರೆ. ಇದೇನು ಹೊಸ ವಿಷಯವಲ್ಲ. ಅವಳು ತನಗೆ ಹೇಳಿಕೊಳ್ಳುವಂತೆ ಹೇಳಿದಳು— "ನನ್ನ ಗುಡಿಸಿಲಿನಿಂದ ಹೊರಗೆ ಹೊರಟರೆ ನನಗೆ ಕೆಡುಕಾಗುವುದೆಂದು ನನಗೆ ಗೊತ್ತಿತ್ತು. ತಿಳಿದೂ ತಿಳಿದೂ ವಿಪತ್ತಿಗೆ ಒಳಗಾದೆ. ನಾನು ಕಮಲಾಪ್ರಸಾದರ ಮಾತನ್ನು ಕೇಳಿದ್ದೇ ತಪ್ಪಾಯಿತು. ಲೋಕಾಪವಾದಕ್ಕೆ ಒಳಗಾಗ ಬೇಕೆಂದು ನನ್ನ ಹಣೆಯಲ್ಲಿ ಬರೆದಿತ್ತು."

ಸುಮಿತ್ರಾ ಉತ್ತೇಜಿತಳಾಗಿ ಹೇಳಿದಳು—"ಹಾಗಾದರೆ ಯಜಮಾನರು ನಿನಗೆ ಏನೂ ಹೇಳಲಿಲ್ಲವೆ ?"

ಅವಳು ತನ್ನ ಮಾತನ್ನೇನೋ ಮುಗಿಸಿದಳು; ಆದರೆ ಮುಖವಿನ್ಯಾಸ ದಿಂದ ಅವಳು ಮತ್ತೇನನ್ನೋ ಹೇಳಬೇಕೆಂದಿದ್ದಾಳೆ; ಆದರೆ ಯಾವುದೋ ಕಾರಣದಿಂದ ಹೇಳುತ್ತಿಲ್ಲವೆಂದು ಮನವರಿಕೆಯಾಗುತ್ತಿತ್ತು.

ಪೂರ್ಣಾ ಬಾಗಿಲ ಕಡೆಗೆ ಹೋಗುತ್ತಾ ಶುಷ್ಕ ಧ್ವನಿಯಲ್ಲಿ ಹೇಳಿದಳು— "ನನಗೆ ಕಮಲಾಪ್ರಸಾದರು ಹೇಗೋ ನೀನೂ ಹಾಗೆಯೆ."

ಸುಮಿತ್ರಾ :— "ಹಾಗಾದರೆ ಎಲ್ಲಿಗೆ ಹೋಗುತ್ತಿರುವೆ; ಸ್ವಲ್ಪ ಕುಳಿತುಕೋ."

ಪೂರ್ಣಾ:— "ಇಲ್ಲ ಅಕ್ಕ, ಕುಳಿತಿದ್ದಕ್ಕೆ ತಕ್ಕ ಫಲವನ್ನು ಪಡೆದೆ, ಈಗೇಕೆ ಆ ವಿಷಯ ಬಿಡು."

ಪೂರ್ಣಾ ಇತ್ತ ತನ್ನ ಕೊಠಡಿಗೆ ಬಂದು ಅಳಲಾರಂಭಿಸಿದಳು. ಅತ್ತ ಸುಮಿತ್ರಾ ಹಾರ್ಮೋನಿಯಂ ಬಾರಿಸುತ್ತಾ ಹಾಡಲಾರಂಭಿಸಿದಳು—

" ಊಧೋ ಸ್ವಾರಥಕಾ ಸನ್‌ಸಾರ್ "

ಇದು ಗೀತವೋ ಅಥವಾ ಪೂರ್ಣಾಳ ಮೇಲೆ ವಿಜಯ ಗಳಿಸಿದ ಆಹ್ಲಾದವೋ ಹೇಳುವುದು ಕಷ್ಟವಾಗಿತ್ತು. ಪೂರ್ಣಾಳಿಗೇನೋ ಅದು ವಿಜಯಗೀತ

ದಂತೆಯೇ ಭಾಸವಾಯಿತು. ಒಂದೊಂದು ಸ್ವರವೂ ಅವಳ ಹೃದಯಕ್ಕೆ ಒಂದೊಂದು ಬಾಣವಂತೆ ಚುಚ್ಚುತ್ತಿತ್ತು. ಈಗ ಈ ಮನೆಯಲ್ಲಿ ಅವಳು ನಿಭಾಯಿಸಿಕೊಂಡಿರಬಲ್ಲಳೆ? ಅಸಾಧ್ಯ! ಅವಳು ಎಂತಹ ಅಮಂಗಳ ಮುಹೂರ್ತದಲ್ಲಿ ಈ ಮನೆಗೆ ಕಾಲಿಟ್ಟಳೋ ತಿಳಿಯದು. ತನ್ನ ಆ ಗುಡಿಸಲಿನಲ್ಲಿಯೇ ಇದ್ದುಕೊಂಡು ಹೊಲಿಗೆ ಕೆಲಸ ಮಾಡಿಕೊಂಡು ಅಥವಾ ಅಕ್ಕಿ ರಾಗಿ ಬೀಸುವ ಕೆಲಸ ಮಾಡಿಕೊಂಡು ಅವಳು ತನ್ನ ಜೀವನ ನಿರ್ವಾಹಮಾಡಿಕೊಳ್ಳಲಾಗುತ್ತಿರಲಿಲ್ಲವೆ? ಅವಳ ದಾಸಿಯು ಅವಳಿಗೆ ಎಷ್ಟೋ ಸಲ ತಿಳುವಳಿಕೆ ಕೊಟ್ಟಿದ್ದಳು; ಆದರೆ ಈ ಅಪಮಾನವನ್ನು ಸಹಿಸಬೇಕೆಂದು ನನ್ನ ಹಣೆಯಲ್ಲಿ ಬರೆದಿರುವಾಗ ಅವಳು ಹೇಳಿದ ಮಾತುಗಳನ್ನು ನಾನು ಹೇಗೆ ತಾನೇ ಒಪ್ಪಿಕೊಳ್ಳಲಿ?"

ಈಗ ಪೂರ್ಣಾಳ ಮನಸ್ಸು ಒಂದು ಸಲ ಕಮಲಾಪ್ರಸಾದನೊಡನೆ ಮಾತನಾಡಲೆಳಸಿತು. ತಾನು ಈ ಮನೆಯಲ್ಲಿ ಇರಲಾರೆನೆಂದು ಅವಳು ಅವನಿಗೆ ಹೇಳಬೇಕೆಂದಿದ್ದಳು. ಅವನಿಗಲ್ಲದೆ ಅವಳು ಮತ್ತಾರಿಗೆ ಹೇಳಿಕೊಳ್ಳಬೇಕು? ಲಾಲಾ ಬದರೀಪ್ರಸಾದರು ನಕ್ಕು ಸುಮ್ಮನಾಗುವರು. ತಾಯಿಯವರು ಇವಳು ತನ್ನ ಸೊಸೆಗೆ ಪ್ರತಿಸ್ಪರ್ಧಿಯಾಗಿದ್ದಾಳೆಂದು ತಿಳಿಯುವರು. ಈಗಲೇ ಹೊರಟು ಹೋಗುವುದು ಕ್ಷೇಮ. ಎಲ್ಲಿಯಾದರೂ ಬೇರಾವ ಉಪದ್ರವವಾದರೂ ಒದಗಿದರೆ ಯಾರಿಗೂ ಮುಖ ತೋರಿಸದಂತಾಗುವುದು ನನ್ನ ಸ್ಥಿತಿ. ಸುಮಿತ್ರಾ ಎಷ್ಟು ಕಳಂಕವನ್ನು ಹೊರಿಸಿದರೂ ಎಲ್ಲರೂ ಅವಳ ಮಾತನ್ನೇ ನಂಬುವರು.

ಪೂರ್ಣಾ ರಾತ್ರೆಯಿಂದಲೇ ಒಂಟಿಯಾಗಿ ರಾತ್ರಿಯ ವೇಳೆ ಕಮಲಾ ಪ್ರಸಾದನ ಬಳಿ ಹೋಗಲು ಸಂಕೋಚಪಡುತ್ತಿದ್ದಳು. ಆ ಮನುಷ್ಯನಿಗೂ ಎಲ್ಲಿಯಾದರೂ ಆ ಸಮಯದಲ್ಲಿ ಚಲ್ಲಾಟ ಮಾಡಬೇಕೆಂಬ ಇಚ್ಛೆಯಾದರೆ ಗತಿಯೇನು? ಆದರೆ ಆ ಸೀರೆ ನನಗೆ ಚೆನ್ನಾಗಿ ಒಪ್ಪುತ್ತಿತ್ತು! ನಾನು ಅಲ್ಲಿಗೆ ಹೋಗಲೇ ಬಾರದಿತ್ತು; ಆದರೆ ಇನ್ನೊಂದು ಸಲ ಅವರನ್ನು ಭೇಟಿ ಮಾಡಲೇ ಬೇಕು. ನಾನು ಬಾಗಿಲ ಬಳಿ ನಿಂತುಕೊಂಡೇ ಮಾತನಾಡುವೆನು. ಕೊಠಡಿಯನ್ನು ಪ್ರವೇಶಿಸುವ ಅಗತ್ಯವಾದರೂ ಏನಿದೆ? ನಿಂತಲ್ಲಿಯೇ ಹೇಳುವೆನು— "ರಾಯರೇ, ಈಗ ನನಗೆ ಈ ಮನೆಯನ್ನು ಬಿಟ್ಟು ಹೋಗಲು ಅಪ್ಪಣೆ

ಕೊಡಿರಿ. ಮತ್ತೆಲ್ಲಿಯೂ ನನಗೆ ಸ್ಥಳ ಸಿಕ್ಕದಿದ್ದರೂ ಬಾಬೂ ಅಮೃತರಾಯರ ವಿಧವಾಶ್ರಮವಿದ್ದೇ ಇದೆ. ಹತ್ತಾರು ವಿಧವೆಯರು ಈಗಾಗಲೇ ಅಲ್ಲಿ ಸೇರಿದ್ದಾರೆ. ನಾನು ಅಲ್ಲಿಗೆ ಹೋಗುವುದರಲ್ಲಿ ಆತಂಕವೇನೂ ಇಲ್ಲ. ಅವರು ನನ್ನನ್ನು ಬಹಳ ಸಮಾಧಾನ ಮಾಡಬಹುದು. ಸುಮಿತ್ರೆಯನ್ನು ಗದರಿಸಿದರೂ ಗದರಿಸಬಹುದು; ಆದರೆ ಈ ಬೆದರಿಕೆಯಿಂದ ಪರಿಸ್ಥಿತಿ ಮತ್ತಷ್ಟು ಉಲ್ಬಣಿಸಬಹುದು. ವಿಧವಿಧವಾದ ಸಂಶಯಗಳು ಮನೆಯವರ ಮನಸ್ಸಿನಲ್ಲಿ ಉದಯವಾಗುವುವು. ಈಗ ಏನಿಲ್ಲವೆಂದರೂ ಜನರಿಗೆ ನನ್ನ ಮೇಲೆ ಕನಿಕರವಾದರೂ ಉಂಟಾಗುತ್ತದೆ; ಆಮೇಲೆ ನನ್ನ ವಿಷಯ ವಿಚಾರಿಸಿಕೊಳ್ಳುವವರೂ ಯಾರೂ ಇರಲಾರರು. ವಿಧವೆಯು ವ್ಯಭಿಚಾರಿಣಿಯಾಗಲು ಎಷ್ಟು ಸಮಯ ಬೇಕು?

ದಿನವೆಲ್ಲಾ ಪೂರ್ಣಾ ಬೇಸರದಿಂದ ಕುಳಿತೇ ಇದ್ದಳು. ಯಾವ ಕೆಲಸಕ್ಕೂ ಅವಳಿಗೆ ಉತ್ಸಾಹವಿರಲಿಲ್ಲ. ಇಷ್ಟವಿಲ್ಲದಿದ್ದರೂ ಊಟ ಮಾಡುವ ಶಾಸ್ತ್ರ ಮುಗಿಸಿದಳು. ಎಲ್ಲಿಯಾದರೂ ಸುಮಿತ್ರೆ ಊಟಮಾಡುವ ವೇಳೆ ಕಟು ವಾಕ್ಯಗಳನ್ನಾಡುವಳೋ ಎಂಬ ಭಯವೂ ಆಯಿತು. ಹಾಗೂ ಹೀಗೂ ಹಗಲು ಕಳೆಯಿತು, ರಾತ್ರಿಯಾಯಿತು. ಸುಮಿತ್ರೆಯು ಸಾಯಂಕಾಲವಾಗುತ್ತಲೇ ತನ್ನ ಕೋಣೆಯ ಬಾಗಿಲು ಮುಚ್ಚಿಕೊಂಡಳು. ಊಟ ಮಾಡಿ ಎಲ್ಲರೂ ಮಲಗಿ ನಿದ್ದೆ ಹೋದ ನಂತರ ಪೂರ್ಣಾ ಸದ್ದು ಮಾಡದೆ ಕಮಲಾ ಪ್ರಸಾದನ ಕಿರುಮನೆಯ ಬಾಗಿಲ ಬಳಿ ಹೋಗಿ ಮೆಲ್ಲನೆ ಕೂಗಿದಳು. ಕಮಲಾ ಇನ್ನೂ ಈಗ ತಾನೇ ಸಿನೆಮಾದಿಂದ ಹಿಂತಿರುಗಿ ಬಂದಿದ್ದನು. ಚಂಗನೆ ಹಾರಿ ಬಾಗಿಲು ತೆರೆದು ಹೇಳಿದನು— "ಒಳಗೆ ಬಾ ಪೂರ್ಣಾ, ನಿನ್ನನ್ನು ನೋಡಲು ನನ್ನ ಮನಸ್ಸು ತವಕಪಡುತ್ತಿತ್ತು."

ಪೂರ್ಣಾ ಬಾಗಿಲ ಬಳಿ ನಿಂತುಕೊಂಡೇ ಹೇಳಿದಳು— "ನಾನು ಅಲ್ಲಿಗೆ ಬರಬೇಕಾದ ಕೆಲಸವೇನೂ ಇಲ್ಲ. ನಾನು ನಿಮ್ಮಿಂದ ಬೀಳ್ಕೊಳ್ಳಲು ಬಂದಿದ್ದೇನೆ. ಈಗ ನಾನು ಈ ಮನೆಯಲ್ಲಿ ಒಂದು ಕ್ಷಣಕಾಲವೂ ಇರಲಾರೆ. ನಾನು ಮನುಷ್ಯಳೇ ಅಲ್ಲವೆ? ಎಲ್ಲಿಯವರೆಗೆ ಪರಾಶ್ರಯ ಮಾಡಲು ಸಾಧ್ಯ? ಯಾರ್ಯಾರನ್ನು ಸ್ತುತಿ ಮಾಡಿಕೊಂಡಿರಲಿ?"

ಕಮಲಾಪ್ರಸಾದನು ಬಾಗಿಲ ಬಳಿಗೆ ಬಂದು ಹೇಳಿದನು— "ಒಳಗಾದರೂ ಬಾ. ಕಪಾಳಕ್ಕೆ ಎರಡೇಟು ಕೊಟ್ಟು ಓಡಿಹೋಗುವವರಂತೆ ನೀನು

ನಿಂತಿರುವೆಯಲ್ಲ. ಸ್ವಲ್ಪ ಶಾಂತಳಾಗಿ ಕುಳಿತುಕೊಂಡರೆ, ವಿಷಯವೇನೆಂಬುದನ್ನು ನಿಧಾನವಾಗಿ ಕೇಳುವೆನು. ನಿನ್ನ ವಿಷಯದಲ್ಲಿ ಮಾತನಾಡುವ ಸಾಹಸ ಈ ಮನೆಯಲ್ಲಿ ಯಾರಿಗಿದೆ ? ಅಂತಹವರನ್ನು ಕೊಲೆ ಮಾಡುವೆನು; ಆದರೆ ಒಳಗೆ ಬಂದು ಕುಳಿತುಕೋ."

ಪೂರ್ಣಾ:— "ಇಲ್ಲ, ನಾನು ಒಳಗೆ ಬರಬೇಕಾದ್ದಿಲ್ಲ. ಏನೂ ಇಲ್ಲದೆಯೇ ಅಪಮಾನವನ್ನು ಸಹಿಸಬೇಕಾಗಿದೆ. ಇನ್ನೂ ಏನೇನು ಕಳಂಕಕ್ಕೆ ಗುರಿಯಾಗಬೇಕಾಗಿದೆಯೋ ನಾನರಿಯೆ."

ಕಮಲಾಪ್ರಸಾದನು ಹುಬ್ಬುಗಂಟಿಕ್ಕಿಕೊಂಡು ಹೇಳಿದನು— "ನಿನ್ನನ್ನು ಹೀಯಾಳಿಸಿದವರಾರು ? ಸುಮಿತ್ರೆಯೆ ?"

ಪೂರ್ಣಾ:— "ಯಾರೇ ಹೀಯಾಳಿಸಿರಲಿ, ಆ ವಿಷಯವನ್ನು ತಾವು ಕೇಳುವುದೂ ನಾನು ಹೇಳುವುದೂ—ಎರಡೂ ವ್ಯರ್ಥ. ನಿಂದೆಗೆ ಗುರಿಯಾಗುವ ವಿಷಯವಾದರೆ ಎಲ್ಲರೂ ನಿಂದಿಸುವರು. ತಾವು ಯಾರ ಬಾಯನ್ನೂ ಮುಚ್ಚಲಾರಿರಿ. ಬಾಳೆಯ ಗಿಡಕ್ಕೆ ಒಂದು ಮಣ್ಣು ಹೆಂಟೆಯೂ ಕೂಡ ಹರಿತವಾದ ಚೂರಿಯಾಗಬಲ್ಲುದು. ನಾನು ಇಲ್ಲಿಂದ ಹೊರಟು ಹೋಗುವುದೇ ಸರ್ವ ಶ್ರೇಷ್ಠವಾದುದು. ತಾವುಗಳು ಇಷ್ಟು ದಿನಗಳ ವರೆಗೆ ನನ್ನನ್ನು ಕಾಪಾಡಿದಿರಿ. ಇದಕ್ಕಾಗಿ ನನ್ನ ಪ್ರತಿಯೊಂದು ರೋಮವೂ ತಮ್ಮಗಳ ಗುಣಗಾನ ಮಾಡುವುದು."

"ಎಲ್ಲಿಗೆ ಹೋಗಬೇಕೆಂದಿರುವೆ ?"

"ಎಲ್ಲಿಯಾದರೂ ಆಶ್ರಯ ದೊರೆತೇ ದೊರೆಯುವುದು. ಏನೂ ಸಾಧ್ಯವಾಗದಿದ್ದರೆ, ಗಂಗಾನದಿ ಇದ್ದೇ ಇದೆ."

"ಹಾಗಾದರೆ ಮೊದಲು ನನಗೆ ಸ್ವಲ್ಪ ಪಾಷಾಣ ಕೊಟ್ಟು ಹೋಗು."

ಪೂರ್ಣಾ ತಿರಸ್ಕಾರಭಾವದಿಂದ ನೋಡುತ್ತಾ ಹೇಳಿದಳು— "ಧಣಿಗಳೇ, ಎಂತಹ ಮಾತುಗಳನ್ನಾಡುತ್ತಿರುವಿರಿ ? ತಮ್ಮಗಳ ಸೇವೆಗಾಗಿ ನನ್ನ ಪ್ರಾಣಾರ್ಪಣ ಮಾಡುವ ಅವಕಾಶವಿದ್ದರೆ, ನನಗೆ ಹಾಗೆ ಮಾಡುವುದರಿಂದ ಆನಂದ ಉಂಟಾಗುವುದು. ಆದರೆ ವಿಷಯ ಬೆಳೆಯುತ್ತಾ ಹೋಗುವುದು. ಮುಂದೆ ಯಾವ ರೂಪ ತಾಳುವುದೋ ತಿಳಿಯದಾಗಿದೆ. ಇದರಿಂದ ನಾನು ಇಲ್ಲಿಂದ ಹೊರಟು ಹೋಗುವುದೇ ಮೇಲು."

ಕಮಲಾಪ್ರಸಾದನು ಪೂರ್ಣಾಳ ಕೈ ಹಿಡಿದುಕೊಂಡು ಬಲಪೂರ್ವಕ ವಾಗಿ ಒಳಕ್ಕೆ ಎಳೆದುಕೊಂಡನು ಮತ್ತು ಬಾಗಿಲನ್ನು ಮುಚ್ಚುತ್ತಾ ಹೇಳಿದನು —"ಏನು ಹೇಳಬೇಕೆಂದಿರುವೆಯೋ ಈಗ ಹೇಳು. ಸುಮಿತ್ರೆಯೇನಾದರೂ ನಿನ್ನನ್ನು ಜರಿದಳೆ ?"

ಪೂರ್ಣಾ ಬಾಗಿಲನ್ನು ಭದ್ರವಾಗಿ ಹಿಡಿದುಕೊಂಡು ಹೇಳಿದಳು— "ಬಾಗಿಲು ತೆರೆದರೆ ನಾನೆಲ್ಲವನ್ನೂ ತಿಳಿಸುವೆನು. ವ್ಯರ್ಥವಾಗಿ ನನ್ನ ಜೀವನ ವನ್ನೇಕೆ ಹಾಳು ಮಾಡುತ್ತಿರುವಿರಿ ?"

"ತೆರೆಯುವೆನ್ನು, ಇಷ್ಟೇಕೆ ಅವಸರ? ನೀನೇನು ನೀರಿನಲ್ಲಿ ನೆನೆಯು ತ್ತಿಲ್ಲ ಅಥವಾ ನಾನೇನು ಗುಮ್ಮನಲ್ಲ. ಸುಮಿತ್ರೆಯೇನಾದರೂ ನಿನ್ನನ್ನು ತಿರ ಸ್ಕರಿಸಿದ್ದರೆ, ನಾಳೆಯೇ ಅವಳನ್ನು ಮನೆಬಿಟ್ಟು ಕಳುಹಿಸಿಬಿಡುವೆ ಮತ್ತು ಎಂದೆಂ ದಿಗೂ ಅವಳ ಮುಖದರ್ಶನ ಕೂಡ ಮಾಡುವುದಿಲ್ಲ. ಈ ಮಾತನ್ನು ನಾನು ದೇವರ ಮೇಲೆ ಆಣೆ ಇಟ್ಟು ಹೇಳುತ್ತಿರುವೆ. ನೋಡು ಪೂರ್ಣಾ, ನೀನು ಬಾಗಿಲ ತೆರೆದರೆ ಮುಂದೆ ಪಶ್ಚಾತ್ತಾಪ ಪಡಬೇಕಾಗುವುದು. ಚಾಕುವಿನಿಂದ ಎದೆಗೆ ಇರಿದುಕೊಂಡು ಪ್ರಾಣತ್ಯಾಗ ಮಾಡುವೆ.

ನಾನು ಮೊಟ್ಟಮೊದಲು ನಿನ್ನನ್ನು ನೋಡಿದ ಮೇಲೆ ಆರು ತಿಂಗಳು ಕಳೆದುಹೋದುವು. ಅಂದಿನಿಂದ ನನ್ನ ಮನಸ್ಸಿನ ಸ್ಥಿತಿ ಹೇಗಾಗುತ್ತಿದೆಯೆಂ ಬುದನ್ನು ನೀನರಿಯೆ. ಇಷ್ಟು ದಿನಗಳವರಿವಿಗೂ ಹಾಗೂ ಹೀಗೂ ಸಹಿಸಿ ಕೊಂಡೆ; ಆದರೆ ಇನ್ನು ಸಹಿಸಲು ಸಾಧ್ಯವಿಲ್ಲ. ಸರಿ, ಯಾವಾಗ ನಿನ್ನ ದರ್ಶನವಾಗುತ್ತಿತ್ತೋ, ಅದರಿಂದ ನನ್ನ ಮನಸ್ಸಿಗೆ ಎಷ್ಟೋ ಸಮಾಧಾನವಾ ಗುತ್ತಿತ್ತು. ಈಗ ನೀನು ಇಲ್ಲಿಂದ ಹೊರಡುವ ಮಾತನಾಡುತ್ತಿರುವೆ. ನೀನು ಇಲ್ಲಿಂದ ಹೋಗುವುದು ನನ್ನ ದೇಹದಿಂದ ಜೀವ ಹೋದಂತೆ. ನಿನ್ನನ್ನು ತಡೆ ಯುವ ಶಕ್ತಿ ನನ್ನಲ್ಲಿಲ್ಲ. ನಿನ್ನನ್ನು ತಡೆಯುವ ಅಧಿಕಾರವೂ ನನಗಿಲ್ಲ. ಪ್ರಪಂ ಚವು ವಿವಾಹದ ಸೋಗಿನಲ್ಲಿ ಹದಿನಾರಾಣೆ ಅಧಿಕಾರ ನೀಡುತ್ತದೆ. ಆದರೆ ಪರಮಾತ್ಮನ ನೈಜಸ್ವರೂಪವಾದ ಪ್ರೇಮಕ್ಕೆ ಲವಲೇಶವೂ ಅಧಿಕಾರವೀಯುವು ದಿಲ್ಲ. ಹೋಗು, ಆದರೆ ಕಮಲಾಪ್ರಸಾದನು ಈ ಪ್ರಪಂಚದಿಂದ ಯಾತ್ರೆ ಬೆಳೆ ಸಿದನೆಂಬ ವಾರ್ತೆಯನ್ನು ನಾಳೆಯೇ ಕೇಳುವೆ."

ಪೂರ್ಣಾಳ ನಿಷ್ಕಪಟ ಹೃದಯವು ಈ ಪ್ರೇಮಪ್ರದರ್ಶನದಿಂದ ಭಯಂಕರ

ವಾದ ಪೇಜಾಟಕ್ಕೆ ಸಿಲುಕಿತು. ಅವಳ ಒಂದು ಕೈ ಬಾಗಿಲಿನ ಅಗುಳಿಯ ಮೇಲಿತ್ತು. ಅದು ತಾನಾಗಿಯೇ ಅಗುಳಿಯ ಮೇಲಿಂದ ಹಿಂದಕ್ಕೆ ಸರಿಯಿತು. ಅವಳು ತಾನಾಗಿಯೇ ಒಂದು ಹೆಜ್ಜೆ ಮುಂದೆ ಬಂದಳು. ತಿಳಿಯದೆಯೇ ಯಾವನಾದರೂ ಬಾಲಕನ ಕಾಲನ್ನು ತುಳಿದ ಮನುಷ್ಯನ ಸ್ಥಿತಿಯಂತಿತ್ತು ಅವಳ ಆಗಿನ ಸ್ಥಿತಿ; ಮತ್ತು ಯಾವನು ಬಾಲಕನು ವೇದನೆಯಿಂದ ಒದ್ದಾಡು ವುದನ್ನು ನೋಡಿ, ಬೇಗ ಓಡಿ ಬಂದು ಅವನನ್ನು ಎತ್ತಿ ಸಮಾಧಾನಪಡಿಸು ವನೋ ಅವನ ಸ್ಥಿತಿಗೆ ಸಮಾನವಾಗಿತ್ತು ಅವಳ ಮನೋಭಾವನೆ. ಕಮಲಾ ಪ್ರಸಾದನು ಸೀರೆಯನ್ನು ತಂದ ದಿನದಿಂದ ಪೂರ್ಣಾಳಿಗೆ ಸ್ವಲ್ಪ ಅನುಮಾನ ವಾಗಿತ್ತು; ಆದರೆ ಅವಳು ಅದನ್ನು ಪುರುಷರ ವಿನೋದವೆಂದು ತಿಳಿದುಕೊಂಡಿ ದ್ದಳು. ಹೀಗಿದ್ದುದರಿಂದ ಈ ವೇಳೆಯಲ್ಲಿ ಈ ಪ್ರೇಮಾಲಾಪವನ್ನು ಕೇಳಿ ಭಯಭ್ರಾಂತಳಾದಳು. ಗಾಬರಿಗೊಂಡ ಧ್ವನಿಯಲ್ಲಿ ನುಡಿದಳು—"ಧಣಿಗಳೇ, ಇಂತಹ ವಾಕ್ಯಗಳನ್ನು ನುಡಿಯಬೇಡಿರಿ. ಇಹಪರಗಳೆರಡರಲ್ಲಿಯೂ ನನ್ನನ್ನು ಹಾಳು ಮಾಡದಿರಿ. ನಾನೇನು ಸಾಯಲು ಹೋಗುತ್ತಿರುವೆನೆ? ಎಲ್ಲಿಯಾ ದರೂ ಜೀವಿಸಿರುವೆನು. ಆಗಾಗ್ಗೆ ಬರುತ್ತಿರುವೆನು. ಆದರೆ ಈಗ ನನ್ನನ್ನು ಸುಮ್ಮನೆ ಹೋಗಗೊಡಿರಿ. ನನಗೆ ಕಳಂಕವುಂಟಾದರೆ ನಿಮಗೆ ದುಃಖವಾಗು ವುದಿಲ್ಲವೆ?"

ಕಮಲಾಪ್ರಸಾದ:— "ಪೂರ್ಣಾ, ಕೀರ್ತಿ, ಅಪಕೀರ್ತಿಗಳೆರಡೂ ಬೂಟಾಟಿಕೆಗಳು. ಪ್ರೇಮ ಪರಮಾತ್ಮನ ಪ್ರೇರಣೆ. ಅದನ್ನು ಸ್ವೀಕರಿಸುವುದು ಪಾಪವಲ್ಲ, ಅದನ್ನು ತಿರಸ್ಕರಿಸುವುದು ಪಾಪ. ನನಗೆ ಪರಮಾತ್ಮನು ಅಪರಿ ಮಿತವಾದ ಐಶ್ವರ್ಯವನ್ನು ಕೊಟ್ಟಿದ್ದಾನೆ, ಅತ್ಯಂತ ರೂಪವತಿಯರಾದ ಸ್ತ್ರೀ-ಯರನ್ನು ನಿತ್ಯವೂ ನೋಡುತ್ತಿರುತ್ತೇನೆ. ಧನಬಲದಿಂದ ಯಾವಳನ್ನಾದರೂ ನನ್ನ ವಶಪಡಿಸಿಕೊಳ್ಳಬಲ್ಲೆನು. ಆದರೆ ಇಂದಿನವರೆಗೆ ಯಾರನ್ನೂ ಕಣ್ಣೆತ್ತಿ ಕೂಡ ನೋಡಿಲ್ಲ. ಈ ವಿಷಯವನ್ನು ಭಗವಂತನ ಮೇಲೆ ಆಣೆ ಇಟ್ಟು ಹೇಳು ತ್ತೇನೆ. ನನ್ನ ಗೆಳೆಯರು ನನ್ನನ್ನು ವೃದ್ಧ ಸಾಧುವೆಂದು ಕರೆಯುತ್ತಿರುತ್ತಾರೆ. ಸುಮಿತ್ರಾ ನನ್ನ ಮನೆಗೆ ಬಂದು ಮೂರು ವರ್ಷಗಳಾದುವು. ಆದರೆ ನಾನು ಅವಳನ್ನು ಎಂದೂ ಪ್ರೇಮದೃಷ್ಟಿಯಿಂದ ನೋಡಲಿಲ್ಲ. ಆದರೆ ನಿನ್ನನ್ನು ನೋಡಿದ ಕೂಡಲೇ ನನ್ನ ಕಣ್ಣುಮುಂದಿನ ಪರದೆಯು ಹಿಂದಕ್ಕೆ ಸರಿದಂತಾ

ಯಿತು. ನೀನು ನನ್ನ ಹೃದಯ ಮಂದಿರದಲ್ಲಿ ಬಹಳ ದಿನಗಳಿಂದ ನೆಲಿಸಿರುವಂತೆ ಭಾಸವಾಯಿತು. ಆದರೆ ಅಜ್ಞಾನದ ಕಾರಣದಿಂದ ನಾನು ಈ ವೇದನೆಯ ರಹಸ್ಯವನ್ನು ಅರಿಯದವನಾದೆ. ಸರಿ, ನನಗೆ ಯಾವುದೋ ಅಜ್ಞಾತ ವಿಷಯವು ಜ್ಞಾಪಕಕ್ಕೆ ಬಂದಂತಾಯಿತು. ನಿನ್ನನ್ನು ಮರೆತು ಬಿಡಬೇಕು; ಮನವನ್ನು ಬೇರೆ ಕಡೆಗೆ ಸರಿಸಬೇಕೆಂದು ಈಗ ಎಷ್ಟೋ ಪ್ರಯತ್ನಿಸುತ್ತಿದ್ದೇನೆ; ಆದರೆ ಅದು ನನ್ನ ಶಕ್ತಿಗೆ ಮೀರಿದ್ದೆಂಬ ಅನುಭವವಾಗುತ್ತಿದೆ. ನನ್ನ ಜೀವನವು ನಿನ್ನ ದಯೆಯನ್ನವಲಂಬಿಸಿದೆಯೆಂದು ತಿಳಿ."

ಹೀಗೆ ಹೇಳುತ್ತಾ ಹೇಳುತ್ತಾ ಕಮಲಾಪ್ರಸಾದನ ಗಂಟಲು ಬಿಗಿದು ಬಂದಿತು. ಅವನು ಕರವಸ್ತ್ರದಿಂದ ಕಂಬನಿಗಳನ್ನು ಒರಸಿಕೊಂಡನು.

ಪೂರ್ಣಾ ಕಲ್ಲಿನ ಮೂರ್ತಿಯಂತೆ ಅಲುಗದೆ ನಿಂತಿದ್ದಳು. ಅವಳ ಸಮಸ್ತ ಬುದ್ಧಿ, ಚೇತನ ಮತ್ತು ಆತ್ಮವು ಉಕ್ಕಿಬರುತ್ತಿರುವ ಅಲೆಗಳಿಗೆ ಸಿಕ್ಕಿ ಕೊಚ್ಚಿಕೊಂಡು ಹೋಗುತ್ತಿರುವಂತೆ ಕಾಣುತ್ತಿತ್ತು; ಆದರೆ ಯಾರೂ ಅವಳ ಆರ್ತನಾದಕ್ಕೆ ಕಿವಿಗೊಡುವವರು ಇದ್ದಂತೆ ಕಾಣಿಸಲಿಲ್ಲ. ಮನುಷ್ಯ, ಪಶು ಪಕ್ಷಿ, ದಡದ ಮೇಲಿನ ವೃಕ್ಷಗಳು ಮತ್ತು ಮನೆಗಳೆಲ್ಲವೂ ಅವಳ ಸಮೀಪದಿಂದ ಬಹು ದೂರಕ್ಕೆ ಓಡಿಹೋಗುತ್ತಿರುವಂತೆ ಕಾಣಿಸಿದುವು. ಅವಳಿಗೆ ನಿಂತುಕೊಂಡಿರಲು ಸಾಧ್ಯವಾಗಲಿಲ್ಲ. ನೆಲದ ಮೇಲೆ ಕುಳಿತುಕೊಂಡು ಒಮ್ಮೆ ನಿಟ್ಟುಸಿರು ಬಿಟ್ಟಳು. ಮತ್ತು ಹಾಗೆಯೇ ಗಳಗಳನೆ ಅಳಲಾರಂಭಿಸಿದಳು.

ಕಮಲಾಪ್ರಸಾದನು ಸಮೀಪಕ್ಕೆ ಬಂದು ಅವಳ ಕೈ ಹಿಡಿದುಕೊಂಡು ಗಂಟಲನ್ನು ಸರಿಪಡಿಸಿಕೊಂಡು ಹೇಳಿದನು— "ಪೂರ್ಣಾ, ನಿನಗಿರುವ ಂಕಟವು ನನಗೆ ಗೊತ್ತು. ಆದರೆ ನೀನೇ ಯೋಚಿಸು, ಒಂದು ಜೀವನದ ಮೂಲ್ಯವು ಒಂದು ಪೂರ್ವ ಸ್ಮೃತಿಗೂ ಸಮಾನವಾಗಲಾರದೆ? ನಾನು ನಿನ್ನ ಪತಿಭಕ್ತಿಯ ಆದರ್ಶವನ್ನು ತಿಳಿದುಕೊಳ್ಳಬಲ್ಲೆ. ನಿನಗೆ ನಿನ್ನ ಸ್ವಾಮಿಯಲ್ಲಿ ಎಷ್ಟೊಂದು ಪ್ರೇಮವಿತ್ತು—ಇದನ್ನೂ ನಾನು ನೋಡಿಯೇ ಇದ್ದೇನೆ. ಆಗಾಗ್ಗೆ ಪಾರ್ಕಿನಲ್ಲಿ ಹಸುರು ಹುಲ್ಲಿನ ಮೇಲೆ ಮಲಗಿಕೊಂಡು ಅವನು ನಿನ್ನ ಗುಣಗಾನ ಮಾಡುತ್ತಿದ್ದನು. ಅದನ್ನು ಕೇಳಿ ಕೇಳಿ ಅವನ ಭಾಗ್ಯವನ್ನು ಕೊಂಡಾಡುತ್ತಿದ್ದೆನು ಮತ್ತು ಒಮ್ಮೆ ನೀನು ನನಗೆ ಭೇಟಿಯಾದರೆ ನಿನ್ನ ಪಾದಗಳ ಮೇಲೆ ನನ್ನ ತಲೆಯನ್ನಿಟ್ಟು ಅಳಬೇಕೆಂದು ಇಚ್ಛೆಯಾಗುತ್ತಿತ್ತು. ದಿನೇ ದಿನೇ

ಸುಮಿತ್ರಾಳ ವಿಷಯದಲ್ಲಿ ತಿರಸ್ಕಾರವು ಹೆಚ್ಚುತ್ತಾ ಹೋಗುತ್ತಿತ್ತು. ಅವಳ ಬಿತ್ತಿದ ಬೀಜವೇ ಇಂದು ಮೊಳಕೆಯಾಗಿ, ಪಲ್ಲವಿಸಿ ಗಡಿಬಿಡಿಯನ್ನೆಬ್ಬಿಸಿದೆ."

ಪೂರ್ಣಾ ಬಿಕ್ಕಿ ಬಿಕ್ಕಿ ಅಳುತ್ತಾ ಹೇಳಿದಳು— "ಬಾಬೂಜಿ, ನಿಮ್ಮ ಕಾಲಿಗೆ ಬೀಳುತ್ತೇನೆ, ನನಗೆ ಹೋಗಲು ಅಪ್ಪಣೆ ಕೊಡಿ. ನನ್ನ ಮನಸ್ಸು ಇಷ್ಟೇಕೆ ಗಾಬರಿಗೊಳ್ಳುತ್ತಿದೆಯೋ ನಾನರಿಯೆ."

ಕಮಲಾಪ್ರಸಾದನು ತಲೆ ಬಡೆದುಕೊಂಡು ಹೇಳಿದನು— "ಅಯ್ಯೋ, ಪುನಃ ಅದೇ ಮಾತು! ಸರಿ, ಹಾಗಾದರೆ ನೀನು ಹೋಗು. ಈಗ ಇನ್ನೊಮ್ಮೆ ಯಾದರೂ ಕುಳಿತುಕೊಳ್ಳಲು ಹೇಳುವುದಿಲ್ಲ."

ಪೂರ್ಣಾ ಪೂರ್ವವತ್ ಕುಳಿತೇ ಇದ್ದಳು. ಅವಳಿಗೆ ಯಾವುದೋ ಭಯಂಕರ ಪರಿಣಾಮವುಂಟಾಗಬಹುದೆಂಬ ಸಂಶಯವಾಗುತ್ತಿತ್ತು.

ಕಮಲಾಪ್ರಸಾದನು ಹೇಳಿದನು— "ಈಗೇಕೆ ಹೋಗುವುದಿಲ್ಲ? ನಾನೇನು ನಿನ್ನನ್ನು ಕಟ್ಟಿಹಾಕಿಕೊಂಡಿಲ್ಲವಲ್ಲ!?

ಪೂರ್ಣಾ ಕಮಲಾಪ್ರಸಾದನ ಕಡೆಗೆ ಕಾತರ ದೃಷ್ಟಿಯಿಂದ ನೋಡಿ ತಲೆ ಬಗ್ಗಿಸಿಕೊಂಡು ನುಡಿದಳು— "ನಿಮ್ಮ ಪ್ರಾಣರಕ್ಷಣೆ ಮಾಡಿಕೊಳ್ಳುವಿರೆಂದು ಮಾತು ಕೊಡುವಿರೋ?"

ಕಮಲಾಪ್ರಸಾದನು ಉದಾಸೀನನಾಗಿಯೇ ಹೇಳಿದನು— "ನನ್ನ ಪ್ರಾಣದ ಚಿಂತೆ ನಿನಗೇಕೆ? ಯಾವ ರೀತಿಯಲ್ಲಿ ನಿನ್ನ ಮೇಲೆ ನನಗೆ ಯಾವ ಅಧಿಕಾರವೂ ಇಲ್ಲವೋ ಅದೇ ರೀತಿ ನನ್ನ ಮೇಲೆಯೂ ನಿನ್ನ ಯಾವ ಅಧಿಕಾರವೂ ಇಲ್ಲ. ಸಾಧ್ಯವಾದರೆ ನಿನ್ನನ್ನು ಮರೆಯುವೆನು, ಇಲ್ಲವೇ ಆತ್ಮಹತ್ಯ ಮಾಡಿಕೊಳ್ಳುವೆನು. ಆದರೆ ಇದರಿಂದ ನಿನಗಾಗುವ ಹಾನಿ ಲಾಭಗಳೇನು? ಮನಸ್ಸಾದರೆ ಸ್ವಲ್ಪ ದುಃಖಿಸುವುದು, ಇಲ್ಲವಾದರೆ ಅದೂ ಬೇಡ. ನಿನ್ನಲ್ಲಿ ಮೊರೆಯಿಡಲು ನಾನು ಬರುವುದಿಲ್ಲ."

ಪೂರ್ಣಾ ನಸುನಗಲು ಪ್ರಯತ್ನಿಸುತ್ತಾ ನುಡಿದಳು— "ಈ ರೀತಿಯಲ್ಲಾದರೆ, ನಾನು ಖಂಡಿತ ಹೋಗುವುದಿಲ್ಲ."

ಕಮಲಾ:— "ನೀನು ನನ್ನನ್ನು ಬದುಕಲೂ ಬಿಡುವುದಿಲ್ಲ, ಸಾಯಲೂ ಬಿಡುವುದಿಲ್ಲವೆಂಬುದು ಇದರ ಆಶಯವಷ್ಟೆ? ನಾನು ಯಾವಾಗಲೂ ಒದ್ದಾತ್ತಿರಬೇಕೆಂಬುದು ನಿನ್ನ ಇಷ್ಟವೇ? ಈ ಸ್ಥಿತಿಯನ್ನು ಸಹಿಸಿಕೊಂಡಿರಲು

ನನಗೆ ಸಾಧ್ಯವಿಲ್ಲ. ನೀನು ಹೋಗಿ ಸುಖವಾಗಿ ಮಲಗಿಕೋ ಮತ್ತು ನನ್ನ ಚಿಂತೆಯನ್ನು ಬಿಟ್ಟು ಬಿಡು. ಆದರೆ ಇಲ್ಲ, ಇಲ್ಲ, ಇದು ನನ್ನ ಅಜ್ಞಾನ. ನೀನು ನನ್ನ ಪ್ರಾಣಭಯದಿಂದ ನನ್ನಿಂದ ಈ ಪ್ರತಿಜ್ಞೆ ಮಾಡಿಸುತ್ತಿರುವೆ. ಇದು ಯಾಚಕನಿಗೆ ಮೃದು ನುಡಿಗಳಿಂದ ಉತ್ತರ ಕೊಡುವ ಒಂದು ಕ್ರಮ. ಹೌದು, ನೀನು ನನ್ನ ಸಂರಕ್ಷಣೆ ಮಾಡುತ್ತಿರುವಂತೆಯೇ ನಾನು ನನ್ನ ಪ್ರಾಣ ರಕ್ಷಣೆ ಮಾಡಿಕೊಳ್ಳುತ್ತಿರುವೆನೆಂದು ಪ್ರತಿಜ್ಞೆ ಮಾಡುತ್ತೇನೆ."

"ಈ ಪ್ರತಿಜ್ಞೆಯನ್ನು ನಾನು ಒಪ್ಪುವುದಿಲ್ಲ. ನಿಜವಾದ ಪ್ರತಿಜ್ಞೆ

"ಹಾಗಾದರೆ ಪ್ರಿಯೆ, ಕಮಲಾಪ್ರಸಾದನು ವಿರಹ ವೇದನೆಯನ್ನು ಸಹಿಸಲು ಜೀವಿಸಿರಲಾರನೆಂದು ನಿನ್ನ ಸೆರಗಿನಲ್ಲಿ ಗಂಟುಹಾಕಿ ಇಟ್ಟುಕೋ."

ಪೂರ್ಣಾ ಕರುಣಾವ್ಯಂಜಕ ಧ್ವನಿಯಲ್ಲಿ ಹೇಳಿದಳು— "ಬಾಬೂಜಿಯವರೆ, ನೀವು ನನ್ನನ್ನು ದೊಡ್ಡ ಸಂಕಟಕ್ಕೆ ಸಿಕ್ಕಿಸಿದಿರಿ. ನೀವು ನನ್ನನ್ನು ಮಾಯಾಜಾಲಕ್ಕೆ ಸಿಕ್ಕಿಸಿ ನನ್ನ ಸರ್ವಸ್ವವನ್ನು ನಾಶಮಾಡಲು ಸಿದ್ಧರಾಗಿರುವಿರಿ. ನನ್ನ ಕರ್ತವ್ಯ ಜ್ಞಾನವು ಕ್ರಮೇಣ ಕಡಿಮೆಯಾಗುತ್ತಿದೆ. ನೀವು ನನ್ನನ್ನು ಮೋಹಿನೀ ಮಂತ್ರದಿಂದ ಕಟ್ಟಿ ಹಾಕುತ್ತಿರುವಿರಿ."

ಕಮಲಾಪ್ರಸಾದನು ಆವೇಶಗೊಂಡು ಹೇಳಿದನು— "ಸರಿ, ಈಗ ಸುಮ್ಮನಿರು ಪೂರ್ಣಾ. ಇಂತಹ ಮಾತುಗಳಿಂದ ನನಗೆ ಮಾನಸಿಕ ತಾಪವು ಅಧಿಕವಾಗುತ್ತಿದೆ. ನೀಚ ವಾಸನಾತೃಪ್ತಿಗೋಸ್ಕರವೇ ನಾನು ನಿನ್ನನ್ನು ಮಾಯಾಜಾಲದಲ್ಲಿ ಸಿಕ್ಕಿಸುತ್ತಿರುವೆನೆಂದು ನೀನು ತಿಳಿದಿರಬಹುದು. ಇದು ನೀನು ನನಗೆ ಮಾಡುತ್ತಿರುವ ಘೋರ ಅನ್ಯಾಯ. ಇದು ಮಾಯಾಜಾಲವಲ್ಲ, ಶುದ್ಧವಾದ ಆತ್ಮಸಮರ್ಪಣವೆಂಬುದನ್ನು ನಿನಗೆ ನಂಬಿಗೆಯಾಗುವಂತೆ ಹೇಗೆ ತಿಳಿಸಲಿ? ಇದಕ್ಕೆ ಆಧಾರ ಬೇಕಾಗಿದ್ದರೆ, ಇದೋ ತೆಗೆದುಕೋ—"

ಹೀಗೆ ಹೇಳಿ ಕಮಲಾಪ್ರಸಾದನು ಗೂಟದ ಮೇಲೆ ತೂಗಾಡುತ್ತಿದ್ದ ಕತ್ತಿಯನ್ನು ತೆಗೆದುಕೊಂಡು ಹೇಳಿದನು— "ಹೆಣವು ನಿನ್ನ ಮುಂದೆ ಒದ್ದಾಡುತ್ತಿರುವುದನ್ನು ನೋಡಿ, ನೈಜ ಪ್ರೇಮವಿತ್ತೋ ಅಥವಾ ಮಾಯಾಜಾಲವೋ ಎಂಬುದನ್ನು ನಿಶ್ಚಯಿಸಿಕೊ."

ಪೂರ್ಣಾ ಒಂದು ಕ್ಷಣ ಕಾಲ ಧೈರ್ಯದಿಂದ ಕುಳಿತಿದ್ದರೆ, ಅವಳಿಗೆ ಅವಶ್ಯವಾಗಿಯೂ ಇದಕ್ಕೆ ತಕ್ಕ ಪ್ರಮಾಣ ದೊರೆಯುತ್ತಿತ್ತು; ಆದರೆ ಅವಳ ಸ್ತ್ರೀಹೃದಯವು ತಳಮಳಗುಟ್ಟಿತು. ಈ ವಿಷಯವನ್ನು ತಿಳಿದೇ ಕಮಲಾ ಪ್ರಸಾದನು ಈ ನಾಟಕವನ್ನು ಹೂಡಿದ್ದನು. ಪೂರ್ಣಾ ಕತ್ತಿಯನ್ನು ಅವನ ಕೈಯಿಂದ ಕಿತ್ತುಕೊಂಡು ಹೇಳಿದಳು— "ನಾನು ನಿಮ್ಮಿಂದ ಯಾವ ಪ್ರಮಾಣ ವನ್ನೂ ಕೇಳುತ್ತಿಲ್ಲ."

"ಹಾಗಾದರೆ ನೀನು ಮಾಯಾಜಾಲವೆಂದು ಹೇಳಿದುದೇಕೆ ?"

"ಅಪರಾಧವಾಯಿತು, ಕ್ಷಮಿಸಿರಿ."

"ನಿನಗೇನಾದರೂ ಈಗಲೂ ಸಂಶಯವಿದ್ದರೆ ಅದನ್ನು ನಿವಾರಿಸಲು ನಾನು ಸಿದ್ಧನಿದ್ದೇನೆ. ತನ್ನ ನೈಜಪ್ರೇಮದ ಸತ್ಯತೆಯನ್ನು ಸ್ಪಷ್ಟಪಡಿಸಲು ನಿನ್ನ ಎದು ರಿಗೆ ಪ್ರಾಣಬಲಿಯನ್ನು ಕೊಡುವುದಕ್ಕಿಂತ ಉತ್ತಮವಾದ ಮೃತ್ಯುವು ನನಗೆ ಬೇರೆ ದೊರಕಲಾರದು."

ಪೂರ್ಣಾ ಕತ್ತಿಯನ್ನು ಒರೆಯಲ್ಲಿಡುತ್ತಾ ಹೇಳಿದಳು— "ನೀವು ಇದೇ ಕತ್ತಿಯಿಂದ ನನ್ನ ಜೀವನವನ್ನು ಸಮಾಪ್ತಿಗೊಳಿಸಿದ್ದರೆ ಎಷ್ಟು ಚೆನ್ನಾಗಿರು ತ್ತಿತ್ತು ? ನಾನು ಕಿಂಚಿತ್ತಾದರೂ ಅಳುಕುತ್ತಿರಲಿಲ್ಲ. ಸುಮ್ಮನೆ ತಲೆಬಾಗಿ ನಿಂತುಕೊಳ್ಳುತ್ತಿದ್ದೆನು."

ಈ ಮಾತು ಕಪಟಿಯಾದ ಕಮಲಾಪ್ರಸಾದನ ಹೃದಯದಲ್ಲಿಯೂ ತಳ ಮಳವನ್ನುಂಟು ಮಾಡಿತು. ಒಂದು ಕ್ಷಣಕಾಲ ಅವನಿಗೆ ತನ್ನ ನೀಚಸ್ವಭಾವ ಕ್ಕಾಗಿ ದುಃಖವಾಯಿತು. ಗದ್ಗದಿತನಾಗಿ ನುಡಿದನು— "ಒಂದು ವೇಳೆ ಬ್ರಹ್ಮನು ನನ್ನ ಕೈಯಿಂದಲೇ ನಿನಗೆ ಮರಣವನ್ನು ನಿಷ್ಕರ್ಷಿಸಿದ್ದರೆ, ಆ ಹತ್ಯೆಯ ಪಾರಿತೋಷಕ ರೂಪವಾಗಿ ತ್ರೈಲೋಕ್ಯ ಸಾಮ್ರಾಜ್ಯ, ಸ್ವರ್ಗದ ಅಪ್ಸರೆಯರು ಮತ್ತು ದೇವತೆಗಳ ಸುಖವೈಭವಗಳು ದೊರೆತರೂ ಕೂಡ ನಾನು ನಿನ್ನ ಶರೀರದಿಂದ ಒಂದು ತೊಟ್ಟು ರಕ್ತವನ್ನೂ ಭೂಮಿಯ ಮೇಲೆ ಸುರಿಸಲಸ ಮರ್ಥನಾಗುತ್ತಿದ್ದೆನು. ಇದರಿಂದ ನನ್ನ ಆತ್ಮಕ್ಕೆ ಧಕ್ಕೆ ತಗಲಿದ್ದರೂ ನಾನು ಕೈಯಲ್ಲಿ ಕತ್ತಿಯನ್ನು ಹಿಡಿಯುತ್ತಿರಲಿಲ್ಲ. ನೀನು ಈಗ ಬಹಳ ಕಠೋರವಾದ ಮಾತುಗಳನ್ನಾಡಿದೆ, ಪೂರ್ಣಾ. ಸ್ವಲ್ಪ ನನ್ನ ಎದೆಯ ಮೇಲೆ ಕೈ ಇಟ್ಟು, ನೋಡು, ಹೇಗೆ ಬಡಿದುಕೊಳ್ಳುತ್ತಿದೆ. ಅಂಜಿಕೆಯ ಮನಸ್ಸಿನಂತಿದೆ. ನೋಡು

ಆ ಕಡೆ ತಾಂಬೂಲದ ಪೆಟ್ಟಿಗೆ ಇದೆ, ಒಂದು ಬೀಡಾ ಮಾಡಿ ತಿನ್ನಿಸು. ಇದನ್ನೇ ಜ್ಞಾಪಿಸಿಕೊಂಡು ಮನಸ್ಸನ್ನು ಸಮಾಧಾನಪಡಿಸಿಕೊಳ್ಳುವೆನು."

ಪೂರ್ಣಾ ಎರಡು ಬೀಡಾಗಳನ್ನು ಮಾಡಿ ಕಮಲಾಪ್ರಸಾದನಿಗೆ ಕೊಡಲು ಕೈಯನ್ನು ಮುಂದಕ್ಕೆ ಚಾಚಿದಳು. ಕಮಲಾಪ್ರಸಾದನು ಬೀಡಾ ವನ್ನು ತೆಗೆದುಕೊಂಡು ಹೇಳಿದನು— "ಭೋಜನವಾದ ನಂತರ ಸ್ವಲ್ಪ ದಕ್ಷಿ ಣೆಯೂ ಸಿಕ್ಕಬೇಕಲ್ಲವೆ ?"

ಪೂರ್ಣಾ ವಿನೋದದಿಂದ ಹೇಳಿದಳು—"ಪ್ರೇಮಾ ಇದ್ದಿದ್ದರೆ ಅವಳಿಂದ ಏನಾದರೂ ದಕ್ಷಿಣೆಯನ್ನೂ ಕೊಡಿಸುತ್ತಿದ್ದೆನು. ಅವಳು ಬಂದಾಗ ತಪ್ಪದೆ ಕೊಡಿಸುವೆನು."

ಕಮಲಾಪ್ರಸಾದನು ಎಲೆಯನ್ನು ಮಡಿಸುತ್ತಾ ನುಡಿದನು— " ಈ ಬೀಡಾವನ್ನು ನೀನು ನನ್ನ ಕೈಯಿಂದ ತಿನ್ನುವುದೇ ನನ್ನ ದಕ್ಷಿಣೆ."

ಪೂರ್ಣಾ:— "ಅದಾಗದು! ನಾನು ಇಂತಹ ದಕ್ಷಿಣೆಯನ್ನು ತೆಗೆದು ಕೊಳ್ಳುವುದಿಲ್ಲ. ಯಾರಿಗೆ ಗೊತ್ತು, ನೀವು ಆ ಬೀಡಕ್ಕೆ ಯಾವುದಾದರೂ ಮಂತ್ರ ಹಾಕಿರಬಹುದು. ಪುರುಷರು ಈ ವಿದ್ಯೆಯಲ್ಲಿ ನಿಪುಣರು. ಬಾಗಿಲ ಲ್ಲಿಯೇ ನಿಂತುಕೊಂಡು ನಿಮಗೆ ಹೇಳಿ ಹೋಗೋಣವೆಂದು ನಿರ್ಧರಿಸಿ ಕೊಂಡು ಬಂದಿದ್ದೆ; ಆದರೆ ನಾನು ಎಲ್ಲವನ್ನೂ ಮರೆಯುವಂತೆ ನೀವು ಮಂತ್ರ ಹಾಕಿದ್ದೀರಿ."

ಕಮಲಾಪ್ರಸಾದನು ಬೀಡಾಗಳನ್ನು ಅವಳ ಬಾಯ ಸಮೀಪಕ್ಕೆ ತೆಗೆದು ಕೊಂಡು ಹೋಗಿ ಹೇಳಿದನು— " ನಾನು ನನ್ನ ಕೈಯ್ಯಿಂದಲೇ ನಿನಗೆ ತಿನ್ನಿ ಸುವೆನು."

"ನನ್ನ ಕೈಗೆ ಕೊಟ್ಟು ಬಿಡಿರಿ."

"ಇಲ್ಲರಿ, ಗುರುಗಳು ನನಗೆ ಈ ಪಾಠ ಕಲಿಸಿಲ್ಲ."

"ಏನೂ ತುಂಟತನ ಮಾಡುವುದಿಲ್ಲ ತಾನೆ ?"

ಪೂರ್ಣಾ ಬಾಯಿ ತೆರೆದಳು ಮತ್ತು ಕಮಲಾಪ್ರಸಾದನು ಎಲ್ಲಿಯಾದರೂ ನೀಚತನಕ್ಕೆ ಕೈಹಾಕಿದರೆ ಗತಿಯೇನೆಂದು ಅವಳ ಎದೆಯು ಡವಡವನೆ ಬಡಿದು ಕೊಳ್ಳುತ್ತಿತ್ತು. ಆದರೆ ಕಮಲಾಪ್ರಸಾದನು ಇಷ್ಟು ಒರಟನಾಗಿರಲಿಲ್ಲ. ಸಮೀ ಪಕ್ಕೆ ಬರುತ್ತಿರುವ ಬೇಟೆಯನ್ನು ದೂರದಿಂದಲೇ ಬೆದರಿಸಿ ಓಡಿಸುವುದು ಅವನಿಗೆ

ಇಷ್ಟವಿರಲಿಲ್ಲ. ಅವನು ಬೀಡಾವನ್ನು ತಿನ್ನಿಸಿದನು. ಮತ್ತು ಮಂಚದ ಮೇಲೆ ಕುಳಿತುಕೊಂಡು ಹೇಳಿದನು— "ಈಗ ಇಲ್ಲಿಂದ ಬೇರೆಲ್ಲಿಗೂ ಹೋಗುವ ಹೆಸ ರೆತ್ತಕೂಡದು. ಸರ್ವಸ್ವವೂ ನನ್ನ ಕೈಬಿಟ್ಟು ಹೋದರೂ ಚಿಂತೆ ಇಲ್ಲ, ನೀನು ಮಾತ್ರ ನನ್ನ ಕೈಬಿಟ್ಟು ಹೋಗಲಾರೆ. ಜೀವನಪರ್ಯಂತ ಇದೇ ನಿನ್ನ ಮನೆ ಮತ್ತು ನಾನು ನಿನ್ನ ದಾಸ. ಎಂದು ನೀನು ಇಲ್ಲಿಂದ ಹೊರಡಲು ಸಿದ್ಧ ಳಾಗುವಿಯೋ ಅಂದೇ ನಾನೂ ಯಾವುದಾದರೊಂದು ದಾರಿಯನ್ನು ಹಿಡಿ ಯುವೆನು."

ಪೂರ್ಣಾ ಒಂದು ಕ್ಷಣಕಾಲ ಆಲೋಚಿಸಿದ ನಂತರ ಕ್ಷೀಣ ಸ್ವರದಲ್ಲಿ ಹೇಳಿದಳು— "ಬಾಬೂಜಿ, ಇದರ ಪರಿಣಾಮವೇನಾಗುವುದು ಬಲ್ಲಿರಾ? ನನ ಗೇನೂ ತೋಚುತ್ತಿಲ್ಲ. ಮುಚ್ಚುಮರೆಯಲ್ಲಿ ಮಾಡುವ ಕೆಲಸ ಎಷ್ಟು ದಿನ ಗುಟ್ಟಾಗಿರುವುದು? ಕೊನೆಗೆ ಒಂದು ದಿನ ನಿಮ್ಮ ಮನಸ್ಸಿಗೂ ನನ್ನ ವಿಷ ಯದಲ್ಲಿ ಜಿಗುಪ್ಸೆಯುಂಟಾಗುವುದು. ಆಗ ನೀವೇ ಯೋಚಿಸುವಿರಿ— "ಇದೆಲ್ಲಿ ಗಂಟು ಬಿತ್ತು ಈ ರೋಗ ನನಗೆ. ಆಗ ನನ್ನ ಗತಿ ಏನಾಗುವುದು, ಯೋಚಿಸಿರಿ."

ಕಮಲಾಪ್ರಸಾದನು ದೃಢಚಿತ್ತನಾಗಿಯೇ ಹೇಳಿದನು— "ಪ್ರಿಯೆ, ಇಂತಹ ಸಂಶಯಗಳಿಗೆ ನಿನ್ನ ಹೃದಯದಲ್ಲಿ ಎಡೆಗೊಡಬೇಡ. ಕೇವಲ ವಿವಾ ಹಿತ ಸ್ತ್ರೀಯೇ ಪುರುಷನನ್ನು ಪ್ರೇಮಬಂಧನದಿಂದ ಬಂಧಿಸಲಾರಳು. ಅಲ್ಲಿ ಪುರುಷನು ತನ್ನ ವಚನಪರಿಪಾಲನೆ ಮಾಡುತ್ತಾನೆ. ಯಾವನಿಗೆ ತನ್ನ ವಚನಪರಿಪಾಲನೆ ಮಾಡುವ ಇಚ್ಛೆಯಿಲ್ಲವೋ ಅವನನ್ನು ವಿವಾಹವು ಯಾವ ರೀತಿಯಿಂದಲಾದರೂ ನಿರ್ಬಂಧಿಸಬಲ್ಲುದೆ? ಸುಮಿತ್ರೆಯು ನನ್ನ ವಿವಾಹಿತ ಪತ್ನಿಯಾಗಿದ್ದಾಗ್ಯೂ ಹೆಚ್ಚು ಸುಖಿಯಾಗಬಲ್ಲಳೆ? ಇದು ಎರಡು ಮನಸ್ಸು ಗಳ ಮಿಲನದ ವಿಷಯ. ವಿವಾಹ ಕಾಲದಲ್ಲಿ ವಿವೇಚನಾ ರಹಿತವಾಗಿ ಹೇಳ ಲ್ಪಡುವ ಮಾತುಗಳಿಗೇ ಇಷ್ಟು ಮಹತ್ವವನ್ನು ಕೊಡುವುದಾದರೆ, ಪ್ರೇಮ ಭರಿತ ಹೃದಯದಿಂದ ಉಕ್ಕಿ ಬರುವ ಪ್ರೇಮವಾಣಿಗೆ ಬೆಲೆಯೇ ಇಲ್ಲವೇ? ಸ್ವಲ್ಪ ಯೋಚಿಸಿ ನೋಡು. ಮನುಷ್ಯನು ಜೀವನದಲ್ಲಿ ಬಯಸುವುದು ಸುಖವಲ್ಲದೆ ಮತ್ತೇನು? ಹೀಗಿರುವಾಗ ಯಾರಿಂದ ಅವನ ಜೀವನವು ಸುಖಮಯವಾಗು ವುದೋ, ಅವಳನ್ನು ಅವನು ಹೇಗೆ ತಾನೇ ಬಿಡಬಲ್ಲನು ಮತ್ತು ಅವಳೊ

ಕನೆ ಹೇಗೆ ತಾನೇ ಕಠೋರ ವ್ಯವಹಾರವನ್ನಾಗಲೀ ಮೋಸವನ್ನಾಗಲೀ ಮಾಡಬಲ್ಲನು ?"

ಪೂರ್ಣಾ ಗಂಡಾಂತರದ ಭಯವನ್ನು ಸೂಚಿಸುತ್ತಾ, ಕೋಮಲ ಸ್ವರ ದಿಂದಲೇ ನುಡಿದಳು— "ಬಾಬೂಜಿ, ವಿವಾಹದ ವಿಷಯ ಬೇರೆ. ನಾನು ಅದನ್ನು ಅರ್ಥ ಮಾಡಿಕೊಳ್ಳದಷ್ಟು ತಿಳಿಗೇಡಿಯಲ್ಲ."

ಕಮಲಾಪ್ರಸಾದನು ನಸುನಗೆಯನ್ನು ಸೂಸುತ್ತಾ ಹೇಳಿದನು—" ಛಿ ! ಛಿ ! ನಿನ್ನನ್ನು ತಿಳಿಗೇಡಿಯೆನ್ನುವುದುಂಟೆ ? ರಾಮ, ರಾಮ ! ನೀನು ವೇದ ಶಾಸ್ತ್ರಗಳ ವಿಷಯಗಳನ್ನೆಲ್ಲಾ ಅರೆದು ಕುಡಿದಿರುವೆ. ಸರಿ, ವಿವಾಹಗಳಲ್ಲಿ ಎಷ್ಟು ವಿಧವೆಂಬುದನ್ನಾದರೂ ತಿಳಿಸು."

"ವಿವಾಹದಲ್ಲಿ ಎಷ್ಟು ವಿಧ—ಎನ್ನುವುದರ ಅಭಿಪ್ರಾಯವೇನು ?"

"ನೀನು ಬಹಳ ಜಾಣೆ, ಆದ್ದರಿಂದ ನೀನೇ ಇದರ ಅರ್ಥವನ್ನು ತಿಳಿದುಕೋ."

"ಎಲ್ಲಿಯಾದರೂ ಮದುವೆಗಳಲ್ಲಿಯೂ ಅನೇಕ ವಿಧವುಂಟೆ ? ನಾವೆಲ್ಲರೂ ಒಂದೇ ರೀತಿಯ ವಿವಾಹವು ಎಲ್ಲಾ ಕಡೆಗಳಲ್ಲಿಯೂ ನಡೆಯುತ್ತಿರುವುದನ್ನು ನೋಡಿದ್ದೇವೆ."

ಕಮಲಾಪ್ರಸಾದನು ಏಳು ವಿಧವಾದ ವಿವಾಹಗಳಿವೆಯೆಂದು ತಿಳಿಸಿದನು. ಯಾವ ಕಾಲದಲ್ಲಿ : ಯಾವ ರೀತಿಯ ಪದ್ಧತಿಯು ರೂಢಿಯಲ್ಲಿತ್ತು, ಅದರ ನಂತರ ಯಾವ ಸಂಪ್ರದಾಯ ರೂಢಿಗೆ ಬಂದಿತು, ಮತ್ತು ಆಧುನಿಕ ಕಾಲದಲ್ಲಿ ಯಾವ ಯಾವ ಸಂಪ್ರದಾಯಗಳು ರೂಢಿಗೆ ಬಂದಿವೆ—ಈ ಸಮಗ್ರ ಕಥೆಯನ್ನೆಲ್ಲಾ ನಿರಾಧಾರವಾದ ವಿಷಯ ನಿರೂಪಣೆಯಿಂದ ಕುತೂಹಲಮಗ್ನಳಾದ ಪೂರ್ಣಾಗೆ ವಿವರಿಸಿ ಹೇಳಿದನು. ಸಕಲಶಾಸ್ತ್ರಸಂಪನ್ನನೂ ಕೂಡ ಈ ವಿಷಯವನ್ನು ಇಷ್ಟು ಸಹಜವಾಗಿ ಬಣ್ಣಿಸಲಾರನು.

ಪೂರ್ಣಾ ಕೇಳಿದಳು— "ಹಾಗಾದರೆ ಗಾಂಧರ್ವ ವಿವಾಹ ಈಗಲೂ ಆಗುತ್ತದೆಯೆ ?"

"ಹೌದು, ಯೂರೋಪಿನಲ್ಲಿ ಈ ಪದ್ಧತಿಯು ಬಹಳದಾಗಿ ರೂಢಿಯಲ್ಲಿದೆ. ಈ ಪದ್ಧತಿಯು ಮುಸಲ್ಮಾನರಲ್ಲಿಯೂ ಇದೆ; ಈ ದೇಶದಲ್ಲಿಯೂ ಮೊದಲು

ಇತ್ತು. ಆದರೆ ಈಗ ಒಂದು ಕಾನೂನಿಗನುಸಾರವಾಗಿ ಈಗಲೂ ನಡೆದು ಕೊಂಡು ಬರುತ್ತಿದೆ."

"ಈ ವಿವಾಹ ನಡೆಯುವುದು ಹೇಗೆ?"

"ಮತ್ತೇನೂ ಇಲ್ಲ, ಸ್ತ್ರೀ–ಪುರುಷರು ಪರಸ್ಪರ ಪ್ರತಿಜ್ಞೆ ಮಾಡುತ್ತಾರೆ. ಸರಿ, ವಿವಾಹವಾಗುತ್ತದೆ. ತಾಯಿ, ತಂದೆ, ಬಂಧು–ಬಳಗ, ಪಂಡಿತ–ಪುರೋಹಿತ ಇವರು ಮಾಡುವ ಕೆಲಸವೇನೂ ಇರುವುದಿಲ್ಲ. ಆದರೆ ವರ, ವಧುಗಳಿಬ್ಬರೂ ಪ್ರಾಪ್ತವಯಸ್ಕರಾಗಿರಬೇಕಾದ್ದು ಅನಿವಾರ್ಯ."

ಪೂರ್ಣಾ ಅವಿಶ್ವಾಸ ಭಾವವನ್ನು ಪ್ರಕಟಿಸುತ್ತಾ ಹೇಳಿದಳು-- "ಹಾಗಾದರೆ ವಿವಾಹವು ಮಕ್ಕಳಾಟವೆ ?"

ಕಮಲಾಪ್ರಸಾದನು ಪ್ರತಿವಾದ ಮಾಡುತ್ತಾ ಹೇಳಿದನು— "ನನಗೆ ತಿಳಿದ ಮಟ್ಟಿಗೆ ನೀನು ಯಾವುದನ್ನು ವಿವಾಹವೆಂದು ತಿಳಿಯುತ್ತೀಯೋ ಅದು ಮಕ್ಕಳಾಟವೇ ಸರಿ. ವಾದ್ಯಗಳು ಮೊಳಗಿದುವು, ಬಾಣ ಬಿರುಸುಗಳು ವಿವಿಧ ಕ್ರೀಡೆಯನ್ನಾಡಿದುವು ಮತ್ತು ಇಬ್ಬರು ಅರಿಯದ ವಿವಾಹದ ರಹಸ್ಯವನ್ನೇ ಅರಿಯದ ಬಾಲರು–ಒಬ್ಬರು ಮತ್ತೊಬ್ಬರ ಕೊರಳಿಗೆ ಜೀವನ ಪರ್ಯಂತ ಕಟ್ಟಲ್ಪಟ್ಟರು. ವಾಸ್ತವವಾಗಿ ಹೇಳುವುದಾದರೆ, ಇದು ಮಕ್ಕಳಾಟವಲ್ಲದೆ ಬೇರೇನೂ ಅಲ್ಲ."

ಪೂರ್ಣಾ ಪುನಃ ಸಂದೇಹವನ್ನು ವ್ಯಕ್ತಪಡಿಸಿದಳು— "ಸಮಾಜವು ಇಂತಹ ವಿವಾಹಕ್ಕೆ ಮಾನ್ಯತೆಯನ್ನು ಕೊಡುವುದಿಲ್ಲ."

ಕಮಲಾಪ್ರಸಾದನು ಉತ್ತೇಜಿತನಾಗಿ ಹೇಳಿದನು— "ಪ್ರಪಂಚಕ್ಕೆ ಕಣ್ಣಿಲ್ಲ, ಅದರ ವ್ಯವಹಾರವೆಲ್ಲವೂ ಅರ್ಥಶೂನ್ಯವಾದುದು. ನಾನು ಇಂತಹ ಪ್ರಪಂಚವನ್ನು ಲೆಕ್ಕಿಸುವುದಿಲ್ಲ. ಪರಮಾತ್ಮನು ಮನುಷ್ಯನನ್ನು ದುಃಖದಲ್ಲಿಯೇ ತನ್ನ ಜೀವನವನ್ನು ಕಳೆಯಲು ಸೃಷ್ಟಿಸಿಲ್ಲ. ಸಾಧಾರಣ ಕೆಲಸಗಳಲ್ಲಿ ನಮ್ಮಿಂದ ಅಪರಾಧವಾದಾಗ ನಾವು ಅವುಗಳನ್ನು ತಕ್ಷಣ ತಿದ್ದಿ ಸರಿಪಡಿಸಿ ಕೊಳ್ಳುತ್ತೇವೆ. ಜೀವನವನ್ನು ಕೇವಲ ಒಂದು ತಪ್ಪಿತಕ್ಕಾಗಿ ಏಕೆ ನಷ್ಟಪಡಿಸಿ ಕೊಳ್ಳಬೇಕು? ಒಂದು ವೇಳೆ ದೈವೇಚ್ಛೆಯಿಂದ ಇಂದು ಈ ಮನೆ ಬಿದ್ದು ಹೋದರೆ, ನಾಳೆಯೇ ನಾವು ಇದನ್ನು ಪುನಃ ಕಟ್ಟಿಸಲು ಪ್ರಾರಂಭಿಸುವೆವು; ಆದರೆ ಯಾವಳಾದರೂ ಅಬಲೆಯ ಜೀವನಕ್ಕೆ ದೈವೀ ಆಘಾತವುಂಟಾದಾಗ,

ಅವಳು ಯಾವಾಗಲೂ ಅವಳ ಕಣ್ಣೀರಿನ ಕಾಲುವೆಯಲ್ಲಿಯೇ ಮುಳುಗಿ ತನ್ನ ಜೀವನವನ್ನು ಕಳೆಯಬೇಕೆಂದು ಸಮಾಜವು ನಿರ್ಬಂಧಿಸುತ್ತದೆ. ಇದು ಎಂತಹ ಘೋರ ಅನ್ಯಾಯ !

ಪುರುಷರು ತಮ್ಮ ಕಾಮವಾಸನೆಯ ತೃಪ್ತಿಗಾಗಿಯೇ ಈ ನಿಯಮವನ್ನು ಮಾಡಿದ್ದಾರೆ. ಸರಿ, ಇದಕ್ಕೆ ಬೇರಾವ ಅರ್ಥವೂ ಇಲ್ಲ. ಸಮಾಜದ ಈ ವ್ಯವಸ್ಥೆಯನ್ನು ಮಾಡಿದವನು ದೇವತೆಯಾಗಿರಲಿ, ಋಷಿಯಾಗಿರಲಿ ಅಥವಾ ಮಹಾತ್ಮನಾಗಿರಲಿ ನಾನು ಅವನನ್ನು ಸಮಾಜದ ಶತ್ರುವೆಂದು ತಿಳಿಯುತ್ತೇನೆ. ಸ್ತ್ರೀಯರಿಗೆ ಪತಿವ್ರತಾ ಧರ್ಮದ ಸಂಕೋಲೆಯನ್ನು ತೊಡಿಸಿದರು. ಪುನಃ ಸಂಸ್ಕಾರವಾಗಿದ್ದರೆ, ಇಷ್ಟು ಮಂದಿ ಅನಾಥ ಅಬಲೆಯರು ಆವರ ಹಿಡಿತಕ್ಕೆ ಹೇಗೆ ತಾನೆ ಸಿಕ್ಕಿಬೀಳುತ್ತಿದ್ದರು ! ಸಾಕು, ಇದೇ ಸಮಾಜ ಮತ್ತು ಪ್ರಪಂಚದ ರಹಸ್ಯ. ಪುರುಷರಿಗೂ ಇದು ನಿಷೇಧವಾಗಿದ್ದರೆ, ನಾವು ಇದನ್ನು ನ್ಯಾಯವೆಂದು ತಿಳಿಯುತ್ತಿದ್ದೆವು."

ಪೂರ್ಣಾ ಹೇಳಿದಳು— "ಶಾಸ್ತ್ರ ಪುರಾಣಗಳನ್ನೆಲ್ಲಾ ಮಾಡಿದವರು ಪುರುಷರೇ ಅಲ್ಲವೇ ?"

"ಮತ್ತೇನು ? ಇದೆಲ್ಲವೂ ಧೂರ್ತರ ಮಾಯಾಜಾಲ."

"ಸರಿ, ಹಾಗಾದರೆ ನೀವು ಬಾಬು ಅಮೃತರಾಯನನ್ನು ನಿಂದಿಸುವುದೇಕೆ ?"

"ಅವನ ನಡವಳಿಕೆ ಸರಿಯಾಗಿಲ್ಲದಿರುವುದೇ ಕಾರಣ. ಅವನು ಅವಿವಾಹಿತನಾಗಿದ್ದುಕೊಂಡು ಕೊಬ್ಬಿದ ಗೂಳಿಯಂತೆ ಸ್ವಚ್ಛಂದ ವಿಹಾರಿಯಾಗಿರಬೇಕೆನ್ನುತ್ತಾನೆ. ಅವನ ವಿಧವಾಶ್ರಮವು ಅವನ ಭೋಗಾಲಯವಾಗುವುದು. ಆದ್ದರಿಂದಲೇ ನಾವೆಲ್ಲರೂ ಅವನನ್ನು ವಿರೋಧಿಸುತ್ತಿದ್ದೇವೆ. ಅವನು ಒಂದು ವೇಳೆ ವಿಧವೆಯನ್ನು ಮದುವೆಯಾಗುವುದಾದರೂ ದೇಶದಲ್ಲಿನ ವಿಧವೆಯರ ಉದ್ಧಾರವಾಗುವುದೆ? ಆದರೆ ಅವನು ವಿವಾಹ ಮಾಡಿಕೊಳ್ಳುವುದಿಲ್ಲ. ಕಪಟಿಗಳು ತೆರೆಯ ಮರೆಯಲ್ಲಿದ್ದುಕೊಂಡೇ ತಮ್ಮ ಇಚ್ಛಾಪೂರ್ತಿಯನ್ನು ಮಾಡಿಕೊಳ್ಳುತ್ತಾರೆ. ಆದರೆ ಭಗವಂತನ ಅನುಗ್ರಹವಾದರೆ ಅವನ ಆಶ್ರಮವು ನಿರ್ಮಾಣವಾಗಲಾರದು. ಪಟ್ಟಣದಲ್ಲೆಲ್ಲೂ ಅವನಿಗೆ ಒಂದು ಕಾಸಿನ ಸಹಾಯವೂ ದೊರಕಲಾರದು. (ಗಡಿಯಾರವನ್ನು ನೋಡಿಕೊಂಡು) ಓಹೋ !

ಎರಡು ಗಂಟೆ ಹೊಡೆಯಿತು. ಈಗ ಸಾವಕಾಶ ಮಾಡಬಾರದು. ಬಾ, ಈ ದೀಪದ ಎದುರಿಗೆ ಭಗವಂತನನ್ನು ಸಾಕ್ಷಿಯಾಗಿಟ್ಟುಕೊಂಡು, ಜೀವನಪರ್ಯಂತ ನಾವಿಬ್ಬರೂ ಪತಿ-ಪತ್ನೀ ವ್ರತವನ್ನು ಪಾಲಿಸಿಕೊಂಡು ಬರುವೆವೆಂದು ಪ್ರತಿಜ್ಞೆ ಮಾಡೋಣ."

ಪೂರ್ಣಾಳ ಮುಖವು ವಿವರ್ಣವಾಯಿತು. ಅವಳು ಎದ್ದು ನಿಂತು ಹೇಳಿದಳು— "ಈಗಲೇ ಇಲ್ಲ, ಬಾಬೂಜಿ. ವರ್ಷ ಕೂಡ ಆಗಿಲ್ಲ. ಅಲ್ಲಿಯ ವರೆಗೆ ಯೋಚಿಸಿ ನೋಡಿರಿ. ನಾನೂ ಯೋಚಿಸಿ ನೋಡುವೆನು. ಆತುರ ವೇಕೆ?"

ಹೀಗೆ ಹೇಳುತ್ತಾ ಅವಳು ಬಾಗಿಲು ತೆರೆದುಕೊಂಡು ವೇಗವಾಗಿ ಹೊರಟು ಹೋದಳು; ಮತ್ತು ಕಮಲಾಪ್ರಸಾದನು ನಿಂತುಕೊಂಡು ನೋಡು ತ್ತಲೇ ಇದ್ದನು. ಪಕ್ಷಿಯು ಕಾಳನ್ನು ತಿನ್ನುತ್ತಾ ತಿನ್ನುತ್ತಾ ಸಮೀಪಕ್ಕೆ ಬಂದಿತ್ತು; ಆದರೆ ಬೇಟೆಗಾರನು ಕೈಚಾಚುತ್ತಲೇ ಅದು ಪುರ್‍ರನೆ ಹಾರಿ ಹೋಯಿತು. ಅದು ಯಾವಾಗಲೂ ಬೇಟೆಗಾರನ ಪ್ರಲೋಭನದ ಬಲೆಗೆ ಬೀಳದೆ ಇರುವುದೇ?

## ೧೨

ಕಮಲಾಪ್ರಸಾದನ ಕಡೆಯಿಂದ ತನ್ನ ಮನಸ್ಸನ್ನು ಹಿಂತಿರುಗಿಸಬೇಕೆಂದು ಪೂರ್ಣಾ ಶತಪ್ರಯತ್ನ ಮಾಡುತ್ತಿದ್ದಳು. ಆದರೆ ಎಲ್ಲಿಯಾದರೂ ಅವನು ನಿಜವಾಗಿಯೂ ಆತ್ಮಹತ್ಯೆ ಮಾಡಿಕೊಂಡರೆ ಮುಂದೇನಾಗುವುದೆಂಬ ಸಂಶ ಯವು ಅವಳ ಹೃದಯವನ್ನು ಕೊರೆಯುತ್ತಿತ್ತು. ರಾತ್ರಿ ಅವಳು ಕಮಲಾ ಪ್ರಸಾದನನ್ನು ತಿರಸ್ಕರಿಸಿ ಹೊರಟು ಬಂದಿದ್ದಳು. ಆದರೆ ರಾತ್ರಿಯ ಉಳಿದ ಕಾಲವನ್ನೆಲ್ಲಾ ಅವಳು ಚಿಂತೆಯಲ್ಲಿಯೇ ಕಳೆದಳು. ಅವಳ ಚಂಚಲ ಹೃದ ಯವು ಪತಿಭಕ್ತಿ, ಸಂಯಮ ಮತ್ತು ವ್ರತಕ್ಕೆ ವಿರುದ್ಧವಾಗಿ ಬಗೆಬಗೆಯ ತರ್ಕ ಗಳನ್ನು ಮಾಡಲಾರಂಭಿಸಿತು. ಅವಳು ಸತ್ತುಹೋಗಿದ್ದರೆ ಅವಳ ಪತಿಯು

ಪುನರ್ವಿವಾಹ ಮಾಡಿಕೊಳ್ಳುತ್ತಿರಲಿಲ್ಲವೆ ? ಈಗ ಅವನ ವಯಸ್ಸಾದರೂ ಎಷ್ಟಿತ್ತು ? ಇಪ್ಪತ್ತೈದು ವರ್ಷ ವಯಸ್ಸಿನಲ್ಲಿ ಅವನು ವಿಧುರ ಜೀವನವನ್ನು ಪಾಲಿಸಿಕೊಂಡು ಹೋಗುತ್ತಿದ್ದನೆ ? ಎಂದಿಗೂ ಇಲ್ಲ. ಪಂಡಿತ ವಸಂತ ಕುಮಾರನು ಅವಳೊಂದಿಗೆ ಎಂದಾದರೂ ಇಷ್ಟು ಅನುರಕ್ತ, ಪ್ರೇಮದಿಂದಿದ್ದ ನೆಂಬುದು ಈಗ ಅವಳಿಗೆ ಜ್ಞಾಪಕವೇ ಇರಲಿಲ್ಲ. ಅವನಿಗೆ ಇಷ್ಟು ಅವಕಾಶ ವೆಲ್ಲಿತ್ತು ? ದಿನವೆಲ್ಲಾ ಕಛೇರಿಯಲ್ಲಿ ಕುಳಿತುಕೊಂಡಿರುತ್ತಿದ್ದನು. ಹೀಗಿರು ವಾಗ ಅವನು ಅವಳಿಗೆ ಯಾವ ಸುಖವನ್ನು ತಾನೆ ಕೊಟ್ಟನು ? ಒಂದೊಂದು ಕಾಸಿಗೂ ಒದ್ದಾಡಬೇಕಾಗುತ್ತಿತ್ತು; ಯಾವ ಸುಖವನ್ನು ಕೊಡಬಲ್ಲ? ಅವನ ಜೊತೆಯಲ್ಲಿದ್ದಾಗಲೂ ಜೀವನವು ದುಃಖದಿಂದಲೇ ಕಳೆಯುತ್ತಿತ್ತು. ಅತ್ತು ಕೊನೆಗೊಂದು ದಿನ ಪ್ರಾಣವನ್ನೊಪ್ಪಿಸುವುದಕ್ಕಾಗಿಯೇ ಇವಳು ಹುಟ್ಟಿರುವಳೆ? ಸ್ವರ್ಗ–ನರಕಗಳೆಲ್ಲವೂ ಮೋಸ. ಈಗ ಇದಕ್ಕಿಂತಲೂ ದುಃಖದಾಯಕವಾದ ನರಕವು ಮತ್ತಾವುದಿದೆ ? ನರಕದಲ್ಲಿಯೇ ಬಿದ್ದು ಒದ್ದಾಡಬೇಕಾಗಿದ್ದರೆ, ಅದೇ ಸರಿ. ಏನಿಲ್ಲೆಂದರೂ ಜೀವನದ ಕೆಲವು ದಿನಗಳಾದರೂ ಆನಂದದಿಂದ ಕಳೆದು ಹೋಗುವುವು; ಜೀವನದ ಸುಖವೂ ಸ್ವಲ್ಪ ದೊರೆತಂತಾಗುವುದು. ಯಾರಲ್ಲಿ ಪ್ರೇಮುವಂಕುರಿಸುವುದೋ ಅವನೇ ತನಗೆ ಸರ್ವಸ್ವವಲ್ಲವೆ ? ವಿವಾಹ ಮತ್ತು ಸಂಸ್ಕಾರಗಳೆಲ್ಲವೂ ಆಡಂಬರ ಮಾತ್ರ. ನಾಲ್ಕಕ್ಷರ ಸಂಸ್ಕೃತ ಓದು ವುದರಿಂದೇನಾಗುತ್ತದೆ ? ಯಾವ ರೀತಿಯಿಂದಲಾದರೂ ಸ್ತ್ರೀಯ ಉದರ ಪೋಷಣೆಯಾಗಲೆಂಬುದೇ ಇದರ ಅಭಿಪ್ರಾಯವಲ್ಲವೆ ? ಉಹುಂ, ಈ ಚಿಂತೆ ಯಲ್ಲಿ ಮುಳುಗಿ ಏಕೆ ಸಾಯಬೇಕು ? ವಿವಾಹವೇನಾದರೂ ಸ್ತ್ರೀಯನ್ನು ಪುರುಷನೊಡನೆ ಬಂಧಿಸುತ್ತದೆಯೇ ? ಅದೂ ಕೂಡ ಮನಸ್ಸೊಪ್ಪಿದ ವ್ಯಾಪಾರ ಅಥವಾ ಪ್ರೇಮ. ಸ್ತ್ರೀ–ಪುರುಷರ ಹೃದಯ ಮಿಲನವಾಗದಿದ್ದರೆ, ವಿವಾಹವು ಯಾವುದನ್ನು ತಾನೆ ಕೂಡಿಸಬಲ್ಲುದು. ಲಗ್ನವಾದ ಮೇಲೆಯೂ ಕೂಡ ಪುರು ಷನು ತನಗೆ ಇಷ್ಟವಾದಾಗ ಸ್ತ್ರೀಯನ್ನು ಬಿಟ್ಟುಬಿಡಬಲ್ಲ. ವಿವಾಹವಿಲ್ಲದೆಯೆ ಸ್ತ್ರೀಪುರುಷರು ಪ್ರೇಮದಿಂದಿರಬಲ್ಲರು. ಈ ಕುತ್ಸಿತ ಭಾವನೆಗಳಲ್ಲಿಯೇ ಪೂರ್ಣಾ ರಾತ್ರಿಯನ್ನು ಕಳೆದಳು.

ಬೆಳಿಗ್ಗೆ ಅವಳು ತಲೆ ಬಾಚಿಕೊಳ್ಳುತ್ತಿದ್ದಳು. ಅಷ್ಟರಲ್ಲಿಯೇ ಸುಮಿತ್ರಾ ಅವಳೆದುರಿಗೆ ಬಂದು ನಿಂತಳು. ಪೂರ್ಣಾ ಕೋಮಲ ಸ್ವರದಿಂದಲೇ ಹೇಳಿ

ದಲೇ ಹೇಳಿದಳು— "ಕುಳಿತುಕೋ ಅಕ್ಕ. ಇಂದು ಮುಂಜಾವಿನಲ್ಲಿಯೇ ಎಚ್ಚರವಾಯಿತು?"

ಸುಮಿತ್ರಾ ಸ್ವಲ್ಪ ಗಡುಸಾಗಿಯೇ ಹೇಳಿದಳು— "ಯಾರಿಗೆ ನಿದ್ದೆ ಬಂದಿತ್ತು ?"

ಪೂರ್ಣಾ:— "ಎಂತಹ ಸ್ವಭಾವದ ಜನರೋ ನಾನು ಬೇರೆ ಕಾಣೆ."

ಸುಮಿತ್ರಾ:— "ನೀನೂ ಕೂಡ ಇದುವರೆಗೂ ಅವರ ಮನಸ್ಸನ್ನು ತಿಳಿಯಲಿಲ್ಲವೆ ? ನೀನಂತೂ ಇಂತಹ ವಿಷಯಗಳಲ್ಲಿ ತುಂಬಾ ಜಾಣೆ."

ಪೂರ್ಣಾ ಭಯಭರಿತ ನೇತ್ರಗಳಿಂದ ಅವಳ ಕಡೆಗೆ ನೋಡುತ್ತಾ ಹೇಳಿದಳು— "ನಾನು ಈ ವಿದ್ಯೆಯನ್ನು ಕಲಿತಿಲ್ಲ."

ಸುಮಿತ್ರಾ:— "ಮೊದಲು ನಾನೂ ಹೀಗೆಯೇ ತಿಳಿಯುತ್ತಿದ್ದೆ; ಆದರೆ ಈಗ ನಾನು ಮೋಸಹೋಗಿದ್ದೇನೆಂದು ಗೊತ್ತಾಯಿತು."

ಪೂರ್ಣಾ ಕೋಪಿಸಿಕೊಂಡವಳಂತೆ ಹೇಳಿದಳು— "ಅಕ್ಕ, ನೀನಂತೂ ಇಂದು ಕಾದಾಡಲು ಬಂದಿರುವೆ."

ಸುಮಿತ್ರಾ:— "ಹೌದು, ಈದಿನ ಜಗಳವಾಡುವುದಕ್ಕಾಗಿಯೇ ಬಂದಿದ್ದೇನೆ. ಈಗ ನಾವಿಬ್ಬರೂ ಈ ಮನೆಯಲ್ಲಿರಲಾರೆವು."

ಪೂರ್ಣಾ ಇದಕ್ಕೇನೂ ಉತ್ತರ ಕೊಡಲಿಲ್ಲ. ಭೂಮಿಯು ತನ್ನ ಪೂರ್ಣ ಭಾರದಿಂದ ಅವಳನ್ನು ಅದುಮಿಕೊಂಡಿರುವಂತೆ ಅವಳಿಗೆ ಭಾಸವಾಯಿತು.

ಸುಮಿತ್ರಾ ಪುನಃ ಹೇಳಿದಳು— "ನೀನು ಯಾವಾಗ ಮೊಟ್ಟಮೊದಲು ಈ ಮನೆಗೆ ಕಾಲಿಟ್ಟೆಯೋ ಆಗಲೇ ನನಗೆ ಅನುಮಾನವಾಗಿತ್ತು. ನಿನ್ನ ಈ ಯೌವ್ವನ ಮತ್ತು ರೂಪು ಮತ್ತು ಅದರ ಮೇಲೆ ಈ ರಸಿಕ ಸ್ವಭಾವವು ನನಗೆ ಘಾತಕವಾಗಿ ಪರಿಣಮಿಸುವುದೆಂದು ನನಗೆ ಆಗಲೇ ಸಂಶಯವಾಗಿತ್ತು; ಆದ್ದರಿಂದಲೇ ನಾನು ನಿನ್ನನ್ನು ಯಾವಾಗಲೂ ನನ್ನ ಜೊತೆಯಲ್ಲಿಯೇ ಇಟ್ಟುಕೊಳ್ಳಲು ಮೊದಲು ಮಾಡಿದ್ದೆನು. ಆದರೆ ವಿಧಿಬರೆಹವನ್ನು ಮೀರಿ ನಡೆಯಲು ಯಾರಿಗೆ ತಾನೇ ಸಾಧ್ಯ ? ನೀನು ಶುದ್ಧಾಂತಃಕರಣವುಳ್ಳವಳೆಂದು ನನಗೆ ಗೊತ್ತು. ನಿನ್ನನ್ನು ಯಾರೂ ಕೆಟ್ಟ ದಾರಿಗೆಳೆಯಲು ಪುಸಲಾಯಿಸದಿದ್ದರೆ ನೀನು ಜೀವನ ಪರ್ಯಂತ ನಿನ್ನ ವ್ರತವನ್ನು ಪಾಲಿಸಿಕೊಂಡು ಹೋಗು

ತ್ತಿದ್ದೆ. ಆದರೆ ನೀರಿನಲ್ಲಿದ್ದುಕೊಂಡು ಉಕ್ಕಿ ಉಕ್ಕಿ ಬರುತ್ತಿರುವ ಅಲೆಗಳಿಂದ ನಿನ್ನ ರಕ್ಷಣೆಮಾಡಿಕೊಳ್ಳುವುದು ನಿನ್ನ ಶಕ್ತಿಗೆ ಮೀರಿದ ಕೆಲಸವಾಯಿತು. ಲಂಗ ರಿಲ್ಲದ ನಾವೆಯು ತರಂಗಗಳ ಮಧ್ಯೆ ಸ್ಥಿರವಾಗಿರಲಾರದು. ನೆಲದ ಮೇಲೆ ಬಿದ್ದಿರುವ ಹಣವನ್ನು ಎತ್ತಿಕೊಳ್ಳಲು ಯಾರಿಗೆ ತಾನೇ ಸಂಕೋಚವಾಗು ತ್ತದೆ? ಪೂರ್ಣಾ, ನಾನೆಲ್ಲವನ್ನೂ ಈ ಕಣ್ಣುಗಳಿಂದಲೇ ನೋಡಿದ್ದೇನೆ. ಇದನ್ನು ನೀನು ನಿರಾಕರಿಸಲಾರೆ. ನಾನು ಹೇಳುತ್ತಿರುವುದೆಲ್ಲಾ ನಿನ್ನ ಹಿತಕ್ಕೆಂದೇ ತಿಳಿ. ಈಗಲೂ ನಿನ್ನ ರಕ್ಷಣೆ ಮಾಡಿಕೊಳ್ಳುವ ಅಪೇಕ್ಷೆ ನಿನಗಿದ್ದರೆ ಆ ಪಾಪಿಯ ನೆರಳೂ ನಿನ್ನ ಮೇಲೆ ಬೀಳದಂತೆ ಎಚ್ಚರಿಕೆಯಿಂದಿರು. ನಾನು ನನಗಾಗಿ, ನನ್ನ ಮಾರ್ಗದ ಮುಳ್ಳನ್ನು ಕಿತ್ತೆಸೆಯುವುದಕ್ಕಾಗಿ ನಿನ್ನೊಡನೆ ಈ ಮಾತುಗಳ ನ್ನಾಡುತ್ತಿರುವೆನೆಂದು ತಿಳಿಯಬೇಡ. ನಾನು ಮೊದಲು ಹೇಗಿದ್ದೆನೋ ಈಗಲೂ ಹಾಗೆಯೇ ಇದ್ದೇನೆ. ನನಗೆ ಗಂಡನ ಮನೆ ಹೇಗೋ ತೌರು ಮನೆಯೂ ಹಾಗೆಯೇ. ನನಗಿರುವುದು ನಿನ್ನ ಚಿಂತೆಯೊಂದೇ. ಈ ಪಿಶಾ ಚವು ನಿನ್ನನ್ನು ಮಾನದಿಂದ ಬಾಳಲು ಬಿಡುವುದಿಲ್ಲ. ನಾನು ನಿನಗೆ ಒಂದು ಸಲಹೆ ಕೊಡಬೇಕೆಂದಿದ್ದೇನೆ. ನೀನು ಹೇಳೆಂದರೆ ಹೇಳುವೆನು. ನಿನಗಿಷ್ಟವಿಲ್ಲ ದಿದ್ದರೆ ಹೇಳುವುದಿಲ್ಲ."

ಪೂರ್ಣಾ ಬಾಯಿಂದ ಯಾವ ಉತ್ತರವನ್ನೂ ಕೊಡಲಿಲ್ಲ; ಆದರೆ ಒಮ್ಮೆ ದುಃಖ ಸೂಸುತ್ತಿರುವ ಕಣ್ಣುಗಳಿಂದ ನೋಡಿ ತಲೆ ತಗ್ಗಿಸಿದಳು.

ಸುಮಿತ್ರಾ ಹೇಳಿದಳು:— "ಅವನು ನಿನ್ನನ್ನು ಮದುವೆ ಮಾಡಿಕೊಳ್ಳ ಬೇಕೆಂದು ಅವನಿಗೆ ಸ್ಪಷ್ಟವಾಗಿ ಹೇಳಿಬಿಡು."

ಪೂರ್ಣಾ ವಿಸ್ಫಾರಿತ ನೇತ್ರಗಳಿಂದ ಒಮ್ಮೆ ಅವಳ ಕಡೆ ನೋಡಿದಳು.

ಸುಮಿತ್ರಾ:— "ಮದುವೆಯಾದರೆ ಒಮ್ಮೆ ಜನರ ಅಪಹಾಸ್ಯಕ್ಕೆ ಗುರಿ ಯಾಗಬೇಕಾಗಬಹುದು. ದಿನಗಳೆದಂತೆ ಯಾರೂ ಆ ವಿಷಯವನ್ನೇ ಎತ್ತು ವುದಿಲ್ಲ. ಈ ರೀತಿ ಮುಚ್ಚುಮರೆಯಲ್ಲಿ ಪರಸ್ಪರ ಮಿಲನವಾಗುವುದು ಆತ್ಮ ಮತ್ತು ಪರಲೋಕಗಳೆರಡನ್ನೂ ನಾಶ ಮಾಡುವುದು. ಹೀಗೆ ಮಾಡುವುದ ರಿಂದ ಅವನ ಪ್ರೇಮ ಪರೀಕ್ಷೆಯೂ ಆಗುವುದು. ಅವನು ವಿವಾಹ ಮಾಡಿ ಕೊಳ್ಳಲು ಒಪ್ಪಿದರೆ, ಅವನಿಗೆ ನಿನ್ನಲ್ಲಿ ನಿಜವಾದ ಪ್ರೇಮವಿದೆಯೆಂದು ತಿಳಿ ದುಕೊ. ಇಲ್ಲವಾದಲ್ಲಿ ಅವನು ನಿನ್ನ ಸತೀತ್ವವನ್ನು ಹಾಳು ಮಾಡಲು ನಿಶ್ಚ

ಯಿಸಿರುವನೆಂದೂ, ಕಾಮವಾಸನೆಯ ಚಿಂತೆಯಲ್ಲಿ ಮುಳುಗಿರುವನೆಂದೂ ತಿಳಿ. ಅವನು ನಿನ್ನ ಮಾತನ್ನು ತಿರಸ್ಕರಿಸಿದರೆ, ನೀನು ಅವನೊಡನೆ ಪುನಃ ಮಾತನಾಡಕೂಡದು ಮತ್ತು ಮುಖಾವಲೋಕನವನ್ನೂ ಮಾಡಕೂಡದು. ಅವನು ನಿನ್ನನ್ನು ಮದುವೆ ಮಾಡಿಕೊಳ್ಳಲು ಒಪ್ಪುವುದಿಲ್ಲವೆಂಬುದನ್ನು ನಾನು ಬಲ್ಲೆ. ಅವನು ನಿನಗೆ ಬಗೆಬಗೆಯ ಆಶೆ ತೋರಿಸುವನು; ಆದರೆ ನೀನು ಅವನ ಮಾತಿಗೆ ಮರುಳಾದೀಯೆ, ಎಚ್ಚರಿಕೆ ! ಹುಟ್ಟು ಮೋಸಗಾರ! ನನ್ನ ವಿಷಯವೋ—ನಿನಗೆ ಗೊತ್ತೇ ಇದೆ. ನಾನಂತೂ ಈ ಮಹಾಶಯರ ಮುಖಕ್ಕೆ ಮಸಿ ಬಳಿಯಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿದ್ದೇನೆ. ನನ್ನ ಮಾನ ಹೋದರೂ ಚಿಂತೆಯಿಲ್ಲ, ನನ್ನ ಸರ್ವನಾಶವಾದರೂ ಚಿಂತೆಯಿಲ್ಲ; ಆದರೆ ಇವರು ಯಾರಿಗೂ ಮುಖ ತೋರಿಸದಂತೆ ಮಾಡುವೆನು."

ಪೂರ್ಣಾ ಕಂಬನಿದುಂಬಿ ನುಡಿದಳು— "ಅಕ್ಕ, ನಾನೇ ಎಲ್ಲಿಯಾದರೂ ಮುಳುಗಿ ಈ ಕಳಂಕಿತ ಜೀವನವನ್ನೇಕೆ ಅಂತ್ಯಗೊಳಿಸಬಾರದು ?"

ಸುಮಿತ್ರಾ:— " ನೀನು ಮುಳುಗಿ ಸತ್ತರೆ ನನಗೇನು ಉಪಕಾರ ಮಾಡಿದಂತಾಗುವುದು ? ಅವರು ತಮ್ಮ ಸ್ವಭಾವವನ್ನು ಬಿಡುವುದಿಲ್ಲ, ನಾನೂ ನನ್ನ ಸ್ವಭಾವವನ್ನು ಬಿಡುವುದಿಲ್ಲ. ಅವರು ತಮ್ಮ ಜಿಪುಣತನವನ್ನೂ ಬಿಡುವುದಿಲ್ಲ, ನಾನು ಹಣದ ವಿಷಯದಲ್ಲಿ ನನ್ನ ತುಚ್ಛಭಾವನೆಯನ್ನೂ ಬಿಡುವುದಿಲ್ಲ. ಅವರಿಗೆ. ಅಲ್ಪತನವೆಂದರೆ ಪ್ರೀತಿ; ತಮ್ಮನ್ನು ತಾವು ಹೊಗಳಿಕೊಳ್ಳುವುದೆಂದರೆ ಅವರಿಗೆ ಒಂದು ಭ್ರಾಂತಿ. ನನಗೆ ಈ ವಿಷಯಗಳೆಂದರೆ ಅನಾದರ. ಇದುವರೆಗೂ ಅವರು . ಇಷ್ಟು ಲಫಂಗರೆಂದು ತಿಳಿದಿರಲಿಲ್ಲ. ಅವರಿಗೆ ಪ್ರೇಮಿಸುವುದು ಗೊತ್ತಿದೆಯೆಂದು ತಿಳಿದಿದ್ದೆ. ನಾನೇ ಅವರನ್ನು ಪ್ರೇಮಿಸಬೇಕೆಂದು ಪ್ರಯತ್ನಿಸುತ್ತಿದ್ದೆ; ಆದರೆ ರಾತ್ರೆ ನಾನು ನೋಡಿದ ದೃಶ್ಯವು ಅವರ ವಿಷಯದಲ್ಲಿದ್ದ ಅಲ್ಪ ಗೌರವವನ್ನೂ ಅಳಿಸಿಬಿಟ್ಟಿತು. ಉಳಿದೆಲ್ಲಾ ದೋಷಗಳನ್ನೂ ಸಹಿಸಬಲ್ಲೆ; ಆದರೆ ಲಂಪಟತ್ವವನ್ನು ಸಹಿಸುವುದು ನನ್ನ ಶಕ್ತಿಗೆ ಮೀರಿದ್ದು. ನಾನು ದೇವರ ಮೇಲೆ ಆಣೆ ಇಟ್ಟು ಹೇಳುತ್ತಿರುವೆನು ಪೂರ್ಣಾ, ನಿನ್ನ ವಿಷಯದಲ್ಲಿ ನನಗೇನೂ ದ್ವೇಷವಿಲ್ಲ. ನಿನ್ನ ವಿಷಯದಲ್ಲಿ ನನ್ನ ಮನಸ್ಸು ನಿರ್ಮಲವಾಗಿದೆ. ಆದರೆ ನನಗೆ ನಿನ್ನ ಮೇಲೆ ಕನಿಕರವುಂಟಾಗುತ್ತದೆ. ನಾನು ಕೋಪಭರದಲ್ಲಿ ಅನುಚಿತವಾದ

ಮಾತುಗಳನ್ನೇದಾದರೂ ಆಡಿದ್ದರೆ, ನನ್ನನ್ನು ಕ್ಷಮಿಸು. ದಗ್ಧ ಹೃದಯದಿಂದ ಹೊಗೆಯನ್ನು ಬಿಟ್ಟರೆ ಬೇರೇನು ಹೊರಡಬಲ್ಲುದು ?"

ಪೂರ್ಣಾಳ ದೇಹವೆಲ್ಲವೂ ಥರಥರನೆ ನಡುಗುತ್ತಿತ್ತು. ಭೂಮಿಯು ಕೆಳಕ್ಕೆ ಕುಸಿದು ಹೋಗುತ್ತಿರುವಂತೆ ಭಾಸವಾಗುತ್ತಿತ್ತು. ಅವಳ ಮನಸ್ಸು ಯಾವಾಗಲೂ ಇಷ್ಟು ದುರ್ಬಲವಾಗಿರಲಿಲ್ಲ. ಅವಳು ಸುಮಿತ್ರೆಯ ಮಾತುಗಳನ್ನು ಯಾವ ರೀತಿಯಿಂದಲೂ ವಿರೋಧಿಸಲಿಲ್ಲ. ಅವಳ ಜೀವನವು ಈ ಸಮಯದಲ್ಲಿ ಸುಮಿತ್ರೆಯ ಮುಷ್ಟಿಯಲ್ಲಿತ್ತು. ಸುಮಿತ್ರೆಯ ಸ್ಥಿತಿಯಲ್ಲಿ ತಾನಿದ್ದರೆ ಅವಳು ಇಷ್ಟು ಉದಾರಳಾಗುತ್ತಿದ್ದಳೆ? ಎಂದೆಂದಿಗೂ ಇಲ್ಲ. ಅವಳಿಗೆ ವಿಷವಿಕ್ಕುತ್ತಿದ್ದಳು; ಅವಳ ಕೊರಳು ಕೊಯ್ಯುತ್ತಿದ್ದಳು. ಸುಮಿತ್ರೆಯ ಈ ಔದಾರ್ಯವು ಅಭಾಗಿನಿ ಪೂರ್ಣಾಳ ಮನಸ್ಸಿನ ಮೇಲೆ ಪ್ರಬಲ ಪರಿಣಾಮವನ್ನುಂಟು ಮಾಡಿತು. ಅವಳು ಶೋಕಸಂತಪ್ತಳಾಗಿ ಸುಮಿತ್ರೆಯ ಎರಡು ಕಾಲುಗಳನ್ನೂ ಗಟ್ಟಿಯಾಗಿ ಹಿಡಿದುಕೊಂಡು ಹೇಳಿದಳು— "ಅಕ್ಕ, ನನ್ನಲ್ಲಿ ಕರುಣೆಯಿಡು !"

ಸುಮಿತ್ರೆಯು ಅವಳನ್ನು ಮೇಲೆತ್ತಿ ಆಲಿಂಗಿಸಿಕೊಳ್ಳುತ್ತಾ ಹೇಳಿದಳು— "ತಂಗಿ, ನಿನ್ನ ವಿಷಯದಲ್ಲಿ ನನ್ನ ಮನಸ್ಸು ಪವಿತ್ರವಾಗಿದೆಯೆಂದು ನಾನು ಈ ಮೊದಲೇ ಹೇಳಿದ್ದೇನೆ. ಸರಿ, ಈಗ ಈ ಧೂರ್ತನ ಜಾಲದಿಂದ ತಪ್ಪಿಸಿಕೊಳ್ಳಲು ಯಾವುದಾದರೊಂದು ಯುಕ್ತಿಯನ್ನು ಹುಡುಕಬೇಕು. ಅವನಿಗೆ ಇನ್ನು ಮೇಲೆ ನಿನ್ನ ಕಡೆ ನೋಡುವ ಸಾಹಸವೂ ಆಗಕೂಡದು. ನೀನು ಈಗ ಅವನನ್ನು ನಾಯಿಯೆಂದು ತಿಳಿದು ತಿರಸ್ಕರಿಸಿ ಬಿಡು."

ಪೂರ್ಣಾ ದೈನ್ಯವಾಣಿಯಿಂದ ನುಡಿದಳು— "ಅಕ್ಕ, ನಾನು ಏನು ತಾನೆ ಮಾಡಬಹುದಾಗಿತ್ತು ? ನನ್ನ ಸ್ಥಳದಲ್ಲಿ ನೀನಿದ್ದರೂ, ನಾನು ಮಾಡಿದಂತೆಯೇ ಮಾಡುತ್ತಿದ್ದೆ. ಅವರು ಪ್ರಾಣ ಬಿಡುವುದಾಗಿ ನನ್ನನ್ನು ಹೆದರಿಸಿದ್ದಾರೆ."

ಸುಮಿತ್ರೆ ನಕ್ಕು ಹೇಳಿದಳು— "ಈ ಗದರಿಕೆಯನ್ನು ಕೇಳಿ ನಾನೂ ಕೂಡ ಅವರೆದುರು ತಲೆ ತಗ್ಗಿಸುವೆನೆಂದು ನೀನು ತಿಳಿದಿರುವೆಯೋ ? ಸಾವಿರ ಸಾರಿ ಅವರು ಪ್ರಾಣ ಬಿಡಲಿ ಎಂದು ಹೇಳುವೆನು. ನಾಳೆ ಸಾಯಬೇಕೆಂದಿದ್ದರೆ, ಇಂದೇ ಸಾಯಲಿ. ನಿನ್ನಿಂದಾಗದಿದ್ದರೆ ಹೇಳು, ನಾನೇ ಕೊಂದುಹಾಕು

ವೆನು. ಈ ಧೂರ್ತ ಲಂಪಟರಿಗೆ ಇದೂ ಒಂದು ವಶೀಕರಣ ಮಂತ್ರ. ಈ ರೀತಿಯಲ್ಲಿ ಪ್ರೇಮವನ್ನು ತೋರಿಸಿ ಇವರು ರಮಣಿಯರ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತಾರೆ. ಇಂತಹ ನಿರ್ಲಜ್ಜರು ಸಾಯುವುದಿಲ್ಲ. ಸತ್ಯದ ಬಲವುಳ್ಳವರು ಮಾತ್ರ ಸಾಯಬಲ್ಲರು. ಇಂತಹ ವಿಷಯವಾಸನೆಯ ಕುನ್ನಿಗಳು ಸತ್ತಿದ್ದೇ ಆದರೆ ಪ್ರಪಂಚವು ಸ್ವರ್ಗವಾದೀತು. ಅವರು ದುಷ್ಟ ವೇಶ್ಯೆಯರ ಬಳಿ ಸುಳಿಯುವುದಿಲ್ಲ. ಅಲ್ಲಿಗೆ ಹೋದರೆ ಇವರಿಗೆ ಪೇಚಾಟವಾಗುತ್ತಿದೆ. ಮೊದಲನೆಯದಾಗಿ ವೇಶ್ಯಾ ದೇವಿಯರು ಸಂಪೂರ್ಣ ಪೂಜೆ ಮಾಡಿದ ಹೊರತು ನೇರವಾಗಿ ಮಾತನಾಡುವುದಿಲ್ಲ. ಎರಡನೆಯದಾಗಿ ಅಲ್ಲಿ ನಗರದ ಗೂಂಡಾಗಳ ಕೂಟವೇ ಸೇರಿರುತ್ತದೆ. ಎಲ್ಲಿಯಾದರೂ ಯಾರೊಡನೆಯಾದರೂ ಮನಸ್ತಾಪವಾಯಿತೆಂದರೆ ರಾಯರ ಮೂಳೆ ಮುರಿದು ಬಿಡುವರು. ಎಲ್ಲಿ ಹಣ ಖರ್ಚಾಗುವುದಿಲ್ಲವೋ, ಎಲ್ಲಿ ಹೊಡೆತದ ಭೀತಿ ಇರುವುದಿಲ್ಲವೋ ಇಂತಹ ಬೇಟೆಗಾಗಿಯೇ ಇವರು ಹೊಂಚುಹಾಕಿಕೊಂಡಿರುತ್ತಾರೆ. ಬೆಣ್ಣೆಯಂತಹ ಮಾತುಗಳನ್ನಾಡಿ, ಪ್ರೇಮದ ಸೋಗುಹಾಕಿ, ಒಂದು ನಿಷ್ಕಪಟ ವ್ಯಕ್ತಿಯ ಸರ್ವಸ್ವವನ್ನೂ ಸೂರೆ ಮಾಡುವರು."

ಪೂರ್ಣಾ ಸ್ವಲ್ಪ ದಿಟ್ಟತನದಿಂದಲೇ ಹೇಳಿದಳು— "ನನ್ನ ಬುದ್ಧಿಗೆ ಆಗ ಯಾವ ಮಂಕು ಬಡಿದಿತ್ತೋ ನಾನರಿಯೆ."

ಸುಮಿತ್ರೆಯು ಅವಳ ಭಯವನ್ನು ನಿವಾರಿಸುವ ಪ್ರಯತ್ನ ಮಾಡುತ್ತಾ ಹೇಳಿದಳು— "ಸೋದರಿ, ಇದು ನಿನ್ನಂತಹ ಅಸಹಾಯಕ ಲಲನೆಯರಿಗೆ ಹೊಸ ವಿಷಯವೇನೂ ಅಲ್ಲ. ಪ್ರೇಮದ ಮಧುರ ವಚನಗಳಿಗೆ ಮರುಳಾಗಿ ನಾನೇ ಏನು ಮಾಡುತ್ತಿದ್ದೆನೋ ಅದನ್ನು ಹೇಳುವುದು ಕಷ್ಟ. ತಂಗಿ, ಈ ವ್ಯವಹಾರವು ಬಹಳ ಸೂಕ್ಷ್ಮವಾದುದು. ಹಣದಿಂದ ಮನುಷ್ಯನು ತೃಪ್ತನಾಗಬಹುದು, ಪ್ರೇಮದಿಂದ ಎಂದೂ ತೃಪ್ತನಾಗಲಾರನು. ಪ್ರೇಮಾಲಾಪವನ್ನು ಕೇಳಿ ಹಿಗ್ಗದ ಕಿವಿಗಳೇ ವಿರಳ."

ಇಷ್ಟರಲ್ಲಿಯೇ ಕಮಲಾಪ್ರಸಾದನು ಕೈಯಲ್ಲಿ ಒಂದು ಪತ್ರವನ್ನು ಹಿಡಿದುಕೊಂಡು ಅಲ್ಲಿಗೆ ಬಂದನು. ಆದರೆ ಒಳಗೆ ಕಾಲಿಡುತ್ತಲೇ ಸುಮಿತ್ರೆಯನ್ನು ನೋಡಿ ಸ್ವಲ್ಪ ಸಂಕೋಚದಿಂದಲೇ ಹೇಳಿದನು— "ಪೂರ್ಣಾ, ಪ್ರೇಮಾ ನಿನ್ನನ್ನು ಕರೆಕಳುಹಿಸಿದ್ದಾಳೆ. ನಾನು ಗಾಡಿಯನ್ನು ಸಿದ್ಧಪಡಿಸುವಂತೆ ಹೇಳಿ

ದ್ದೇನೆ; ಹೊರಡು, ನಿನ್ನನ್ನು ಕಳುಹಿಸಿಬರುತ್ತೇನೆ."

ಪೂರ್ಣಾ ಸುಮಿತ್ರೆಯ ಇಷ್ಟವನ್ನು ತಿಳಿದುಕೊಳ್ಳುವವಳಂತೆ ಒಂದು ಸಲ ಅವಳ ಕಡೆ ನೋಡಿದಳು. ಆದರೆ ಸುಮಿತ್ರೆಯು ತನಗೂ ಪೂರ್ಣಾಗೂ ಯಾವ ಸಂಬಂಧವೂ ಇಲ್ಲದವಳಂತೆ ಗೋಡೆಯ ಕಡೆಗೆ ನೋಡುತ್ತಾ ನಿಂತಿದ್ದಳು.

ಪೂರ್ಣಾ ಸಂಕೋಚದಿಂದಲೇ ಹೇಳಿದಳು— "ತಾವು ಹೊರಡಿರಿ, ನಾನು ಇನ್ನೊಂದಾದರೂ ಒಂದು ದಿನ ಹೋಗುವೆನು."

ಕಮಲಾ:— "ಇಲ್ಲ, ಪ್ರಾಯಶಃ ಯಾವುದೋ ಅತ್ಯಗತ್ಯವಾದ ಕೆಲಸ ವಿರಬಹುದು."

ಪೂರ್ಣಾ ಪುನಃ ಸುಮಿತ್ರೆಯ ಕಡೆ ನೋಡಿದಳು; ಆದರೆ ಸುಮಿತ್ರೆಯು ಇದು ವರೆಗೂ ಗೋಡೆಯ ಕಡೆಯೇ ನೋಡುತ್ತಿದ್ದಳು. ಪೂರ್ಣಾಗೆ 'ಉಂಟು' 'ಇಲ್ಲ' ಎಂದು ಹೇಳುವುದು ಕಷ್ಟವಾಗಿತ್ತು. ಅನೇಕ ತಿಂಗಳುಗಳಿಂದ ಅವಳು ಪ್ರೇಮಾಳನ್ನು ನೋಡಿರಲಿಲ್ಲ. ಅವಳ ಭೇಟಿ ಮಾಡಲು ಮನಸ್ಸು ತವಕಪಡುತ್ತಿತ್ತು. ಏತಕ್ಕೋಸ್ಕರ ಕರೆಕಳುಹಿಸಿದ್ದಾಳೋ ತಿಳಿಯದು. ಇಷ್ಟು ಆತುರದಲ್ಲಿ ಕರೆ ಬಂದಿರುವುದನ್ನು ನೋಡಿದರೆ ಯಾವುದೋ ಅತ್ಯಾವಶ್ಯಕವಾದ ಕೆಲಸವಿರಲೇ ಬೇಕು. ರಸ್ತೆಯಲ್ಲಿ ಇವರೊಡನೆ ಹೋಗುವುದರಲ್ಲಿ ತೊಂದರೆಯೇನು ? ಅಲ್ಲಿ ನಾಲ್ಕಾರು ದಿನಗಳು ತಂಗುವುದರಿಂದ ಮನಸ್ಸಿಗೆ ಒಂದು ವಿಧವಾದ ಆನಂದವುಂಟಾಗುವುದು. ಈ ಮಹಾಶಯನ ಕಾಟ ತಪ್ಪುವುದು. ಹೀಗೆ ಯೋಚಿಸಿ ಅವಳು ಹೇಳಿದಳು— " ತಾವೇಕೆ ಕಷ್ಟಪಡಬೇಕು ? ನಾನೇ ಒಂಟಿಯಾಗಿ ಹೋಗುವೆನು."

ಕಮಲಾಪ್ರಸಾದನು ಸಿಡುಕಿನಿಂದಲೇ ಉತ್ತರಿಸಿದನು— "ಸರಿ, ನಿನಗೆ ಇಷ್ಟವಾದಾಗ ಹೋಗು, ನಾನೇನೋ ಈಗಲೇ ಹೋಗುತ್ತೇನೆ. ದಾನನಾಥನೊಡನೆ ಮಾತನಾಡಬೇಕಾಗಿದೆ. ನಾನು ನಿನ್ನ ಅನುಕೂಲಕ್ಕಾಗಿಯೇ ಈ ಗಾಡಿಯಲ್ಲಿಯೇ ನಿನ್ನನ್ನೂ ಕರೆದುಕೊಂಡು ಹೋಗಬೇಕೆಂದಿದ್ದೆ."

ಪೂರ್ಣಾ ಈಗ ಯಾವ ಆಕ್ಷೇಪಣೆಯನ್ನೂ ಮಾಡಲಾರದವಳಾದಳು. "ಹಾಗಾದರೆ ಯಾವಾಗ ಹೊರಡುವಿರಿ ?" ಎಂದಳು.

"ನಾನು ಸಿದ್ಧನಾಗಿದ್ದೇನೆ" ಕಮಲಾಪ್ರಸಾದನು ಬಾಗಿಲಿನಿಂದ ಹೊರಕ್ಕೆ ಹೆಜ್ಜೆ ಹಾಕುತ್ತಾ ಹೇಳಿದನು.

ಪೂರ್ಣಾ ಬೇಗ ಬೇಗ ಹೊರಡಲು ಸಿದ್ಧಳಾದಳು. ಕಮಲಾಪ್ರಸಾದನು ಹೊರಟುಹೋದನಂತರ "ಇವರೊಡನೆ ಹೋಗುವುದರಲ್ಲಿ ತೊಂದರೆಯೇನಕ್ಕ?" ಪೂರ್ಣಾ ಸುಮಿತ್ರೆಯನ್ನು ಪ್ರಶ್ನಿಸಿದಳು.

ಸುಮಿತ್ರೆಯು ಆಶ್ವಾಸನೆಯನ್ನುಂಟು ಮಾಡುತ್ತಾ ನುಡಿದಳು—"ಜೊತೆ ಹೋಗುವುದರಲ್ಲಿ ಕೆಡಕೇನಿದೆ? ಆದರೆ ನೋಡು, ನನ್ನನ್ನು ಮರೆತೀಯೆ, ಶೀಘ್ರವಾಗಿಯೇ ಹಿಂತಿರುಗಿ ಬರಬೇಕು."

ಈ ಮಾತನ್ನು ಸುಮಿತ್ರೆಯು ಕೇವಲ ಶಿಷ್ಟಾಚಾರ ಭಾವನೆಯಿಂದ ಹೇಳಿದಳು. ಪೂರ್ಣಾ ತೊಲಗುವಳಲ್ಲಾ ಎಂದು ಅವಳು ಮನಸ್ಸಿನಲ್ಲಿಯೇ ಹಿಗ್ಗುತ್ತಿದ್ದಳು. ಪೂರ್ಣಾಳ ಮನಸ್ಸು ಕಮಲಾಪ್ರಸಾದನ ಕಡೆಯಿಂದ ಬೇರೆ ಡೆಗೆ ತಿರುಗಿದ ನಂತರ, ಅವರಿಬ್ಬರಿಗೂ ಕೆಲವು ದಿನಗಳ ಮಟ್ಟಿಗಾದರೂ ಅಗ ಲುವಿಕೆಯುಂಟಾಗುವುದು. ಸುಮಿತ್ರೆಗೆ ಇದಕ್ಕಿಂತಲೂ ಹೆಚ್ಚಿನ ವಿಷಯುವಾ ವುದೂ ಇರಲಿಲ್ಲ. ಪೂರ್ಣಾ ಈಗ ಇಲ್ಲಿಗೆ ಬರಲು ಇಷ್ಟಪಡುವುದಿಲ್ಲ ಮತ್ತು ಪ್ರೇಮಾ ಕೂಡ ತಾನಾಗಿಯೇ ಅವಳಿಗೆ ಹೊರಡಲು ಹೇಳುವುದಿಲ್ಲ. ಅವಳ ಮನೆಯಲ್ಲೇ ಇರಲು ಒಪ್ಪಿಕೊಂಡರೆ ಪೂರ್ಣಾಗೆ ಬಯಸಿದ ಬಯಕೆಗಳೆಲ್ಲಾ ಈಡೇರುವುವು. ಪೂರ್ಣಾ ಹೊರಟುಹೋಗುವುದರಲ್ಲಿಯೇ ಸುಮಿತ್ರೆಗೆ ತನ್ನ ಹಿತವು ಕಾಣಿಸುತ್ತಿತ್ತು.

ಆದರೆ ಪೂರ್ಣಾ ಟಾಂಗಾದ ಮೇಲೆ ಕುಳಿತುಕೊಂಡು ನೋಡಿದಳು, ಕುದುರೆಯ ಲಗಾಮನ್ನು ಕಮಲಾಪ್ರಸಾದನು ಹಿಡಿದಿದ್ದಾನೆ, ಗಾಡಿ ಹೊಡೆ ಯಲು ಬೇರಾವನೂ ಇಲ್ಲ. ಆಗ ಅವಳ ಹೃದಯವು ಯಾವುದೋ ಅಜ್ಞಾತ ಸಂಶಯದಿಂದ ಗಾಬರಿಗೊಂಡಿತು. ಒಮ್ಮೆ ಅವಳಿಗೆ ಗಾಡಿಯಿಂದ ಕೆಳಗಿಳಿಯ ಬೇಕೆನಿಸಿತು; ಆದರೆ ಇದಕ್ಕೆ ಯಾವ ನೆಪವೂ ಹೊಳೆಯಲಿಲ್ಲ. ಅವಳು ಈ ಚಿಂತೆಯಲ್ಲಿ ಮುಳುಗಿದ್ದಾಗಲೇ ಕಮಲಾಪ್ರಸಾದನು ಕುದುರೆಯನ್ನೊಮ್ಮೆ ಚಾವಟಿಯಿಂದ ಹೊಡೆದನು. ಟಾಂಗಾ ಹೊರಟಿತು.

ಸ್ವಲ್ಪ ದೂರದ ವರೆಗೆ ಟಾಂಗಾ ಪರಿಚಯವಿರುವ ಮಾರ್ಗದಲ್ಲಿಯೇ ಹೋಯಿತು. ಅವೇ ದೇವಾಲಯಗಳು, ಅವೇ ಅಂಗಡಿಗಳಿದ್ದುವು. ಪೂರ್ಣಾಳ

ಸಂಶಯವು ಕ್ರಮೇಣ ಕಡಿಮೆಯಾಗುತ್ತಾ ಬಂತು. ಆದರೆ ಒಂದು ತಿರುವಿನಲ್ಲಿ ಟಾಂಗಾ ತಿರುಗಿದುದನ್ನು ನೋಡಿ ಪೂರ್ಣಾಗೆ ಇದು ನೇರವಾದ ರಸ್ತೆಯಲ್ಲವೆಂಬ ಅನುಮಾನವಾಯಿತು. ಅವಳು ಕಮಲಾಪ್ರಸಾದನನ್ನು ಕೇಳಿದಳು—"ಈ ಕಡೆಯಿಂದ ಎಲ್ಲಿಗೆ ಹೋಗುತ್ತಿರುವಿರಿ ?"

ಕಮಲಾಪ್ರಸಾದನು ದೃಢಚಿತ್ತನಾಗಿಯೇ ಹೇಳಿದನು— "ಅತ್ತ ಕಡೆ ಸುತ್ತಿಕೊಂಡು ಹೋಗಬೇಕಾಗಿತ್ತು. ಈ ಮಾರ್ಗವಾಗಿ ಹೋದರೆ ಬೇಗ ತಲಪುವೆವು."

ಪೂರ್ಣಾ ಸುಮ್ಮನಾದಳು. ಕೆಲವು ನಿಮಿಷಗಳ ವರೆಗೆ ಒಂದು ಗಲ್ಲಿಯಲ್ಲಿ ಹೋದ ನಂತರ ಟಾಂಗಾ ಒಂದು ವಿಶಾಲವಾದ ರಸ್ತೆಗೆ ಬಂದಿತು. ಒಂದು ಕ್ಷಣಕಾಲದ ನಂತರ ಅದು ರೈಲ್ವೇ ಲೈನನ್ನೂ ದಾಟಿತು. ಈಗ ಮನೆಗಳ ಸಂಖ್ಯೆ ಕಡಿಮೆಯಾಗುತ್ತಾ ಬಂದಿತು. ದೂರದಲ್ಲಿ ಅಲ್ಲೊಂದು ಇಲ್ಲೊಂದು ಆಂಗ್ಲೇಯರ ಬಂಗಲೆಗಳು ಕಾಣುತ್ತಿದ್ದುವು.

ಪೂರ್ಣಾ ಗಾಬರಿಯಿಂದ ಕೇಳಿದಳು—"ನನ್ನನ್ನು ನೀವು ಎಲ್ಲಿಗೆ ಕರೆದುಕೊಂಡು ಹೋಗುತ್ತಿರುವಿರಿ ?"

"ಸ್ವಲ್ಪ ಹಾಗೆಯೇ ನಮ್ಮ ತೋಟದ ವರೆಗೆ ಹೋಗುತ್ತಿದ್ದೇನೆ. ಸ್ವಲ್ಪ ಹೊತ್ತು ಅಲ್ಲಿ ತೋಟದಲ್ಲಿ ಸುತ್ತಾಡಿಕೊಂಡು ಪ್ರೇಮಾ ಮನೆಗೆ ಹೋಗೋಣ. "

"ನೀವು ನನಗೆ ತೋಟದ ವಿಷಯ ತಿಳಿಸಿಯೇ ಇರಲಿಲ್ಲ. ನನಗೆ ಗೊತ್ತಿದ್ದರೆ ನಾನು ಖಂಡಿತ ಬರುತ್ತಿರಲಿಲ್ಲ."

"ಅಯ್ಯೋ, ಹತ್ತು ನಿಮಿಷಗಳ ಕಾಲ ಇಲ್ಲಿ ಇರಬೇಕಾಗುವುದು. ಅಷ್ಟರಲ್ಲಿಯೇ ಆಗುವ ಅನರ್ಥವೇನು ?"

"ಟಾಂಗಾ ಹಿಂದಿರುಗಿಸಿ, ಇಲ್ಲವಾದಲ್ಲಿ ನಾನು ಕೆಳಕ್ಕೆ ಹಾರಿಬಿಡುವೆನು."

"ಗಾಡಿಯಿಂದ ಕೆಳಕ್ಕೆ ಧುಮುಕಿದರೆ ಕೈಕಾಲುಗಳು ಮುರಿದುಹೋಗುವುವು. ಇದರಿಂದ ನನಗಾವ ಕೆಡುಕೂ ಆಗಲಾರದು."

ಪೂರ್ಣಾ ಸಂಶಯ ದೃಷ್ಟಿಯಿಂದ ಕಮಲಾಪ್ರಸಾದನನ್ನು ನೋಡಿದಳು. "ಅವನು ನನ್ನನ್ನೇಕೆ ಈ ನಿರ್ಜನ ಪ್ರದೇಶಕ್ಕೆ ಕರೆದುಕೊಂಡು ಬಂದಿದ್ದಾನೆ ?

ಅವನು ಮನಸ್ಸಿನಲ್ಲಿ ಬೇರೆ ಯಾವುದಾದರೂ ನಿರ್ಧಾರ ಮಾಡಿಕೊಂಡಿರುವನೆ? ಇಲ್ಲ, ಅವನು ಇಷ್ಟು ಅಧಮನಲ್ಲ. ಬಂಗಲೆಯಲ್ಲಿ ಹತ್ತಾರು ನಿಮಿಷಗಳು ತಂಗಿರುವುದರಿಂದ ಆಗುವ ಅನರ್ಥವೇನು? ಅಲ್ಲಿಯೂ ಬೇರೆ ಜನರು ಮತ್ತು ಆಳುಕಾಳುಗಳು ಇದ್ದೇ ಇರುವರು."

ಸ್ವಲ್ಪ ಹೊತ್ತಿನಲ್ಲಿಯೇ ತೋಟ ಸಿಕ್ಕಿತು. ಕಮಲಾಪ್ರಸಾದನು ಟಾಂಗಾದಿಂದ ಇಳಿದು ಹೆಬ್ಬಾಗಿಲನ್ನು ತೆರೆದನು. ಅವನನ್ನು ನೋಡುತ್ತಲೇ ಇಬ್ಬರು ತೋಟದಾಳುಗಳು ಓಡಿ ಬಂದರು. ಒಬ್ಬನು ಕುದುರೆಯ ಲಗಾಮನ್ನು ಹಿಡಿದುಕೊಂಡನು, ಮತ್ತೊಬ್ಬನು ಕಮಲಾಪ್ರಸಾದನ ಹ್ಯಾಂಡ್ ಬ್ಯಾಗನ್ನು ಹಿಡಿದುಕೊಂಡನು. ಕಮಲಾಪ್ರಸಾದನು ಪೂರ್ಣಾಳನ್ನು ಮೆಲ್ಲನೆ ಕೆಳಕ್ಕೆ ಇಳಿಸಿದನು. ಅವಳನ್ನು ಒಳಗೆ ಅಲಂಕರಿಸಲ್ಪಟ್ಟಿರುವ ಬಂಗಲೆಗೆ ಕರೆದುಕೊಂಡು ಹೋಗಿ ಹೇಳಿದನು— "ಈ ಸ್ಥಳವು ಎರಡು ಮೂರು ಘಂಟೆಗಳ ಕಾಲ ನಿಲ್ಲಲಾಗದಷ್ಟು ಕೆಟ್ಟಿಲ್ಲ."

ಪೂರ್ಣಾ ಕುಶಲತೆಯಿಂದ ಆತ್ಮರಕ್ಷಣೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿದ್ದಳು. "ಪ್ರೇಮಾ ನನ್ನ ದಾರಿ ನೋಡುತ್ತಿರಬಹುದು. ಆದ್ದರಿಂದಲೇ ನಾನು ಆತುರಪಡುತ್ತಿದ್ದೆನು." ಎಂದಳು.

"ಅಲ್ಲ ಪೂರ್ಣಾ, ನನ್ನೆದುರಿಗೆ ನೆಪವನ್ನೇಕೆ ಮಾಡುತ್ತಿರುವೆ. ನನಗೆಲ್ಲವೂ ಗೊತ್ತಿದೆ. ನೀನು ನನ್ನನ್ನು ಇಷ್ಟು ದುರಾತ್ಮನೆಂದು ತಿಳಿಯುತ್ತೀಯೆ. ಮೊದಲು ನನಗೆ ಈ ವಿಷಯ ಲೇಶಮಾತ್ರವೂ ಗೊತ್ತಿರಲಿಲ್ಲ. ಯಾರ ಒಂದು ಸಂಕೇತದಿಂದ ನಾನು ನನ್ನ ಪ್ರಾಣತ್ಯಾಗ ಮಾಡುವುದಕ್ಕೂ ಸಿದ್ಧನಾಗಿದ್ದೇನೆಯೋ ಆ ದೇವಿಯು ನನ್ನನ್ನು ಇಷ್ಟು ನೀಚ ಮತ್ತು ಭ್ರಷ್ಟನೆಂದು ತಿಳಿದುಕೊಂಡಿದ್ದಾಳೆ. ಇದನ್ನು ತಿಳಿದ ಮೇಲೆ ನಾನು ಎಲ್ಲಿಯಾದರೂ ಮುಳುಗಿ ಸಾಯಬೇಕು."

ಪೂರ್ಣಾ ಲಜ್ಜಿತಳಾಗಿ ಹೇಳಿದಳು— "ನಾನು ನಿಮ್ಮನ್ನು ನೀಚ ಮತ್ತು ಭ್ರಷ್ಟರೆಂದು ತಿಳಿದಿರುವೆನೆಂದು ನಿಮಗೆ ಹೇಗೆ ಗೊತ್ತಾಯಿತು?"

"ಗಾಡಿಯಿಂದ ಧುಮುಕಿ ಓಡಿ ಹೋಗಲು ನೀನು ಸಿದ್ಧಳಾಗಿದ್ದುದು ಏಕೆ? ಪದೇ ಪದೇ ಟಾಂಗಾ ಹಿಂತಿರುಗಿಸಬೇಕೆಂದು ಹಠ ಮಾಡುತ್ತಿದ್ದುದೇಕೆ? ಮೇಲು ಹೊದಿಕೆಯನ್ನು ತೆಗೆದುಹಾಕು. ಸ್ವಲ್ಪ ಸಂತೋಷವಾಗಿ

ಕುಳಿತುಕೋ. ಇದೂ ನನ್ನ ಮನೆಯೇ ಹೊರತು ಛತ್ರವಲ್ಲ. ಸರಿ, ನೀನು ನನಗೆ ಇಷ್ಟು ಹೆದರುವುದೇಕೆ ಎಂಬುದನ್ನು ಈಗ ತಿಳಿಸು. ನಾನೇನು ಕೊಲೆ ಪಾತಕನೆ? ಲಂಪಟನೆ? ದರೋಡೆಕಾರನೆ? ಜೇಬುಗಳ್ಳನೆ? ನೀನು ನನ್ನ ವಿಷಯದಲ್ಲಿ ಇಂತಹ ಅಭಿಪ್ರಾಯವನ್ನಿಟ್ಟುಕೊಳ್ಳಲು ನಾನು ನಿನಗೆ ಮಾಡಿರುವ ಅಪರಾಧವಾದರೂ ಏನು? ನಾನು ನಿನ್ನ ಇಷ್ಟಕ್ಕೆ ವಿರುದ್ಧವಾಗಿ ಒಂದು ಮಾತನ್ನೂ ಆಡಿಲ್ಲ. ಇಷ್ಟಾದರೂ ನೀನು ನನ್ನನ್ನು ಇಷ್ಟು ನೀಚನೆಂದು ತಿಳಿಯುತ್ತೀಯೆ! ನಿನ್ನ ಈ ದುರ್ಭಾವನೆಗೆ ಒಂದೇ ಕಾರಣವಿರಬಹುದು. ಸುಮಿತ್ರೆಯು ನಿನಗೆ ಚಾಡಿ ಹೇಳಿರಬಹುದು. ಅವಳು ನಿನ್ನ ಬಳಿ ಕುಳಿತು ಹರಟೆ ಹೊಡೆಯುತ್ತಿರುವುದನ್ನು ನಾನು ಇಂದು ನೋಡಿದೆನು. ನೀನು ಅವಳ ಮಾತಿಗೆ ಮರುಳಾದೆ. ಅವಳು ನನ್ನ ವಿಷಯದಲ್ಲಿ ವಿಷವನ್ನೇ ಕಾರಿರಬಹುದೆಂದು ನಾನು ಬಲ್ಲೆ. ನನ್ನನ್ನು ಮೋಸಗಾರ, ನೀಚ, ಲಂಪಟ ಎಂದೆಲ್ಲ ಹೇಳಿರಬಹುದು. ಇದೆಲ್ಲವೂ ನಿನ್ನ ಮನಸ್ಸನ್ನು ನನ್ನ ಕಡೆಯಿಂದ ಬದಲಾಯಿಸುವುದಕ್ಕಾಗಿಯೇ. ಅವಳನ್ನು ನಾನು ಸಂಪೂರ್ಣವಾಗಿ ಬಲ್ಲೆ. ನಾನು ಅವಳು ಹೇಳಿದ ಹಾಗೆ ಕೇಳಿಕೊಂಡು ಇದ್ದರೆ, ನಾನು ಅವಳ ಆರಾಧ್ಯದೇವತೆ. ಸ್ವಾಮಿ ಮತ್ತು ದೈವ—ಎಲ್ಲವೂ ಆಗಿರುವೆನು. ಅವಳಿಗೆ ವಿರುದ್ಧವಾಗಿ ನಡೆದರೆ, ನಾನು ಲಂಪಟ, ದುಷ್ಟ ಮತ್ತು ಧೂರ್ತನಾಗುವೆನು. ನಾನು ಯಾರನ್ನಾದರೂ ಕಣ್ಣೆತ್ತಿ ನೋಡುವುದೂ ಕೂಡ ಅವಳಿಗೆ ಅಸಹ್ಯವೆನಿಸುತ್ತದೆ. ಇಲ್ಲ, ಅವಳು ನನ್ನನ್ನು ತನ್ನ ನಾಯಿಯನ್ನಾಗಿ ಮಾಡಿ ಇಟ್ಟುಕೊಳ್ಳಬೇಕೆಂದಿದ್ದಾಳೆ. ನಿತ್ಯವೂ ಅವಳ ಹಿಂದೆ ಹಿಂದೆ ಬಾಲ ಅಲ್ಲಾಡಿಸುತ್ತಾ ತಿರುಗಬೇಕು. ಅವಳ ಧ್ವನಿಯನ್ನು ಕೇಳುತ್ತಲೆ ಎಲ್ಲಿದ್ದರೂ ಅವಳ ಬಳಿಗೆ ಬಂದು ಅವಳ ಕಾಲುಗಳನ್ನು ನೆಕ್ಕಬೇಕು. ಆಗ ಅವಳು ನನ್ನನ್ನು ತನ್ನ ಮೇಜಿನ ಮೇಲೆ ಕುಳ್ಳಿರಿಸಿಕೊಳ್ಳುವಳು. ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಪ್ರೀತಿಸುವಳು, ಮುದ್ದಿಸುವಳು, ಮೃದುವಾಗಿ ನನ್ನನ್ನು ತಟ್ಟುವಳು ಮತ್ತು ನನ್ನ ಶರೀರವನ್ನೆಲ್ಲಾ ಸವರುವಳು. ಆದರೆ ಎಲ್ಲಿಯಾದರೂ ಅವಳ ಸಂಕೇತಕ್ಕನುಸಾರವಾಗಿ ಕುಣಿಯದಿದ್ದರೆ, ಅವಳ ದೊಣ್ಣೆ, ಹಂಟರ್ ಮತ್ತು ಒದೆತಗಳನ್ನು ತಿನ್ನಲು ಸಿದ್ಧನಾಗಿರಬೇಕು. ನಾನು ನಾಯಿಯ ಬಾಳನ್ನು ಬಾಳಲು ಸಿದ್ಧನಾಗಿದ್ದರೆ, ಇಂದು ನನ್ನಂಥ ಭಾಗ್ಯಶಾಲಿಯು ಬೇರೊಬ್ಬನಿರುತ್ತಿರಲಿಲ್ಲ. ಆದರೆ ನನ್ನಲ್ಲಿ ಆ ಗುಣ

ವಿಲ್ಲದಿರುವುದು ನನ್ನ ದೌರ್ಭಾಗ್ಯ. ನಾನು ಗಂಡಸು, ಗಂಡಸಾಗಿಯೇ ಬದುಕಬೇಕೆಂದಿದ್ದೇನೆ."

ಪೂರ್ಣಾಳ ಮನಸ್ಸಿನಲ್ಲಿದ್ದ ಸುಮಿತ್ರೆಯ ಮಂತ್ರವಿದ್ಯೆಯೆಲ್ಲಾ ಕ್ರಮೇಣ ಕಡಿಮೆಯಾಗಲಾರಂಭಿಸಿತು. ಚಂಚಲ ಸ್ವಭಾವವು ದುರ್ಬಲ ಹೃದಯಗಳ ಮುಖ್ಯ ಲಕ್ಷಣ. ಅಂತಹವರ ಮೇಲೆ ಅನ್ಯರ ಮಾತಿನ ಪರಿಣಾಮ ಉಂಟಾಗುವುದಕ್ಕೂ, ಹಾಗೆ ಉಂಟಾದ ಪರಿಣಾಮವು ಲುಪ್ತವಾಗುವುದಕ್ಕೂ ಕಾಲಾವಕಾಶವೇ ಬೇಕಿಲ್ಲ.

"ಅವಳಾದರೋ ಅಪರಾಧವೆಲ್ಲವೂ ನಿಮ್ಮದೇ ಎನ್ನುತ್ತಾಳೆ" ಎಂದಳು ಪೂರ್ಣಾ.

"ಹೌದು, ಹೌದು, ಅವಳು ಹೇಳುವುದು ಹಾಗೆಯೇ. ಮತ್ತೇನು ಹೇಳುತ್ತಿದ್ದಳು ?"

"ನೂರಾರು ಮಾತು ಕತೆಗಳು ನಡೆದುವು, ಎಷ್ಟೂ ಅಂತ ಹೇಳಲಿ ? ನನಗೆ ಜ್ಞಾಪಕವೂ ಇಲ್ಲ."

"ಆದ್ದರಿಂದಲೇ ನೀನು ನನ್ನ ಬಳಿ ಬರಲು ಗಾಬರಿ ಬೀಳುತ್ತಿದ್ದೆ. ನಿನಗೆ ಈ ತೋಟ ಒಪ್ಪಿಗೆಯಾಯಿತೇ ?"

"ಸ್ಥಳವೇನೋ ಕೆಟ್ಟದ್ದಲ್ಲ."

"ನಿನ್ನನ್ನು ಒಂದೆರಡು ತಿಂಗಳು ಇಲ್ಲಿಯೇ ಇಟ್ಟಿರಬೇಕೆಂದು ನನಗೆ ಇಷ್ಟವಾಗುತ್ತಿದೆ."

"ಸುಮಿತ್ರೆ ಒಪ್ಪಿದ ಮೇಲಲ್ಲವೇ ಆ ವಿಷಯ !"

"ಅವಳನ್ನಂತೂ ನಾನು ಮರೆತಾದರೂ ಕರೆತರುವೆನೇ ?"

"ಹಾಗಾದರೆ ನಾನು ಒಂಟಿಯಾಗಿ ಇಲ್ಲಿ ಹೇಗಿರಬಲ್ಲೆ ?"

"ನೀನು ಇಲ್ಲಿರುವ ಸಮಾಚಾರ ಯಾರಿಗೂ ತಿಳಿಯಲಾರದು. ನೀನು ಬೃಂದಾವನಕ್ಕೆ ಹೋಗುವಳೆಂಬ ವದಂತಿಯನ್ನು ಹುಟ್ಟಿಸುವೆನು. ಆದರೆ ನೀನು ಮಾತ್ರ ಇದೇ ತೋಟದಲ್ಲಿರಬೇಕಾಗುವುದು. ನಾನು ದಿನಕ್ಕೊಂದು ಸಾರಿ ಮನೆಗೆ ಹೋಗಿಬರುವೆನು. ಯಾರ ಕಿವಿಗೂ ಈ ವಿಷಯ ಬೀಳಕೂಡದೆಂದು ಇಲ್ಲಿನ ಆಳುಕಾಳುಗಳಿಗೆ ಕಟ್ಟಪ್ಪಣೆ ಮಾಡುವೆನು. ಆ ಆನಂದದ ಕಲ್ಪನೆಯಿಂದಲೇ ನನ್ನ ಹೃದಯವು ಪುಲಕಿತವಾಗುತ್ತಿದೆ. ಆ ಜೀವನವೇ

ನನ್ನ ಪ್ರಾಪಂಚಿಕ ಆನಂದದ ಸ್ವರ್ಗವಾಗುವುದು. ಯಾವ ವಿಷಯವಾಗಲೀ ಭಗವಂತನ ಇಚ್ಛೆಯಿಲ್ಲದೆ ನಡೆಯಲಾರದು, ಪೂರ್ಣಾ! ಆವನ ಅಪ್ಪಣೆ ಇಲ್ಲದೆ ಒಂದು ಎಲೆಯೂ ಅಲುಗಲಾರದು. ಸುಮಿತ್ರೆಯು ನನ್ನೊಡನೆ ಕೋಪಿಸಿಕೊಂಡಿರುವುದೂ ಭಗವಂತನ ಇಚ್ಛೆಯೇ. ನೀನು ನನ್ನ ವಿಷಯ ದಲ್ಲಿ ಕೃಪಾದೃಷ್ಟಿಯುಳ್ಳವಳಾಗಿರುವುದೂ ದೈವ ಪ್ರೇರಣೆಯಿಂದಲೇ. ನನ್ನ ನಿನ್ನ ಮಿಲನವು ದೈವೇಚ್ಛೆಯಿಲ್ಲದೆ ಆಗಬಲ್ಲುದೇ? ಎಂದೆಂದಿಗೂ ಇಲ್ಲ. ಅವನೇಕೆ ಈ ಲೀಲೆಯನ್ನಾಡುತ್ತಿರುವನೆಂಬುದನ್ನು ನೀನು ಮತ್ತು ನಾನು ತಿಳಿದುಕೊಳ್ಳ ಲಾರೆವು ಪೂರ್ಣಾ! ಮಹಾಮಹಿಮರಾದ ಋಷಿಗಳೂ ತಿಳಿಯಲಾರರು; ಆದರೆ ಎಲ್ಲವೂ ಅವನ ಇಚ್ಛೆಯಿಂದಲೇ ನಡೆಯುತ್ತಿದೆ. ಧರ್ಮ ಮತ್ತು ಅಧರ್ಮಗಳೆಲ್ಲವೂ ಬೂಟಾಟಿಕೆಗಳು. ಒಂದು ವೇಳೆ ನಿನ್ನ ಮನಸ್ಸಿನಲ್ಲಿ ಯಾವ ವಿಧವಾದ ಧಾರ್ಮಿಕ ಸಂಶಯವೇನಾದರೂ ಉಳಿದಿದ್ದರೆ, ಅದನ್ನು ನಿನ್ನ ಮನಸ್ಸಿನಿಂದ ತೊಲಗಿಸಿ ಬಿಡು. ಇಂದಿನಿಂದ ನೀನು ನನ್ನ ಪ್ರಾಣೇಶ್ವರಿ ಮತ್ತು ನಾನು ನಿನ್ನ ಗುಲಾಮ."

ಹೀಗೆ ಹೇಳುತ್ತಾ ಹೇಳುತ್ತಾ ಕಮಲಾಪ್ರಸಾದನು ಪೂರ್ಣಾಳ ಕೈಹಿಡಿದು ಕೊಂಡು ತನ್ನ ಕೊರಳ ಮೇಲೆ ಹಾಕಿಕೊಂಡನು ಮತ್ತು ಇಬ್ಬರೂ ಗಾಢಾಲಿಂ ಗನದಲ್ಲಿ ತಲ್ಲೀನರಾದರು! ಪೂರ್ಣಾ ಸ್ವಲ್ಪವಾದರೂ ಸಂಕೋಚಪಡಲಿಲ್ಲ. ತನ್ನನ್ನು ಅವನ ಹಿಡಿತದಿಂದ ಬಿಡಿಸಿಕೊಳ್ಳಲು ಲೇಶಮಾತ್ರವೂ ಪ್ರಯತ್ನಿಸಲಿಲ್ಲ. ಆದರೆ ಅವಳ ಮುಖದಲ್ಲಿ ಪ್ರಫುಲ್ಲತೆಯ ಯಾವ ಚಿಹ್ನೆಯೂ ಇರಲಿಲ್ಲ; ಅವಳ ಚೆಂದುಟಿಗಳ ಮೇಲೆ ಮಂದಹಾಸದ ಸುಳಿವೂ ಇರಲಿಲ್ಲ; ಕಪೋಲಗಳ ಮೇಲೆ ಗುಲಾಬಿಯ ಕೆಂಪೂ ಮೂಡಿರಲಿಲ್ಲ; ಕಣ್ಣುಗಳಲ್ಲಿ ಅನುರಾಗದ ಕೆಂಬಣ್ಣವೂ ಕಾಣಿಸುತ್ತಿರಲಿಲ್ಲ. ಅವಳ ಮುಖಕಮಲವು ಬಾಡಿ ಹೋಗಿತ್ತು; ಅಧೋವದನೆ ಯಾದ ಅವಳ ಕಣ್ಣುಗಳು ಅಶ್ರುಪೂರ್ಣವಾಗಿದ್ದುವು; ದೇಹವೆಲ್ಲವೂ ಶಿಥಿಲವಾ ದಂತೆ ಅವಳಿಗೆ ಭಾಸವಾಗುತ್ತಿತ್ತು.

ಕಮಲಾಪ್ರಸಾದನು ಕೇಳಿದನು—"ಪ್ರಿಯೆ, ಇಷ್ಟೇಕೆ ಬೇಸರದಿಂದಿರುವೆ? ಇದಾದರೋ ಆನಂದದ ಸಮಯ."

ಪೂರ್ಣಾ ದುಃಖಮಿಶ್ರಿತವಾದ ಧ್ವನಿಯಲ್ಲಿ ಹೇಳಿದಳು— "ನಾನು ಬೇಸರದಿಂದಿಲ್ಲ."

ಪೂರ್ಣಾ ತಾನು ಬೇಸರದಿಂದಿದ್ದ ಕಾರಣವನ್ನು ಕಮಲಾಪ್ರಸಾದನಿಗೆ ಹೇಳಲು ಇಷ್ಟಪಡಲಿಲ್ಲ. ಅವಳಿಗೆ ಈ ಸಮಯದಲ್ಲಿ ವಸಂತಕುಮಾರನ ಜ್ಞಾಪಕವಿರಲಿಲ್ಲ; ಅಧರ್ಮದ ಶಂಕೆಯಿರಲಿಲ್ಲ; ಆದರೆ ಕಮಲಾಪ್ರಸಾದನ ಗಾಢಾಲಿಂಗನದಲ್ಲಿ ಬಂಧಿತಳಾಗಿದ್ದ ಅವಳಿಗೆ ಈ ಪ್ರಣಯದ ಅಂತ್ಯವು ಇಷ್ಟೇ ಭಯಂಕರವಾಗಬಹುದೇ ಎಂಬ ಸಂಶಯವಾಗುತ್ತಿತ್ತು. ಕಠೋರ ವಿಧಿ ಲೀಲೆಯು ಪುನಃ ಅವಳ ಸುಖಸ್ವಪ್ನವನ್ನು ಭಂಗಪಡಿಸುವುದೇ? ಈ ದೃಶ್ಯವು ಅವಳ ಕಣ್ಣೆದುರಿಗೆ ಒಂದೇ ಸಮನೆ ಸುತ್ತಲಾರಂಭಿಸಿತು. ಮೊಟ್ಟಮೊದಲು ಅವಳ ಪತಿಯು ಅವಳನ್ನು ಆಲಿಂಗಿಸಿಕೊಂಡಾಗ, ಅವಳ ಹೃದಯವು ಎಷ್ಟು ಆನಂದ, ಅಭಿಲಾಷೆಗಳಿಂದ ತುಂಬಿತ್ತು! ಆದರೆ ಈಗ ಅಭಿಲಾಷೆಗಳಿಗೆ ಬದಲು ಅವಳ ಮನಸ್ಸಿನಲ್ಲಿ ವಿಧವಿಧ ಸಂಶಯಗಳು ತಲೆದೋರುತ್ತಿದ್ದುವು. ವಿಘ್ನಗಳು ಗೋಚರಿಸುತ್ತಿದ್ದುವು.

ಅವಳು ಇದೇ ಅರ್ಧ ಚೇತನಾವಸ್ಥೆಯಲ್ಲಿದ್ದಳು. ಅಷ್ಟರಲ್ಲಿಯೇ ಕಮಲಾಪ್ರಸಾದನು ಅವಳನ್ನು ಮೆಲ್ಲಗೆ ಒಂದು ಮಂಚದ ಮೇಲೆ ಮಲಗಿಸಿದನು. ಅನಂತರ ಬಾಗಿಲು ಮುಚ್ಚಿ ಅಗುಳಿ ಹಾಕಲು ಹೋಗುತ್ತಿದ್ದನು. ಆಗ ಪೂರ್ಣಾ ಅವನ ಮುಖದ ಕಡೆ ನೋಡಿದಳು; ಅವಳು ಬೆಚ್ಚಿಬಿದ್ದಳು; ಕಮಲಾ ಪ್ರಸಾದನ ಎರಡು ಕಂಗಳಿಂದಲೂ ಕಿಡಿಗಳು ಉದುರುತ್ತಿವೆಯೋ ಎಂಬಂತೆ ಕಾಣುತ್ತಿತ್ತು. ಅದು ಆಂತರಿಕ ಉಲ್ಲಾಸದ ದಿವ್ಯ ಮಧುರ ಜ್ಯೋತಿಯಾಗಿರಲಿಲ್ಲ. ಅದು ಯಾವುದೋ ದುಷ್ಟ ಜಂತುವಿನ ರಕ್ತಪಿಪಾಸೆಯ ಪ್ರತಿಬಿಂಬವಾಗಿತ್ತು. ಇವುಗಳಲ್ಲಿ ಪ್ರೇಮಿಯಲ್ಲಿರಬೇಕಾದ ಪ್ರದೀಪ್ತ ಆಕಾಂಕ್ಷೆ ಇರಲಿಲ್ಲ; ವ್ಯಾಧನ ಹಿಂಸಾ ಸಂಕಲ್ಪವಿತ್ತು. ಇವುಗಳಲ್ಲಿ ಶ್ರಾವಣ ಮಾಸದ ಕಾರ್ಮೋಡಗಳ ಸುಖದಾಯಕವಾದ ಕಾಂತಿ ಇರಲಿಲ್ಲ, ಗ್ರೀಷ್ಮಕಾಲದ ಮೇಘಮಾಲೆಗಳ ಭೀಷಣ ಪ್ರವಾಹ ಇತ್ತು. ಇವುಗಳಲ್ಲಿ ಶರದೃತುವಿನ ನಿರ್ಮಲ ಜಲಪ್ರವಾಹದ ಕೋಮಲ ಸಂಗೀತವಿರಲಿಲ್ಲ, ವರ್ಷಾಕಾಲದ ಪ್ರಳಯಕಾರಿ ಪ್ರವಾಹದ ಭಯಂಕರ ನಾದವಿತ್ತು. ಪೂರ್ಣಾ ತುಂಬಾ ಹೆದರಿದಳು. ಅವಳು ಮಂಚದಿಂದ ಒಂದೇ ನೆಗೆತದಿಂದ ಮೇಲೆದ್ದಳು, ಕಮಲಾಪ್ರಸಾದನ ಕೈಯನ್ನು ಬಲವಾಗಿ ಎಳೆದು ಬಾಗಿಲು ತೆರೆದುಕೊಂಡು ಕೈಸಾಲೆಗೆ ಹೊರಟು ಬಂದಳು.

ಕಮಲಾಪ್ರಸಾದನು ಕ್ರೂರ ದೃಷ್ಟಿಯಿಂದ ನೋಡಿ ಹೇಳಿದನು—

"ಇದೇಕೆ ಪೂರ್ಣಾ ? ಎಲ್ಲಿಗೆ ಹೋಗುತ್ತೀಯೆ ?"

ಪೂರ್ಣಾ ನಿರ್ಭಯವಾಗಿ ಹೇಳಿದಳು— "ನಾನು ಮನೆಗೆ ಹೋಗುವೆನು. ಟಾಂಗಾ ಎಲ್ಲಿದೆ ?"

"ಮನೆಗೆ ಹೋಗಲು ಈಗಲೇ ಏಕಿಷ್ಟು ಆತುರ? ನೀನೇಕೆ ಹೆದರಿದೆ ?"

"ಟಾಂಗಾ ತೆಗೆದುಕೊಂಡು ಬನ್ನಿರಿ, ನಾನು ಹೋಗುವೆನು."

"ಇಷ್ಟು ಜಾಗ್ರತೆ ನೀನು ಹೋಗಲಾರೆ, ಪೂರ್ಣಾ! ಇದ್ದಕ್ಕಿದ್ದಂತೆಯೇ ನಿನಗಿದೇನಾಯಿತು ?"

"ಏನೂ ಆಗಲಿಲ್ಲ; ನಾನು ಇಲ್ಲಿ ಒಂದು ಕ್ಷಣಕಾಲವೂ ನಿಲ್ಲಲಾರೆ."

"ಒಂದುವೇಳೆ ನಾನು ನಿನ್ನನ್ನು ಹೋಗಗೊಡದಿದ್ದರೆ ?"

"ನೀವು ನನ್ನನ್ನು ತಡೆಯಲಾರಿರಿ."

"ನಾನು ತಡೆದೆನೆಂತಲೇ ತಿಳಿದುಕೋ. ಆಗ ?"

ಕಮಲಾಪ್ರಸಾದನು ನಕ್ಕು ಹೇಳಿದನು—"ನಿನ್ನ ಕೂಗಾಟವನ್ನು ಕೇಳುವವರು ಇಲ್ಲಿ ಯಾರಿದ್ದಾರೆ ? ಈಗ ನೀನು ನನ್ನ ಹಿಡಿತದಲ್ಲಿದ್ದೀಯೆ. ಈಗ ಇಲ್ಲಿಂದ ತಪ್ಪಿಸಿಕೊಂಡು ಹೋಗಲಾರೆ; ಇಬ್ಬರು ತೋಟಗಾರರೂ ನನ್ನ ಆಳುಗಳು ! ಅವರು ನಿನ್ನ ಸಹಾಯಕ್ಕೆ ಎಂದೆಂದಿಗೂ ಬರಲಾರರು. ಮೂರನೆಯ ಮನುಷ್ಯ ಇಲ್ಲಿ ಒಂದು ಮೈಲಿಯ ಸುತ್ತಳತೆಯಲ್ಲಿ ಯಾರೂ ಇಲ್ಲ."

ಪೂರ್ಣಾ ಕಮಲಾಪ್ರಸಾದನ ಕಡೆಗೆ ಆಗ್ನೇಯ ನೇತ್ರಗಳಿಂದ ನೋಡಿ ಹೇಳಿದಳು— "ರಾಯರೆ, ನಾನು ಕೈಜೋಡಿಸಿಕೊಂಡು ಹೇಳುತ್ತೇನೆ, ನೀವು ನನ್ನನ್ನು ಇಲ್ಲಿಂದ ಕಳುಹಿಸಿ ಬಿಡಿರಿ, ಇಲ್ಲವಾದಲ್ಲಿ ಇದರ ಪರಿಣಾಮ ಚೆನ್ನಾಗಲಾರದು. ನೀವೆ ಯೋಚಿಸಿರಿ, ಈಗ ತಾನೇ ಒಂದು ನಿಮಿಷಕ್ಕೆ ಮುಂಚೆ ನೀವು ಎಂತೆಂತಹ ಮಾತುಗಳನ್ನಾಡುತ್ತಿದ್ದಿರಿ ? ನನ್ನ ಮೇಲೆ ಬಲಾತ್ಕಾರದಿಂದ ಅತ್ಯಾಚಾರ ಮಾಡಲು ಸಿದ್ಧರಾಗುವಷ್ಟು ದುರ್ಬಲರೆ, ನೀವು ? ಆದರೆ ನೀವು ಭ್ರಾಂತರಾಗಿದ್ದೀರಿ, ನಾನು ನನ್ನ ಸ್ತ್ರೀಧರ್ಮವನ್ನು ನಷ್ಟ ಮಾಡಿಕೊಳ್ಳುವುದಕ್ಕೆ ಮುಂಚೆ ನನ್ನ ಪ್ರಾಣತ್ಯಾಗ ಮಾಡುವೆನು ಅಥವಾ ನಿಮ್ಮ ಪ್ರಾಣವನ್ನಾದರೂ ತೆಗೆದುಕೊಳ್ಳುವೆನು."

ಕಮಲಾಪ್ರಸಾದನು ವಿನೋದ ಮಾಡುತ್ತಾ ಹೇಳಿದನು— "ಹಾಗಾದರೆ ನೀನು ನಿಜವಾಗಿಯೂ ವೀರಮಹಿಳೆ. ಆದರೆ ಇದು ರಂಗಮಂಟಪವಲ್ಲ

ವೆಂಬ ವಿಷಯವನ್ನು ಖೇದದಿಂದ ಹೇಳಬೇಕಾಗಿದೆ. ಇಲ್ಲಿ ನಿನ್ನ ಸಾಹಸವನ್ನು ನೋಡಿ ಚಪ್ಪಾಳೆ ಹೊಡೆಯುವವರು ಯಾರೂ ಇಲ್ಲ."

ಹೀಗೆ ಹೇಳುತ್ತಾ ಕಮಲಾಪ್ರಸಾದನು ಒಂದು ಹೆಜ್ಜೆ ಮುಂದಿಟ್ಟನು ಮತ್ತು ಪೂರ್ಣಾಳ ಕೈಹಿಡಿಯಲು ಪ್ರಯತ್ನಿಸಿದನು. ಪೂರ್ಣಾ ತಟಕ್ಕನೆ ಹಿಂದಕ್ಕೆ ಸರಿದಳು. ಕಮಲಾಪ್ರಸಾದನು ಇನ್ನೂ ಮುಂದೆ ಬಂದನು. ತಟಕ್ಕನೆ ಪೂರ್ಣಾ ತನ್ನ ಎರಡು ಕೈಗಳಿಂದಲೂ ಒಂದು ಕುರ್ಚಿಯನ್ನು ಎತ್ತಿಕೊಂಡು ಅದನ್ನು ಕಮಲಾಪ್ರಸಾದನ ಮುಖದ ಮೇಲೆ ಬಲವಾಗಿ ಅಪ್ಪಳಿಸಿದಳು. ಕುರ್ಚಿಯ ಒಂದು ಕಾಲು ಬಲವಾಗಿ ಕಮಲಾಪ್ರಸಾದನ ಮುಖಕ್ಕೆ ತಗುಲಿತು. ಅವನ ಮೂಗಿಗೆ ಬಲವಾಗಿ ಪೆಟ್ಟು ಬಿದ್ದಿತು ಮತ್ತು ಅವನ ಒಂದು ಹಲ್ಲೂ ಮುರಿದು ಹೋಯಿತು. ಅವನು ಆ ಹೊಡೆತದಿಂದ ಚೇತರಿಸಿಕೊಳ್ಳಲಸಮರ್ಥನಾದನು. ಗಕ್ರನೆ ತಿರುಗಿ ಕೆಳಕ್ಕೆ ಬಿದ್ದುಬಿಟ್ಟನು. ಮೂಗಿನಿಂದ ಧಾರಾಕಾರವಾಗಿ ರಕ್ತ ಹರಿಯತೊಡಗಿತು. ಅವನು ಮೂರ್ಛೆ ಹೋದನು. ಅವನನ್ನು ಈ ಸ್ಥಿತಿಯಲ್ಲಿಯೇ ಬಿಟ್ಟು ಪೂರ್ಣಾ ಒಂದೇ ನೆಗೆತಕ್ಕೆ ಹಾರಿ ತೋಟದಿಂದ ಹೊರಕ್ಕೆ ಹೊರಟು ಬಂದಳು. ರಸ್ತೆಯಲ್ಲಿ ಈಗ ನೀರವತೆ ಇತ್ತು. ಪೂರ್ಣಾಗೆ ಈಗ ತನ್ನ ಜೀವರಕ್ಷಣೆ ಮಾಡಿಕೊಳ್ಳುವ ಚಿಂತೆಯಾಯಿತು. ಎಲ್ಲಿಯಾದರೂ ಯಾರಾದರೂ ಅವಳನ್ನು ಹಿಡಿದುಕೊಂಡರೆ ಗತಿಯೇನು ? ಖೈದಿಯಾಗಿ, ಬೇಡಿಗಳನ್ನು ತೊಟ್ಟುಕೊಂಡು ಸಾವಿರಾರು ಜನರೆದುರಿಗೆ ಹೋಗುವುದು ಅವಳಿಗೆ ಅಸಹ್ಯವೆನಿಸಿತು. ಯಾವುದಕ್ಕೂ ಕಾಲಾವಕಾಶವೇ ಇರಲಿಲ್ಲ. ಅಡಗಿಕೊಳ್ಳೋಣವೆಂದರೆ ಸ್ಥಳವೂ ಇರಲಿಲ್ಲ. ಕೂಡಲೆ ಅವಳಿಗೆ ಒಂದು ಸಣ್ಣ ಸೇತುವೆ ಕಾಣಿಸಿತು. ಅವಳು ಹಾರಿ ರಸ್ತೆಯಿಂದ ಕೆಳಕ್ಕಿಳಿದು ಅದೇ ಸೇತುವೆಯ ಕೆಳಗೆ ಅಡಗಿಕೊಂಡಳು.

ಈ ಸಮಯದಲ್ಲಿ ಆ ಅಬಲೆಯ ಸ್ಥಿತಿಯು ಅತ್ಯಂತ ಕರುಣಾಜನಕವಾಗಿತ್ತು. ಎದೆಯು ಬಡಿದುಕೊಳ್ಳುತ್ತಿತ್ತು. ಜೀವವನ್ನು ಬಿಗಿ ಹಿಡಿದುಕೊಂಡು ಕುಳಿತಿದ್ದಳು. ಸ್ವಲ್ಪ ಸದ್ದಾಯಿತೆಂದರೆ ಅವಳು ಬೆಚ್ಚಿ ಬೀಳುತ್ತಿದ್ದಳು. ರಸ್ತೆಯ ಮೇಲೆ ತಿರುಗಾಡುವವರ ನೆರಳು ನಾಲೆಯಲ್ಲಿ ಬೀಳುತ್ತಿರುವುದನ್ನು ನೋಡಿ ಅವಳ ಕಣ್ಣಿಗೆ ಕತ್ತಲೆ ಕವಿದಂತಾಗುತ್ತಿತ್ತು. ಯಾರಾದರೂ ತನ್ನನ್ನು ಹಿಡಿದುಕೊಂಡು ಹೋಗಲು ಬರುತ್ತಿದ್ದಾರೋ ಎನಿಸುತ್ತಿತ್ತು ಅವಳಿಗೆ. ಒಂದು

ವೇಳೆ ಯಾರಾದರೂ ಬಂದರೆ ಅವಳೇನು ಮಾಡುವಳು ? ಅವಳು ಒಂದು ಇಟ್ಟಿಗೆಯನ್ನು ತನ್ನ ಬಳಿ ಇಟ್ಟುಕೊಂಡಿದ್ದಳು. ಈ ಇಟ್ಟಿಗೆಯನ್ನೇ ತನ್ನನ್ನು ಹಿಡಿಯಲು ಬಂದವರ ಮೇಲೆ ಬಲವಾಗಿ ಅಪ್ಪಳಿಸಬೇಕೆಂದಿದ್ದಳು. ಪೋಲೀಸಿನವರ ಬಂಧನಕ್ಕೆ ಸಿಕ್ಕುವುದಕ್ಕಿಂತ ತಲೆಯೊಡೆದುಕೊಂಡು ಸಾಯುವುದು ಎಷ್ಟೋ ಪಾಲು ಮೇಲೆನಿಸುತ್ತಿತ್ತು. ರಸ್ತೆಯ ಮೇಲೆ ಓಡಾಡುವರ ಗಲಾಟೆಯು ಕೇಳಿಬರುತ್ತಿತ್ತು. ಅವರಾಡುವ ಮಾತುಗಳೂ ಕೂಡ ಆಗಾಗ್ಗೆ ಅವಳ ಕಿವಿಗೆ ಬೀಳುತ್ತಿದ್ದುವು. ಒಬ್ಬ ತೋಟಗಾರನು ಬದರೀಪ್ರಸಾದರಿಗೆ ವರ್ತಮಾನವನ್ನು ತಿಳಿಸಲು ಓಡಿ ಹೋಗಿದ್ದನು. ಒಂದು ಘಂಟೆಯ ನಂತರ ಆ ರಸ್ತೆಯಲ್ಲಿ ಒಂದು ಸಾರೋಟ್ ಬಂದಿತು. ಬದರೀಪ್ರಸಾದರು ಬಂದರೆಂದು ಗೊತ್ತಾಯಿತು. ಪರಸ್ಪರ ಏನೇನು ಮಾತುಕತೆಗಳಾಗಿರಬಹುದು? ಪ್ರಾಯಶಃ ಪೋಲಿಸ್ ಸ್ಟೇಶನ್ನಿಗೆ ದೂರು ಕೊಟ್ಟಿರಬಹುದು ? ಇದಾದ ನಂತರ ತೋಟದಿಂದ ಒಂದು ಜಟಕಾ ಗಾಡಿ ಹೊರಟು ಬರುತ್ತಿರುವುದು ಕೇಳಿಸಿತು. ಪ್ರಾಯಶಃ ಇವನು ವೈದ್ಯನಿರಬಹುದು. ಬಲವಾದ ಘಾಯವೇನೂ ಆಗಿರಲಿಲ್ಲ, ಆದರೆ ದೊಡ್ಡಮನುಷ್ಯರಿಗೆ ಅಲ್ಪ ವಿಷಯವೇ ಮಹತ್ತರವಾಗುತ್ತಿದೆ.

ಈ ಸಮಯದಲ್ಲಿ ಪೂರ್ಣಾಗೆ ತನ್ನ ದಿಟ್ಟತನಕ್ಕಾಗಿ ಪಶ್ಚಾತ್ತಾಪವಾಯಿತು. ಅವಳು ಸ್ವಲ್ಪ ಧೈರ್ಯದಿಂದ ಕೆಲಸ ಮಾಡಿದ್ದರೆ, ಕಮಲಾಪ್ರಸಾದನು ಎಂದೂ ಇಂತಹ ನೀಚತನಕ್ಕೆ ಕೈಹಾಕುತ್ತಿರಲಿಲ್ಲ. ಚಮತ್ಕಾರದಿಂದಲೇ ಕೆಲಸವಾಗುತ್ತಿತ್ತು; ಆದರೆ ವಿಧಿಲೀಲೆಯನ್ನು ತಪ್ಪಿಸುವರಾರು? ಆದರೆ ಆದದ್ದು ಒಳ್ಳೆಯದೇ ಆಯಿತು. ಈ ಅಯೋಗ್ಯನ ದುರಭ್ಯಾಸವು ಸುಧಾರಿಸುವುದು. ಈಗ ಮರೆತೂ ಕೂಡ ಇಂತಹ ತುಂಟತನಕ್ಕೆ ಕೈ ಹಾಕುವುದಿಲ್ಲ. ಸ್ತ್ರೀಜಾತಿ ಏನು ಮಾಡಬಲ್ಲದೆಂದು ರಾಯರು ತಿಳಿದಿರಬಹುದು. ಸ್ತ್ರೀಯರೆಲ್ಲರೂ ಪುರುಷರ ಬೆದರಿಕೆಗೆ ತಲೆ ಬಾಗುವರೆಂದು ಭ್ರಾಂತರಾಗಿರಬಹುದು. ಎಲ್ಲಾ ಸ್ತ್ರೀಯರೂ ಒಂದೇ ರೀತಿಯಲ್ಲಿರುವುದಿಲ್ಲವೆಂಬುದನ್ನು ಅವರರಿಯರು

ಸುಮಿತ್ರೆಯಂತೂ ಈ ವಿಷಯವನ್ನು ಕೇಳಿ ಹಿಗ್ಗಿ ಹೋಗುವಳು. ಈ ಲಂಪಟನನ್ನು ಚೆನ್ನಾಗಿ ವಿನೋದ ಮಾಡುವಳು. ಇವನು ಜೀವಮಾನ ಕಾಲದಲ್ಲೆಲ್ಲಾ ಜ್ಞಾಪಕದಲ್ಲಿಟ್ಟುಕೊಳ್ಳುವಂತೆ ತರಾಟೆಗೆ ತೆಗೆದುಕೊಳ್ಳುವಳು. ಲಾಲಾ ಬದರೀಪ್ರಸಾದರೂ ಕೂಡ ಮಗನಿಗೆ ತಕ್ಕ ಶಾಸ್ತಿ ಮಾಡುವರು. ಆದರೆ

ತಾಯಿಸುವವರಿಗೆ ಇದು ವೇದನೆಯನ್ನುಂಟು ಮಾಡುವುದು. ಅವರ ದೃಷ್ಟಿಯಲ್ಲಿ ಅವರ ಮಗ ದೇವತೆ. ಹಾಲಿನಲ್ಲಿ ಅಭಿಷಿಕ್ತನಾದವನಂತೆ ಪವಿತ್ರನು.

ಸೇತುವೆಯ ಕೆಳಗೆ ಪ್ರಾಣಿಗಳ ಮೂಳೆಗಳು ಬಿದ್ದಿದ್ದುವು. ನೆರೆಹೊರೆಯಲ್ಲಿದ್ದ ನಾಯಿಗಳು ತಮ್ಮ ಪ್ರತಿಸ್ಪರ್ಧಿಗಳ ಜಗಳದಿಂದ ಪಾರಾಗಲು ಸಿಕ್ಕಿದ ಕಡೆಯಿಂದ ಮೂಳೆಗಳನ್ನು ತಂದು ತಂದು ಏಕಾಂತ ಸ್ಥಾನದಲ್ಲಿ ರಸಾಸ್ವಾದನೆ ಮಾಡಿದ್ದುವು. ಅವುಗಳಿಂದ ದುರ್ವಾಸನೆ ಬರುತ್ತಿತ್ತು. ಅತ್ತಿತ್ತ ಚಿಂದಿಬಟ್ಟೆಗಳು, ಮಾವಿನಕಾಯಿ ಗೊರಟಗಳು, ಕಾಗದದ ಚೂರುಗಳು ಬಿದ್ದಿದ್ದುವು. ಇಷ್ಟು ಹೊತ್ತಿನ ವರೆಗೆ ಪೂರ್ಣಾ ಈ ಅಸಹ್ಯ ದೃಶ್ಯದ ಕಡೆಗೆ ಗಮನ ಕೊಟ್ಟಿರಲಿಲ್ಲ. ಈಗ ಅವುಗಳನ್ನು ನೋಡಿ ಅವಳಿಗೆ ಜಿಗುಪ್ಸೆಯಾಯಿತು. ಆದರೆ ಹೋಗುವುದೆಲ್ಲಿಗೆ? ಮೂಗು ಮುಚ್ಚಿಕೊಂಡು, ಕುಕ್ಕುರಗಾಲಿನಲ್ಲಿ ಕುಳಿತುಕೊಂಡು, ತಿರುಗಾಡುವವರ ಚಲನವಲನಗಳನ್ನು ಎಚ್ಚರಿಕೆಯಿಂದ ಗಮನಿಸುತ್ತಿದ್ದಳು.

ಮಧ್ಯಾಹ್ನವಾಗುತ್ತಲೇ ತೋಟದ ಹೆಬ್ಬಾಗಿಲು ಮುಚ್ಚಲ್ಪಟ್ಟಿತು. ಸಾರೋಟು, ಮೋಟಾರು, ಜಟಕಾ—ಯಾವುದರ ಶಬ್ದವೂ ಕೇಳಿಬರುತ್ತಿರಲಿಲ್ಲ. ಈ ನೀರವತೆಯಲ್ಲಿ ಪೂರ್ಣಾ ಭವಿಷ್ಯದ ಚಿಂತನೆಯಲ್ಲಿ ತಲ್ಲೀನಳಾಗಿದ್ದಳು.

ಈಗ ಅವಳಿಗೆ ಆಶ್ರಯವೆಲ್ಲಿತ್ತು? ಒಂದು ಕಡೆ ಸೆರೆಮನೆಯ ಅಸಹನೀಯ ಕ್ರೂರ ಹಿಂಸೆಗಳು ಕಾದಿದ್ದುವು. ಮತ್ತೊಂದು ಕಡೆ ಅವಳ ಹೊಟ್ಟೆಯ ಹಿಟ್ಟಿಗೆ ಕಲ್ಲು ಬಿದ್ದಿತ್ತು ಮತ್ತು ಭಯಂಕರ ಪ್ರಾಣಭಯಗಳು ಅವಳನ್ನು ದಿಙ್ಮೂಢಳನ್ನಾಗಿ ಮಾಡಿದ್ದುವು. ಇಂತಹ ಪ್ರಾಣಿಗೆ ಮೃತ್ಯುವನ್ನು ಬಿಟ್ಟರೆ ಮತ್ತೆಲ್ಲಿ ಆಶ್ರಯ ಸಿಕ್ಕಬೇಕು?

ಸಾಯಂಕಾಲವಾಗಿ ಕತ್ತಲು ಮುಸುಕುತ್ತಲೇ ಪೂರ್ಣಾ ಅಲ್ಲಿಂದ ಹೊರಕ್ಕೆ ಹೊರಟು ಬಂದು ರಸ್ತೆಯ ಮೇಲೆ ನಿಂತುಕೊಂಡು ಯೋಚಿಸಲಾರಂಭಿಸಿದಳು— "ಎಲ್ಲಿಗೆ ಹೋಗಲಿ? ಜೀವನದಲ್ಲಿ ಈಗ ಅಪಮಾನ, ಲಜ್ಜೆ ಮತ್ತು ಸಂತಾಪಗಳನ್ನು ಬಿಟ್ಟರೆ ಮತ್ತೇನಿದೆ? ನನ್ನ ಗಂಡನು ಸತ್ತಾಗಲೇ ನಾನೇಕೆ ಪ್ರಾಣತ್ಯಾಗ ಮಾಡಲಿಲ್ಲ? ಅವರ ಶವದೊಡನೆಯೇ ನಾನೇಕೆ ಸಹಗಮನ ಮಾಡಲಿಲ್ಲ? ಈ ರೀತಿಯ ಜೀವನಕ್ಕಿಂತಲೂ ಸಹಗಮನ ಮಾಡುವುದೇ ಸಾವಿರ ಪಾಲು ಉತ್ತಮವಾಗಿತ್ತು. ಆ ಸಮಯದಲ್ಲಿ ನನ್ನ

ಬುದ್ಧಿ ಏಕೆ ವಿಕಲ್ಪವಾಗಿತ್ತು? ಒಳ್ಳೆಯವರೂ ಕೂಡ ಇಂತಹ ನೀಚರಾಗುತ್ತಾರೆ ಮತ್ತು ನನ್ನ ಮಿತ್ರರೂ ಕೂಡ ನಂಬಿಸಿ ಮೋಸಮಾಡುತ್ತಾರೆಂದು ನನಗೇನು ಗೊತ್ತಿತ್ತು? ಈಗ ನನಗೆ ಮರಣವೇ ಶರಣು."

ಒಬ್ಬ ಮುದುಕನನ್ನು ನೋಡಿ ಅವಳು ಒಂದು ಮರದ ಮರೆಯಲ್ಲಿ ನಿಂತುಕೊಂಡಳು. ಮುದುಕನು ಸಮೀಪಕ್ಕೆ ಬಂದಾಗ ಮತ್ತು ಪೂರ್ಣಾಳಿಗೆ ಇವನ ಮುಂದೆ ಹಾದು ಹೋಗುವುದರಲ್ಲಿ ಯಾವ ಭಯವೂ ಇಲ್ಲವೆಂದು ತಿಳಿದಾಗ, ಅವಳು ಮೃದುವಾಗಿ ಕೇಳಿದಳು— "ತಾತ, ಗಂಗಾನದಿ ಕಡೆಗೆ ಹೋಗುವ ರಸ್ತೆ ಎತ್ತಕಡೆಗಿದೆ?"

ಮುದುಕನು ಆಶ್ಚರ್ಯದಿಂದ ಹೇಳಿದನು— "ಗಂಗಾನದಿ ಇಲ್ಲಿ ಎಲ್ಲಿದೆ? ಇದಾದರೋ ಹಾಳೂರಿನ ದಿಣ್ಣೆ."

ಪೂರ್ಣಾ:— "ಗಂಗಾನದಿ ಇಲ್ಲಿಂದ ಎಷ್ಟು ದೂರವಿದೆ?"

ಮುದುಕ:— "ಎರಡು ಹರದಾರಿ."

ಈ ಸ್ಥಿತಿಯಲ್ಲಿ ಎರಡು ಹರದಾರಿ ಹೋಗುವುದು ಪೂರ್ಣಾಗೆ ಅವಿವೇಕವೆನಿಸಿತು. ಅವಳು ಯೋಚಿಸಿದಳು—ಮುಳುಗಿ ಸಾಯಲು ಗಂಗಾನದಿಯೊಂದೇ ಇದೆಯೇ? ಇಲ್ಲಿ ಯಾವುದಾದರೂ ಕೆರೆ ಅಥವಾ ನದಿ ಇಲ್ಲವೆ? ಅವಳು ಅಲ್ಲಿಯೇ ನಿಂತಿದ್ದಳು. ಅವಳು ಯಾವ ನಿರ್ಧಾರವನ್ನೂ ಮಾಡಲಾರದವಳಾದಳು.

ಮುದುಕ ಹೇಳಿದ— "ಮಗಳೆ, ನಿನ್ನ ಮನೆ ಎಲ್ಲಿದೆ? ನೀನು ಎಲ್ಲಿಗೆ ಹೋಗಬೇಕು?"

ಪೂರ್ಣಾ ಒಮ್ಮೆ ನಡುಗಿದಳು. ಇದುವರೆಗೂ ಅವಳು ಯಾವ ಕಥೆಯನ್ನೂ ಕಲ್ಪಿಸಿಕೊಂಡಿರಲಿಲ್ಲ. ಏನೆಂದು ಉತ್ತರ ಕೊಟ್ಟಾಳು?

ಮುದುಕ ಪುನಃ ಕೇಳಿದ— "ಗಂಗಾನದಿಯ ಬಳಿಗೇ ಹೋಗಬೇಕೋ ಅಥವಾ ಮತ್ತೆಲ್ಲಿಗಾದರೂ ಹೋಗಬೇಕೋ?"

ಪೂರ್ಣಾ ಹೆದರುತ್ತಲೇ ಹೇಳಿದಳು— "ಅಲ್ಲಿಯೇ ಒಂದು ಕೇರಿಗೆ ಹೋಗಬೇಕು."

ಮುದುಕನು ಅಲ್ಲಿಯೇ ನಿಂತುಕೊಂಡು ಪೂರ್ಣಾಳನ್ನು ತಲೆಯಿಂದ ಕಾಲಿನವರೆಗೂ ನೋಡಿದನು ಮತ್ತು ಕೇಳಿದನು— "ಅಲ್ಲಿ ಯಾವ ಬೀದಿಗೆ

ಹೋಗಬೇಕು ? ನೂರಾರು ಮೊಹಲ್ಲಗಳಿವೆ."

ಪೂರ್ಣಾ ಉತ್ತರವೇನನ್ನೂ ಕೊಡಲಿಲ್ಲ. ಅವಳ ಹತ್ತಿರ ಇದಕ್ಕೆ ಉತ್ತರವೇ ಇರಲಿಲ್ಲ.

ಮುದುಕನು ಸ್ವಲ್ಪ ಗೊಣಗುಟ್ಟುತ್ತಲೇ ಹೇಳಿದನು— "ಇಲ್ಲಿ ಯಾವ ಹಳ್ಳಿಯಲ್ಲಿ ನಿನ್ನ ಮನೆ ಇದೆ ?"

ಪೂರ್ಣಾ ಯಾವ ಉತ್ತರವನ್ನೂ ಕೊಡಲಿಲ್ಲ. ವ್ಯರ್ಥವಾಗಿ ಮುದುಕನಲ್ಲಿ ಈ ವಿಷಯ ಪ್ರಸ್ತಾಪಿಸಿದುದಕ್ಕಾಗಿ ಅವಳು ಪಶ್ಚಾತ್ತಾಪ ಪಡುತ್ತಿದ್ದಳು.

ಮುದುಕನು ಈ ಸಾರಿ ಕಠೋರ ಸ್ವರದಲ್ಲಿಯೇ ಕೇಳಿದನು— "ನೀನು ನಿನ್ನ ಸರಿಯಾದ ವಿಳಾಸವನ್ನೇಕೆ ತಿಳಿಸುವುದಿಲ್ಲ? ಮನೆಯಿಂದ ಓಡಿಬಂದಿರುವೆಯೋ ?"

ಪೂರ್ಣಾ ಗಡಗಡನೆ ನಡುಗುತ್ತಿದ್ದಳು. ಅವಳ ಬಾಯಿಂದ ಒಂದು ಶಬ್ದವೂ ಹೊರಡಲಿಲ್ಲ.

ಈ ಹೆಂಗಸು ಮನೆಯಲ್ಲಿ ಕೋಪಿಸಿಕೊಂಡು ಹೊರಟು ಬಂದಿದ್ದಾಳೆಂದು ಮುದುಕನಿಗೆ ನಂಬಿಕೆಯಾಯಿತು. ಅವನಿಗೆ ಅವಳ ಮೇಲೆ ಕನಿಕರವುಂಟಾಯಿತು. "ಮಗಳೆ, ಕೋಪಿಸಿಕೊಂಡು ಮನೆಯನ್ನು ಬಿಟ್ಟು ಹೊರಟು ಬರುವುದು ಒಳ್ಳೆಯದಲ್ಲ. ಕಾಲ ಕೆಟ್ಟು ಹೋಗಿದೆ. ಎಲ್ಲಿಯಾದರೂ ಪುಂಡರ ಕೈಗೆ ಸಿಕ್ಕಿಬಿದ್ದೆಯೆಂದರೆ, ನೀನು ಜೀವಿಸಿರುವ ವರೆಗೂ ನಿನಗೆ ಕಳಂಕ ತಪ್ಪುವುದಿಲ್ಲ. ಮಗಳೆ, ಮನೆಗೆ ಹಿಂತಿರುಗು. ದೊಡ್ಡವರು ನಾಲ್ಕಾರು ಮಾತುಗಳನ್ನಾಡಿದರೆ, ದುಃಖವನ್ನು ಸಹಿಸಿಕೊಳ್ಳಬೇಕು. ಅವರು ನಿನ್ನ ಹಿತಕ್ಕಾಗಿಯೇ ಹೇಳುತ್ತಾರೆ. ನಡೆ, ನಾನು ನಿನ್ನನ್ನು ಮನೆಗೆ ಕಳುಹಿಸುತ್ತೇನೆ." ಎಂದನು.

ಈಗ ಉತ್ತರ ಕೊಡುವುದೇ ಪೂರ್ಣಾಗೆ ಉಚಿತವೆನಿಸಿತು. "ಅಜ್ಜ, ನನ್ನನ್ನು ಮನೆಯವರು ಓಡಿಸಿಬಿಟ್ಟಿದ್ದಾರೆ." ಎಂದಳು.

"ಏತಕ್ಕೆ ಓಡಿಸಿದರು ? ಯಾರೊಡನೆಯಾದರೂ ಜಗಳವಾಯಿತೆ?"

"ಇಲ್ಲ ಅಜ್ಜ, ನಾನು ವಿಧವೆ. ಮನೆಯವರು ನನ್ನನ್ನು ಮನೆಯಲ್ಲಿಟ್ಟುಕೊಳ್ಳಲು ಇಷ್ಟಪಡುವುದಿಲ್ಲ."

"ಅತ್ತೆ ಮಾವಂದಿರಿದ್ದಾರೆಯೇ ?"

"ಇಲ್ಲ ಅಜ್ಜ, ಯಾರೂ ಇಲ್ಲ. ಒಬ್ಬ ಸಂಬಂಧಿಕರ ಮನೆಯಲ್ಲಿ ಇದು

ವರೆಗೂ ಕಾಲ ತಳ್ಳುತ್ತಿದ್ದೆ. ಇಂದು ಅವನೂ ಕೂಡ ಮನೆಯಿಂದ ಹೊರಡಿಸಿ ಬಿಟ್ಟನು."

ಮುದುಕನು ಒಂದು ಕ್ಷಣ ಕಾಲ ಯೋಚಿಸಿ ಹೇಳಿದನು— "ಹಾಗಾದರೆ ನೀನು ಗಂಗಾನದಿಯ ಕಡೆಗೆ ಏನು ಮಾಡಲು ಹೋಗುತ್ತಿದ್ದೆ ? ಅಲ್ಲಿ ನಿನ್ನವರು ಯಾರಾದರೂ ಇದ್ದಾರೆಯೆ ?"

"ಇಲ್ಲ ತಾತ, ರಾತ್ರಿಯೆಲ್ಲಾ ಅಲ್ಲಿಯೇ ದಡದ ಮೇಲೆ ಬಿದ್ದುಕೊಂಡಿರುವುದು. ಬೆಳಗಾದ ಮೇಲೆ ಎಲ್ಲಿಯಾದರೂ ಅಡಿಗೆ ಮಾಡುವ ಕೆಲಸಕ್ಕೆ ಸೇರಿಕೊಳ್ಳಬೇಕೆಂದು ಯೋಚಿಸುತ್ತಿದ್ದೆನು."

ಮುದುಕನಿಗೆ ಅವಳ ಅಭಿಪ್ರಾಯವು ಅರ್ಥವಾಯಿತು. ಅನಾಥಿನಿಯು ರಾತ್ರಿಯ ವೇಳೆಯಲ್ಲಿ ಗಂಗಾನದಿಗೆ ಹೋಗುವ ರಸ್ತೆಯನ್ನು ಏತಕ್ಕೆ ಕೇಳಬೇಕು ? ಅಲ್ಲಿಯೂ ಇವಳ ಸಂಬಂಧಿಕರಾರೂ ಇಲ್ಲವೆಂದ ಮೇಲೆ, ಇವಳು ಗಂಗಾನದಿಯ ಕಡೆಗೆ ಹೋಗುವ ಅರ್ಥವೇನು ?

"ವನಿತಾಭವನಕ್ಕೆ ನೀನೇಕೆ ಹೋಗಕೂಡದು ?"

"ವನಿತಾ ಭವನವೆಂದರೇನಜ್ಜ ? ನಾನು ಅದರ ಹೆಸರನ್ನೇ ಕೇಳಿಲ್ಲ."

"ಅಲ್ಲಿ ದಿಕ್ಕಿಲ್ಲದ ಸ್ತ್ರೀಯರ ರಕ್ಷಣೆ ಮತ್ತು ಪೋಷಣೆಯ ಕಾರ್ಯವು ನಡೆಯುತ್ತಿದೆ. ಎಂತಹ ಸ್ತ್ರೀಯೇ ಆಗಿರಲಿ, ಅಲ್ಲಿನವರು ಬಹಳ ಸಂತೋಷದಿಂದ ಅವಳನ್ನು ತಮ್ಮ ಬಳಿ ಇಟ್ಟುಕೊಳ್ಳುತ್ತಾರೆ. ಬಾಬು ಅಮೃತರಾಯರನ್ನು ಸಮಾಜವು ಎಷ್ಟೇ ಅಪಮಾನ ಪಡಿಸಲಿ; ಆದರೆ ಅವರು ಉನ್ನತವಾದ ಧರ್ಮದ ಕೆಲಸವನ್ನು ಮಾಡಿದ್ದಾರೆ. ಈಗ ಅಲ್ಲಿ ಐವತ್ತಕ್ಕಿಂತ ಕಡಿಮೆ ಹೆಂಗಸರಿಲ್ಲ. ಎಲ್ಲರೂ ಆನಂದದಿಂದಿರುತ್ತಾರೆ. ಯಾವ ಪುರುಷನಿಗೂ ಒಳಗೆ ಹೋಗಲು ಅನುಮತಿ ಇಲ್ಲ. ಬಾಬು ಅಮೃತರಾಯರು ತಾವೂ ಕೂಡ ಒಳಗೆ ಹೋಗುವುದಿಲ್ಲ. ಎಂತಹ ಪರಿಸ್ಥಿತಿಯಲ್ಲೂ ಧೃತಿಗೆಡದ ಸಾಹಸಿಯಾದ ಯುವಕ. ನನ್ನ ಜೀವನದಲ್ಲಿ ನಿಜವಾದ ತ್ಯಾಗಿಯನ್ನು ನೋಡಿದ್ದರೆ ಇವನೊಬ್ಬನನ್ನೇ."

ಪೂರ್ಣಾಗೆ ತುಂಬಾ ದಿಗಿಲಾಯಿತು. ಯಾವ ವಿಪತ್ತಿನಿಂದ ಪಾರಾಗಲು ಅವಳು ಪ್ರಾಣತ್ಯಾಗ ಮಾಡಲು ನಿರ್ಧರಿಸಿದ್ದಳೋ, ಅದು ಪುನಃ ತನ್ನೆದುರಿಗೆ ಬರುತ್ತಿರುವಂತೆ ಕಾಣಿಸಿತು. ಅಮೃತರಾಯನು ಅವಳನ್ನು ನೋಡು

ತ್ತಲೇ ಗುರುತಿಸುವನು. ಅವನ ಎದುರಿಗೆ ಅವಳು ಹೇಗೆ ತಾನೆ ನಿಂತು ಕೊಂಡಾಳು ! ಪ್ರಾಯಶಃ ಅವಳ ಪಾದಗಳು ಕಂಪಿಸುವುವು; ಅವಳು ಬಿದ್ದು ಬಿಟ್ಟರೂ ಆಶ್ಚರ್ಯವೇನಿಲ್ಲ. ಅವನು ಅವಳನ್ನು ಕೊಲೆಪಾತಕಿಯೆಂದು ತಿಳಿಯುವನು. ಯಾರೊಡನೆ ಅವಳು ಒಂದು ದಿನ ನಾದಿನಿಯಂತೆ ವಿನೋದ ಮಾಡುತ್ತಿದ್ದಳೋ ಅವಳು ಇಂದು ಅವನ ಸಮ್ಮುಖದಲ್ಲಿ ಕುಲಟೆಯಾಗಿ ಹೋಗುವಳು !

ಮುದುಕನು ಕೇಳಿದನು— "ಮಗಳೆ, ಏಕೆ ಸಾವಕಾಶ ಮಾಡುತ್ತಿರುವೆ? ನಡೆ, ನಾನು ನಿನ್ನನ್ನು ಅಲ್ಲಿಗೆ ತಲುಪಿಸುವೆನು. ಅಲ್ಲಿ ನೀನು ಬಹಳ ಸುಖವಾಗಿರುವೆಯೆಂಬುದನ್ನು ನಂಬು."

ಪೂರ್ಣಾ ಹೇಳಿದಳು— "ನಾನು ಅಲ್ಲಿಗೆ ಹೋಗುವುದಿಲ್ಲ, ಅಜ್ಜ !"

"ಅಲ್ಲಿಗೆ ಹೋಗುವುದರಿಂದಾಗುವ ಕೆಡುಕೇನು ?"

"ನನ್ನ ಮನಸ್ಸಿಗೇ ಇಷ್ಟವಿಲ್ಲ."

ಮುದುಕನು ಸ್ವಲ್ಪ ಗಡುಸಾಗಿಯೇ ಹೇಳಿದನು— "ಹಾಗಾದರೆ ನಿನ್ನ ತಲೆಯಲ್ಲಿ ಬೇರಾವುದೋ ಚಿಂತೆಯು ಸೇರಿಕೊಂಡಿದೆಯೆಂಬುದನ್ನು ಏಕೆ ಹೇಳಲೊಲ್ಲೆ ?"

ಹೀಗೆ ಹೇಳಿ ಮುದುಕನು ಮುಂದಕ್ಕೆ ಹೆಜ್ಜೆ ಹಾಕಿದನು. ಯಾರು ತಾನಾಗಿಯೇ ದುರ್ಮಾರ್ಗದಲ್ಲಿ ನಡೆಯಲು ನಿರ್ಧರಿಸಿದ್ದಾರೆಯೋ ಅವರನ್ನು ಯಾರು ತಾನೆ ತಡೆಯಬಲ್ಲರು ?

ಮುದುಕನು ಹೋಗುತ್ತಿರುವುದನ್ನು ನೋಡಿ ಪೂರ್ಣಾ ಅವನ ಮನಸ್ಸಿನ ಭಾವವನ್ನರಿತಳು. ಅವಳು ಈಗಲೂ ವನಿತಾಭವನಕ್ಕೆ ಹೋಗಲು ತಿರಸ್ಕರಿಸಬಲ್ಲಳೇ ? "ಅಜ್ಜ, ನೀನೂ ಕೂಡ ನನ್ನನ್ನು ಬಿಟ್ಟು ಹೊರಟು ಹೋಗುವೆಯೋ" ಎಂದಳು.

ಮುದುಕ:— "ಹೊರಡು, ವನಿತಾಭವನಕ್ಕೆ ಕಳುಹಿಸಿ ಬರುವೆನೆಂದು ಹೇಳುತ್ತಲೇ ಇದ್ದೇನೆ."

"ಅಲ್ಲಿ ನಾನು ಬಾಬೂ ಅಮೃತರಾಯರ ಎದುರಿಗೆ ಹೋಗಬೇಕಾಗುವುದಿಲ್ಲವಷ್ಟೆ ?"

"ಇದೆಲ್ಲವೂ ನನಗೆ ತಿಳಿಯದು. ಆದರೆ ಅವರೆದುರಿಗೆ ಹೋಗುವುದರಲ್ಲಿ ಆತಂಕವೇನು ? ಅವರು ದುಷ್ಟರಲ್ಲ."

"ಒಳ್ಳೆಯವರು ಕೆಟ್ಟವರೆಂಬ ವಿಷಯವಲ್ಲ, ಅಜ್ಜ. ಅವರೆದುರಿಗೆ ಹೋಗಲು ನನಗೇಕೋ ನಾಚಿಕೆಯಾಗುತ್ತದೆ."

"ಸರಿ, ಹಾಗಾದರೆ ಹೋಗಲೇ ಬೇಡ. ಹೆಸರು ಮತ್ತು ವಿಳಾಸವನ್ನಂತೂ ಬರೆಯಿಸಲೇ ಬೇಕಾಗುವುದು."

"ಇಲ್ಲ ಅಜ್ಜ, ನಾನು ಹೆಸರು ಮತ್ತು ವಿಳಾಸವನ್ನೂ ಬರೆಯಿಸುವುದಿಲ್ಲ. ಇದಕ್ಕಾಗಿಯೇ ನಾನು ವನಿತಾಭವನಕ್ಕೆ ಹೋಗುವುದಿಲ್ಲವೆಂದು ಹೇಳುತ್ತಿದ್ದುದು."

ಮುದುಕನು ಸ್ವಲ್ಪ ಯೋಚಿಸಿ ಹೇಳಿದನು— "ಒಳ್ಳೆಯದು ಹೊರಡು, ನಾನು ಅಮೃತರಾಯರಿಗೆ ಸೂಕ್ತ ಉತ್ತರ ಕೊಡುವೆನು. ನೀನು ಹೇಳಲಿಚ್ಛಿಸದ ವಿಷಯವನ್ನು ಅವರು ಹೇಳಲೇಬೇಕೆಂದು ಒತ್ತಾಯಪಡಿಸುವುದಿಲ್ಲ. ನಾನು ಅವರನ್ನು ಏಕಾಂತದಲ್ಲಿ ಕಂಡು ಮಾತನಾಡುವೆನು."

ಸ್ವಲ್ಪ ದೂರದಲ್ಲಿಯೇ ಒಂದು ಜಟಕಾ ಸಿಕ್ಕಿತು. ಮುದುಕನು ಅದನ್ನು ಬಾಡಿಗೆಗೆ ಗೊತ್ತು ಮಾಡಿಕೊಂಡನು. ಇಬ್ಬರೂ ಅದರ ಮೇಲೆ ಕುಳಿತುಕೊಂಡು ಹೊರಟರು.

ಪೂರ್ಣಾ ಈಗ ಗಂಗೆಯಲ್ಲಿ ಮುಳುಗಲು ಹೋಗುತ್ತಿದ್ದರೂ, ಪ್ರಾಯಶಃ ಇಷ್ಟು ದುಃಖಿಯೂ ಸಂಶಯಗ್ರಸ್ತಳೂ ಆಗುತ್ತಿರಲಿಲ್ಲ !

## ೧೩

ಬಾಬೂ ದಾನನಾಥನ ಸ್ವಭಾವದಲ್ಲಿ ಮಧ್ಯಸ್ಥ ಭಾವವೇ ಇರಲಿಲ್ಲ. ಅವನು ಯಾರಲ್ಲಿ ಸ್ನೇಹ ಬೆಳೆಸಿದರೂ, ಅವನ ದಾಸನಾಗುತ್ತಿದ್ದನು; ಅದೇ ಯಾರನ್ನು ವಿರೋಧಿಸುತ್ತಿದ್ದನೋ ಅವನ ಸರ್ವನಾಶಮಾಡಲು ಕಂಕಣಬದ್ಧನಾಗುತ್ತಿದ್ದನು. ಅನೇಕ ತಿಂಗಳ ವರೆಗೆ ಅವನು ಕಮಲಾಪ್ರಸಾದನ

ಮಿತ್ರನಾಗಿದ್ದನು. ಸರಿ, ಕಮಲಾಪ್ರಸಾದನು ಅವನಿಗೆ ಸರ್ವಸ್ವವಾಗಿದ್ದನು. ಅವನೊಡನೆಯೇ ವಿಹಾರ ಮತ್ತು ಅವನೊಡನೆಯೇ ಊಟ ಉಪಚಾರಗಳೆಲ್ಲ ನಡೆಯುತ್ತಿದ್ದುವು. ಅಮೃತರಾಯನ ಮುಖ· ನೋಡುವುದೆಂದರೂ ಅವನಿಗೆ ತಿರಸ್ಕಾರ. ಅವನ ವಿಷಯವನ್ನು ಮಾತನಾಡುವುದರಲ್ಲಿಯೇ ದಿನವೆಲ್ಲ ಕಳೆದು ಹೋಗುತ್ತಿತ್ತು. ಅವನಿಗೆ ವಿರುದ್ಧವಾಗಿ ಭಾಷಣ ಮಾಡುತ್ತಿದ್ದನು, ಲೇಖನ ಬರೆಯುತ್ತಿದ್ದನು; ಮತ್ತು ಯಾವ ದಿನ ಪ್ರೇಮಾ ಪೌರಸಭಾಭವನಕ್ಕೆ ಹೋಗಿ ಅವನ ಫಿತೂರಿಗಳನ್ನು ಬಹಿರಂಗ ಪಡಿಸಿದಳೋ, ಅಂದಿನಿಂದ ಅವನು ಅಮೃತ ರಾಯನಿಗೆ ಪ್ರಬಲ ಶತ್ರುವಾಗಿ ಅವನ ಪ್ರಾಣಕ್ಕೆ ಸಂಚಕಾರ ತರಲು ಸಮಯ ಕಾಯುತ್ತಿದ್ದನು. ಪ್ರೇಮಾಳ ವಿಷಯದಲ್ಲಿ ಮೊದಲಿನಿಂದಲೇ ಅವನ ಮನಸ್ಸು ನಿರ್ಮಲವಾಗಿರಲಿಲ್ಲ. ಈಗಲಂತೂ ಅವನ ಕೋಪಕ್ಕೆ ಪಾಶವೇ ಇರಲಿಲ್ಲ. ಪ್ರೇಮಾಗೆ ಯಾವ ವಿಷಯವನ್ನೂ ತಿಳಿಸಲಿಲ್ಲ; ಈ ವಿಷಯವನ್ನು ಚರ್ಚಿಸಲೂ ಇಲ್ಲ. ಪ್ರೇಮಾ ಉತ್ತರವೀಯಲು ಸಿದ್ಧಳಾಗಿ ಕುಳಿತಿದ್ದಳು; ಆದರೆ ಆವಳೊ ಡನೆ ಮಾತನಾಡುವುದನ್ನೇ ಬಿಟ್ಟುಬಿಟ್ಟನು. ಭಾವನೆಂದರೆ ಪಂಚಪ್ರಾಣ; ಆದರೆ ಹೆಂಡತಿಯ ಮುಖ ನೋಡುವುದಕ್ಕೂ ಬೇಸರ. ಅವನಿಗೆ ತನ್ನ ಜೀವ ನವೇ ಬೇಸರವಾಗಿತ್ತೆಂದರೆ ತಪ್ಪಾಗಲಾರದು. ಅವನು ಯಾವ ಆನಂದ ಮಯ ಜೀವನದ ಕಲ್ಪನೆ ಮಾಡಿಕೊಂಡಿದ್ದನೋ ಅದು ಅಸಾಧ್ಯ ರೋಗದಂತೆ ಅವನನ್ನು ಕರಗಿಸುತ್ತಿತ್ತು. ಕುದುರೆಯ ಬಣ್ಣ, ರೂಪ ಮತ್ತು ವೇಗಕ್ಕೆ ಮರುಳಾಗಿ ಅದನ್ನು ಕೊಂಡುಕೊಂಡರೂ ಅದರ ಮೇಲೆ ಸವಾರಿ ಮಾಡಲಾ ರದ ವ್ಯಕ್ತಿಯ ಸ್ಥಿತಿಯಂತಾಗಿತ್ತು ದಾನನಾಥನ ಸ್ಥಿತಿ. ಅದರ ಮಾಟವಾದ ಕಿವಿಗಳು, ಅದರ ಮುಖಭಂಗಿ, ತೆನೆಯುವ ಬೆಡಗು, ಕಾಲಿನಿಂದ ನೆಲವನ್ನು ಕೆರೆಯುವುದು ಇವೆಲ್ಲವನ್ನೂ ಅವನು ಮೊದಲೇ ನೋಡಿದ್ದನು. ಈಗ ಅದರ ಬೆನ್ನ ಮೇಲೆ ಕೈ ಇಡುವುದಕ್ಕೂ ಜಿಗುಪ್ಸೆಯಾಗುತ್ತದೆ. ಯಾವ ಸೌಂದರ್ಯ ಮೂರ್ತಿಯ ಕಲ್ಪನಾ ಮಾತ್ರದಿಂದಲೇ ದಾನನಾಥನು ಒಂದಾನೊಂದು ದಿನ ಪುಲಕಿತನಾಗಿದ್ದನೋ ಅದನ್ನು ಈಗ ತನ್ನ ಸಮ್ಮುಖದಲ್ಲಿ ನೋಡಿದರೆ ಅವನ ಮನಸ್ಸಿಗೆ ಲೇಶಮಾತ್ರವೂ ಸಂತೋಷವಾಗುತ್ತಿರಲಿಲ್ಲ. ಪ್ರೇಮಾ ಮನಃ ಪೂರ್ವಕವಾಗಿ ಅವನ ಸೇವೆ ಮಾಡುತ್ತಿದ್ದಳು; ಅವನ ಮುಖದರ್ಶನಕ್ಕಾಗಿ ಹಂಬಲಿಸುತ್ತಿದ್ದಳು; ಅವನನ್ನು ಪ್ರಸನ್ನಗೊಳಿಸಲು ಸದಾ ಪ್ರಯತ್ನಶೀಲಳಾಗಿ

ದ್ದಳು; ಆದರೆ ದಾನನಾಥನಿಗೆ ಅವಳ ಭಾವಭಂಗಿಗಳಲ್ಲಿ ಕೃತ್ರಿಮತೆಯು ಎದ್ದು ಕಾಣುತ್ತಿತ್ತು. ಅವನು ತನ್ನ ತಪ್ಪಿಗಾಗಿ ಮನಸ್ಸಿನಲ್ಲಿಯೇ ಪಶ್ಚಾತ್ತಾಪಪಡುತ್ತಿದ್ದನು ಮತ್ತು ಅವನ ಈ ಆಂತರಿಕ ಜ್ವಾಲೆಯು ದ್ವೇಷದ ರೂಪವನ್ನು ತಾಳಿ ಅಮೃತರಾಯನ ಮೇಲೆ ಮಿಥ್ಯಾ ದೋಷವನ್ನು ಆರೋಪಿಸುವುದರಲ್ಲಿಯೂ ಮತ್ತು ಅವನನ್ನು ವಿರೋಧಿಸುವುದರಲ್ಲಿಯೂ ಶಾಂತಿ-ಲಾಭವನ್ನು ಪಡೆಯುತ್ತಿತ್ತು; ಆದರೆ ಅತ್ಯಲ್ಪ ಕಾಲದಲ್ಲಿಯೇ ಮನಸ್ತಾಪವನ್ನು ಶಾಂತಿಗೊಳಿಸುವ ಈ ಮಾರ್ಗವೂ ಅವನಿಗೆ ತಪ್ಪಿ ಹೋಯಿತು.

ಸಂಧ್ಯಾ ಸಮಯ, ದಾನನಾಥನು ತನ್ನ ದಿವಾಣಖಾನೆಯಲ್ಲಿ ಕುಳಿತುಕೊಂಡು ಕಮಲಾಪ್ರಸಾದನ ದಾರಿ ನೋಡುತ್ತಿದ್ದನು. ಇಂದು ಅವನು ಇಷ್ಟು ಹೊತ್ತಾದರೂ ಏಕೆ ಬರಲಿಲ್ಲ? ಬರುವುದಾಗಿ ಮಾತುಕೊಟ್ಟು ಹೋಗಿದ್ದನು. ಹೀಗಿದ್ದರೂ ಏಕೆ ಬರಲಿಲ್ಲ? ಹೀಗೆ ಯೋಚಿಸಿ, ಅವನು ಉಡುಪನ್ನು ಧರಿಸಿಕೊಂಡನು ಮತ್ತು ಕಮಲಾಪ್ರಸಾದನ ಮನೆಗೆ ಹೋಗಲು ಸಿದ್ಧನಾದನು. ಅಷ್ಟರಲ್ಲಿಯೇ ಒಬ್ಬ ಮಿತ್ರನು ಬಂದು ಇಂದಿನ ದುರ್ಘಟನೆಯ ಸಮಾಚಾರವನ್ನು ತಿಳಿಸಿದನು. ದಾನನಾಥನಿಗೆ ನಂಬಿಕೆಯೇ ಆಗಲಿಲ್ಲ. "ನೀನು ಈ ಹರಟೆಯನ್ನು ಕೇಳಿದ್ದೆಲ್ಲಿ?" ಎಂದನು.

"ನಗರದಲ್ಲೆಲ್ಲಾ ಈ ವಿಷಯವೇ ಚರ್ಚೆಯಾಗುತ್ತಿದೆ, ಎಲ್ಲಿ ಕೇಳಿದೆಯೆಂದು ತಾವು ಪ್ರಶ್ನಿಸುತ್ತಿರುವಿರಿ."

"ಯಾವನಾದರೂ ಬೇಕೆಂತಲೇ ಅಪವಾದವನ್ನು ಹುಟ್ಟಿಸಿರಬಹುದು. ಯಾರು ಏನಾದರೂ ಹೇಳಲಿ, ನಾನಂತೂ ಕಮಲಾಪ್ರಸಾದನನ್ನು ಇಂತಹ ಮನುಷ್ಯನೆಂದು ತಿಳಿಯಲಾರೆ."

"ತಾವು ಮಾನವ ಸ್ವಭಾವವನ್ನು ಚೆನ್ನಾಗಿ ಪರಿಚಯ ಮಾಡಿಕೊಳ್ಳದಿರುವುದೇ ಇದಕ್ಕೆ ಕಾರಣವಲ್ಲದೆ ಬೇರೇನೂ ಇಲ್ಲ. ಕಮಲಾಪ್ರಸಾದನಿಗೆ ಚಿಕಿತ್ಸೆ ಮಾಡಲು ಹೋಗಿದ್ದ ವೈದ್ಯನೇ ನನಗೆ ಈ ಸಮಾಚಾರವನ್ನು ತಿಳಿಸಿದನು. ಅವನಿಗೂ ಕಮಲಾಪ್ರಸಾದನಿಗೂ ಯಾವ ವಿಧವಾದ ವಿವಾದವೂ ಇಲ್ಲ."

"ವೈದ್ಯ ಏನು ಹೇಳಿದ?"

"ಕಮಲಾಪ್ರಸಾದನ ಮುಖ ಮತ್ತು ಎದೆಗೆ ಬಲವಾಗಿ ಪೆಟ್ಟು ಬಿದ್ದಿದೆ ಮತ್ತು ಒಂದು ಹಲ್ಲೂ ಮುರಿದು ಹೋಗಿದೆಯೆಂದೂ ಅವನು ಸ್ಪಷ್ಟವಾಗಿ ಹೇಳಿದ."

ದಾನನಾಥನು ನಸುನಗುತ್ತಾ ಹೇಳಿದನು— "ಒಂದು ವ್ಯಕ್ತಿಯ ಮುಖ ಮತ್ತು ಎದೆಗೆ ಬಲವಾದ ಪೆಟ್ಟು ಬಿದ್ದು, ಒಂದು ಹಲ್ಲು ಮುರಿದು ಹೋಗಿದ್ದರೆ, ಅಂತಹವನನ್ನು ಲಂಪಟನೆಂದು ಖಂಡಿತವಾಗಿ ಹೇಳಬಹುದೆ ?"

ಕಮಲಾಪ್ರಸಾದನ ಮನೆಗೆ ಹೋಗಿ ತನಿಖೆ ಮಾಡುವವರೆಗೂ ದಾನ ನಾಥನಿಗೆ ಪೂರ್ಣ ನಂಬಿಕೆಯಾಗಲಿಲ್ಲ. ಕಮಲಾಪ್ರಸಾದನು ಮುಖಕ್ಕೆ ಬ್ಯಾಂಡೇಜ್ ಕಟ್ಟಿಸಿಕೊಂಡು ಕಣ್ಣುಮುಚ್ಚಿಕೊಂಡು ಮಲಗಿದ್ದನು. ಗುಂಡಿ ನೇಟು ತಗಲಿದೆಯೋ ಎಂಬಂತೆ ಕಾಣುತ್ತಿತ್ತು. ದಾನನಾಥನ ಧ್ವನಿಯನ್ನು ಕೇಳುತ್ತಲೇ ಕಣ್ಣು ತೆರೆದು ಲಜ್ಜೆಯಿಂದ ನರಳುವ ಧ್ವನಿಯಲ್ಲಿ ಹೇಳಿದನು— "ಬಾ ಅಣ್ಣಾ, ಕುಳಿತುಕೊ. ನಿನಗೆ ಈಗ ವರ್ತಮಾನ ತಿಳಿಯಿತೋ ಅಥವಾ ಬರುವುದಕ್ಕೆ ಸಮಯ ಸಿಕ್ಕಲಿಲ್ಲವೋ ? ಕೆಟ್ಟ ಕಾಲದಲ್ಲಿ ಯಾರಿಗೆ ಯಾರೂ ಇಲ್ಲ."

ದಾನನಾಥನು ವಿಷಾದದಿಂದ ಹೇಳಿದನು— "ಇಂಥಾದ್ದೇನೂ ಇಲ್ಲ. ನನಗೆ ಈಗ ತಾನೆ ತಿಳಿಯಿತು. ತಿಳಿದ ಕ್ಷಣವೇ ಓಡೋಡಿ ಬಂದಿದ್ದೇನೆ. ವಿಷಯವೇನು ?"

ಕಮಲಾಪ್ರಸಾದನು ನರಳುತ್ತಾ ಹೇಳಿದನು— "ಎಲ್ಲವೂ ವಿಧಿ ಲೀಲೆ. ನಾನು ಏನೆಂದು ಹೇಳಲಿ? ಈ ಸ್ತ್ರೀ ಹೀಗೆ ಮಾಡುವಳೆಂದು ಕನಸಿನಲ್ಲಿಯೂ ತಿಳಿದಿರಲಿಲ್ಲ. ಒಂದು ಅಗುಳ ಅನ್ನಕ್ಕೆ ಪರರೆದುರಿಗೆ ಕೈಯೊಡ್ಡಿ ಹಲುಬುತ್ತಿದ್ದಾಗ ನನ್ನ ಮನೆಗೆ ಕರೆತಂದೆನು. ನನ್ನ ಸೋದರಿಯೆಂದೇ ತಿಳಿದುಕೊಂಡಿದ್ದೆನು. ಮನೆಯ ಜನರು ಬೇರೆ ಅವಳು ಬೇರೆ ಎಂದು ತಿಳಿದಿರಲಿಲ್ಲ. ನಾವು ತಿನ್ನುವ ಆಹಾರವನ್ನೇ ಅವಳೂ ತಿನ್ನುತ್ತಿದ್ದಳು; ನಮ್ಮಂತಹ ಉಡುಪನ್ನೇ ಧರಿಸುತ್ತಿದ್ದಳು. ಆದರೆ ಅವಳೂ ನನ್ನ ಹಗೆಗಳೊಡನೆ ಸೇರಿಕೊಂಡಿದ್ದಳು. ಅನೇಕ ದಿನಗಳಿಂದ ನನ್ನನ್ನು ನಿಮ್ಮ ತೋಟಕ್ಕೆ ಕರೆದುಕೊಂಡು ಹೋಗಿ ಬನ್ನಿರಿ ಎಂದು ಹೇಳುತ್ತಿದ್ದಳು. ಇಂದು ಅವಳನ್ನು ಕರೆದುಕೊಂಡು ತೋಟಕ್ಕೆ ಹೋದಾಗ ಇಬ್ಬರು ಗೂಂಡಾಗಳು ಬಂಗಲೆಯ ಕೈಸಾಲೆಯಲ್ಲಿ ನಿಂತಿರುವುದನ್ನು





ನೋಡಿದೆನು. ನನ್ನನ್ನು ನೋಡುತ್ತಲೇ ಇಬ್ಬರೂ ನನ್ನ ಮೇಲೆ ಬಿದ್ದರು. ಏಕಾಂಗಿಯಾದ ನಾನು ಏನು ಮಾಡಬಲ್ಲೆ? ಆ ಪಿಶಾಚಿನಿಯೂ ಕೂಡ ಆ ಇಬ್ಬರೊಡನೆ ಸೇರಿಕೊಂಡಳು ಮತ್ತು ನನ್ನ ಮೇಲೆ ಲಾಠಿ ಪ್ರಯೋಗ ಮಾಡ ಲಾರಂಭಿಸಿದಳು. ಎಷ್ಟು ಏಟು ಬಿತ್ತು ಎಂಬುದನ್ನು ಮಾತ್ರ ಕೇಳಬೇಡ. ಅಲ್ಲಿ ಒಂದು ನರಪಿಳ್ಳೆಯ ಸುಳಿವಿಲ್ಲ, ನಾನು ಯಾರನ್ನು ತಾನೆ ಸಹಾಯಕ್ಕೆ ಕರೆಯಬಹುದು? ನಾನು ಮೂರ್ಛಿತನಾಗಿ ಬಿದ್ದಮೇಲೆ ಮೂವರೂ ಅಲ್ಲಿಂದ ನುಸುಳಿಕೊಂಡು ಹೊರಟು ಹೋದರು.

ದಾನನಾಥನು ಕ್ಷಣಕಾಲ ವಿಚಾರಮಗ್ನನಾಗಿದ್ದು ಅನಂತರ ಕೇಳಿದನು– "ಬಾಬೂ ಅಮೃತರಾಯನ ಸ್ವಭಾವ ಹೀಗಿಲ್ಲವೆಂದು ನನಗೆ ಗೊತ್ತು. ಸರಿ, ಇದು ಪುಂಡರ ನೀಚ ಕಾರ್ಯವಾಗಿರಬಹುದು."

"ಅಣ್ಣಾ, ಮಾನವನ ಅಂತರಂಗದಲ್ಲಿ ಹುದುಗಿರುವ ವಿಷಯವನ್ನು ಬ್ರಹ್ಮನೂ ಕೂಡ ತಿಳಿಯಲಾರ; ಹೀಗಿರುವಲ್ಲಿ ನಿನ್ನ ಮತ್ತು ನನ್ನ ಕೈಲೇನಾಗು ವುದು? ಸಾಧುಗಳ ವೇಷದಲ್ಲಿಯೇ ಅನೇಕ ದುಷ್ಟರು ಕಾರ್ಯಸಾಧನೆಯಲ್ಲಿ ಮಗ್ನರಾಗಿರುತ್ತಾರೆ."

ಆ ಕ್ಷಣವೇ ಲಾಲಾ ಬದರೀಪ್ರಸಾದರು ಕೊಠಡಿಯನ್ನು ಪ್ರವೇಶಿಸುತ್ತಾ ಹೇಳಿದರು— "ನೀನಿರುವಂತೆಯೇ ಅವರಿರುವುದೂ. ಮಾತನಾಡಲು ನಾಚಿಕೆಯಾಗುವುದಿಲ್ಲವೇ ನಿನಗೆ! ಮುಖಕ್ಕೆ ಮಸಿ ಬಳಿದುಕೊಂಡು ನೀನು ಯಾವುದಾದರೂ ಕೆರೆ–ಕೊಳದಲ್ಲಿ ಮುಳುಗಿ ಸಾಯಬೇಕಾಗಿತ್ತು. ಆದರೆ ನಿನ್ನಂಥ ಪಾಪಿಗಳಿಗೆ ಇಷ್ಟು ಆತ್ಮಾಭಿಮಾನವು ಎಲ್ಲಿಂದ ಬರಬೇಕು? ವಿಶೇಷ ವಾಗಿ ದುಷ್ಟರು ಸಾಧುಗಳ ವೇಷದಲ್ಲಿ ನಟನೆ ಮಾಡುತ್ತಿರುತ್ತಾರೆಂದು ನೀನು ಹೇಳಿದುದು ಸತ್ಯ. ಯಾರ ತೊಡೆಯ ಮೇಲೆ ಆಡಿಕೊಂಡು ದೊಡ್ಡವನಾ ದೆಯೋ, ಅವರನ್ನೂ ದಡ್ಡರನ್ನಾಗಿ ಮಾಡಿದೆ. ನನ್ನಂತಹ ಪ್ರಾಪಂಚಿಕ ವಿಷ ಯಗಳಲ್ಲಿ ನುರಿತವನನ್ನೂ ನೀನು ಮೋಸಗೊಳಿಸಿದೆ. ನೀನು ಇಂತಹ ಚರಿತ್ರ ಹೀನನಾಗುವೆಯೆಂದು ನನಗೆ ಮೊದಲೇ ಗೊತ್ತಿದ್ದರೆ, ನಾನು ನಿನಗೆ ವಿಷ ಕೊಟ್ಟು ಸಾಯಿಸುತ್ತಿದ್ದೆನು. ನಿನ್ನ ಪ್ರಾಮಾಣಿಕತೆಯ ವಿಷಯದಲ್ಲಿ ನನಗೆ ಅಭಿಮಾನವಿತ್ತು. ನಿನ್ನಲ್ಲಿ ಮತ್ತೆಷ್ಟೇ ಕೆಡಕುಗಳಿರಲಿ, ನಿನ್ನ ಆಚರಣೆಯು ನಿಷ್ಕಳಂಕವಾಗಿದೆಯೆಂದು ತಿಳಿದಿದ್ದೆನು. ಆದರೆ ಇಂದು ನಿನ್ನಂತಹ ನೀಚ

ಮತ್ತು ಅಧಮನು ಈ ಲೋಕವಲ್ಲಿ ಬೇರೊಬ್ಬನಿರಲಾರನೆಂದು ಗೊತ್ತಾಯಿತು. ಯಾವ ಅನಾಥೆಗೆ ನಾನು ನನ್ನ ಮನೆಯಲ್ಲಿ ಆಶ್ರಯ ಕೊಟ್ಟೆನೋ, ಯಾರನ್ನು ನನ್ನ ಮಗಳೆಂದು ತಿಳಿದಿದ್ದೆನೋ, ಯಾರನ್ನು ನೀನು ಕೂಡ ಸೋದರಿ ಎಂದು ಕರೆಯುತ್ತಿದ್ದೆಯೋ ಅವಳ ವಿಷಯದಲ್ಲಿಯೇ ನಿನ್ನ ಈ ನಡವಳಿಕೆಯೇ ? ನೀನು ಯಾರಿಗೂ ಮುಖ ತೋರಿಸಿಕೊಂಡು ಇರಬಾರದು. ಅವಳು ನಿನ್ನನ್ನು ಏಕೆ ಕೊಂದು ಹಾಕಲಿಲ್ಲವೆಂಬುದೇ ನನಗೆ ದುಃಖವಾಗಿದೆ. ನಿನ್ನಂತಹ ಹೇಡಿಗೆ ಈ ಶಿಕ್ಷೆಯೇ ಉಚಿತವಾಗಿತ್ತು."

ದಾನನಾಥನು ಮೆಲುದನಿಯಲ್ಲಿ ಕೇಳಿದನು— "ಕಮಲಾಪ್ರಸಾದನ ಅಭಿಪ್ರಾಯದಲ್ಲಿ ಅಮೃತರಾಯ................ "

ಬದರೀಪ್ರಸಾದರು ಕಟಕಟನೆ ಹಲ್ಲು ಕಡಿಯುತ್ತಾ ಹೇಳಿದರು— "ಶುದ್ಧ ಸುಳ್ಳು, ಸುಳ್ಳಿನ ಕಂತೆ; ಹದಿನಾರಾಣೆ ಸುಳ್ಳು. ನಮಗೂ ಅಮೃತರಾಯನಿಗೂ ಸಾಮಾಜಿಕ ವಿಷಯಗಳಲ್ಲಿ ಮತಭೇದವಿದೆ; ಆದರೆ ಅವನಂತಹ ಸದಾಚಾರ ಸಂಪನ್ನರು ಈ ಜಗತ್ತಿನಲ್ಲಿ ವಿರಳ. ನೀನಂತೂ ಅವನ ಬಾಲ್ಯಸ್ನೇಹಿತ; ಆದ್ದರಿಂದ ನಾನು ಸುಳ್ಳು ಹೇಳುತ್ತಿರುವೆನೋ ಅಥವಾ ಸತ್ಯವನ್ನೋ—ಎಂಬುದನ್ನು ನೀನೇ ಹೇಳು."

ಕಮಲಾಪ್ರಸಾದನು ಕೋಪಿಸಿಕೊಂಡರೂ ಚಿಂತೆಯಿಲ್ಲ, ಈಗ ನಿಜಾಂಶವನ್ನು ತಿಳಿಸದಿದ್ದರೆ ಬೇರಾವ ಮಾರ್ಗವೂ ಇಲ್ಲವೆಂಬುದು ದಾನನಾಥನಿಗೆ ಸ್ಪಷ್ಟವಾಯಿತು. ತಲೆ ತಗ್ಗಿಸಿಕೊಂಡು ಒಂದು ಅಪ್ರಿಯ ಸತ್ಯ, ಒಂದು ಕಠೋರ ಕರ್ತವ್ಯ ಪಾಲನೆ ಮಾಡುವ ಭಾವದಿಂದ ಹೇಳಿದನು— " ತಾವು ಹೇಳುವುದು ಅಕ್ಷರಶಃ ಸತ್ಯ. ಶತ್ರುಗಳನ್ನು ಮಿತ್ರರನ್ನಾಗಿ ಮಾಡಿಕೊಳ್ಳುವುದು ಅವನಲ್ಲಿರುವ ಅದ್ಭುತ ಶಕ್ತಿ."

ಬದರೀಪ್ರಸಾದರು ಕಮಲಾಪ್ರಸಾದನ ಕಡೆಗೆ ಕೈ ಎತ್ತಿ ಹೇಳಿದರು— "ಇವನ ಮುಖದ ಮೇಲೆ ನಾಲ್ಕು ಏಟು ಕೊಡು. ಈಗಲೂ ನಾಚಿಕೆಯಾಯಿತೋ ಇಲ್ಲವೋ ? ಈಗ ಆಗಿರುವ ಶಿಕ್ಷೆ ಅಷ್ಟರಲ್ಲೇ ಇದೆ. ಈಗಲಾದರೋ ಒಂದು ಹಲ್ಲು ಮುರಿದಿದೆ, ತಲೆಗೆ ಸ್ವಲ್ಪ ಪೆಟ್ಟು ಬಿದ್ದಿದೆ. ಯಾವಾಗ ನಗರವಾಸಿಗಳೆಲ್ಲರೂ ಉಗುಳಿ, ಮನೆಯಿಂದ ಹೊರಡುವುದೇ ಸಾಧ್ಯವಾಗುವುದಿಲ್ಲವೊ ಆಗಲೇ ನಿಜವಾದ ಪೆಟ್ಟು ಬೀಳುವುದು. ಪಾಪಿಯು ನನ್ನ ಕೀರ್ತಿ, ಗೌರವ

ಗಳಿಗೂ ಧಕ್ಕೆಯನ್ನುಂಟು ಮಾಡಿದನು. ಪುರುಷರ - ಗೂಢವಾದ ಸಂಪಾದನೆಯನ್ನು ಒಂದು ಕ್ಷಣಕಾಲದಲ್ಲಿ ನೀಗಿದನು. ವಂಶಗೌರವವು ಹೆಚ್ಚಲು ಅನೇಕ ಯುಗಗಳು ಹಿಡಿಯುತ್ತವೆ; ಆದರೆ ಒಂದೇ ಕ್ಷಣಕಾಲದಲ್ಲಿ ಕೆಟ್ಟು ಹೋಗುತ್ತದೆ; ಇದೇನು ಸಾಮಾನ್ಯವಾದ ವಿಷಯವಲ್ಲ. ಈಗ ನಾನು ಯಾವ ಮುಖ ಬಿಟ್ಟುಕೊಂಡು ಹೊರಗೆ ಹೋಗಲಿ ಎಂಬುದೇ ಒಂದು ದೊಡ್ಡ ಚಿಂತೆಯಾಗಿದೆ. ಈ ಸತ್ಪುತ್ರನು ಎಲ್ಲಿಯೂ ಮುಖ ತೋರಿಸದ ಹಾಗೆ ಮಾಡಿಬಿಟ್ಟನು."

ಹೀಗೆ ಹೇಳುತ್ತಾ ಲಾಲಾ ಬದರೀಪ್ರಸಾದರು ಹೊರಕ್ಕೆ ಹೊರಟು ಹೋದರು. ದಾನನಾಥನೂ ಕೂಡ ಅವರೊಡನೆಯೇ ಹೊರಟು ಹೋದನು. ಕಮಲಾಪ್ರಸಾದನು ಕಣ್ಣುಮುಚ್ಚಿಕೊಂಡು ಎಲ್ಲವನ್ನೂ ಕೇಳುತ್ತಿದ್ದನು. ಅವನಿಗೂ ಕೂಡ ವಂಶಗೌರವವು ತಂದೆಯಂತೆಯೇ ಪ್ರಿಯವಾಗಿತ್ತು. ಅವನು ಇನ್ನೂ ನಿರ್ಲಜ್ಜನಾಗುವಷ್ಟು ಅಧೋಗತಿಗೆ ಇಳಿದಿರಲಿಲ್ಲ ಪ್ರೇಮದ ಕ್ಷೇತ್ರದಲ್ಲಿ ಇದು ಅವನ ಪ್ರಥಮ ಪ್ರಯತ್ನವಾಗಿತ್ತು. ಈ ಮೊದಲನೆಯ ಪ್ರಯತ್ನದಲ್ಲಿಯೇ ಅವನ ಕಾಲಿಗೆ ಪುನಃ ಅವನು ಇತ್ತ ಕಾಲಿಡಲು ಸಾಹಸ ಮಾಡದಂತಹ ಮುಳ್ಳು ಚುಚ್ಚಿತು. ಆದರೆ ಅವನು ದಾನನಾಥನೆದುರಿಗೆ ತಂದೆಯ ಕಟು ನುಡಿಗಳನ್ನು ಕೇಳಲು ಸಿದ್ಧನಿರಲಿಲ್ಲ. ಲಾಲಾ ಬದರೀಪ್ರಸಾದರು ಅವನನ್ನು ವ್ಯಂಗೋಕ್ತಿಗಳಿಂದ ಘಾತಿಸಿದುದು ಮಾತ್ರವೇ ಅಲ್ಲ, ಅವನನ್ನು ಸುಳ್ಳುಗಾರ ಮತ್ತು ಮೋಸಗಾರನೆಂದು ಸಾರಿದರು. ತನ್ನ ಆತ್ಮರಕ್ಷಣೆಗಾಗಿ ಅವನು ಹೂಡಿದ್ದ ಕಪಟನಾಟಕವೆಲ್ಲವೂ ಬಯಲಾಯಿತು. ಲೋಕದಲ್ಲಿ ಯಾವ ತಂದೆಯಾದರೂ ಇಷ್ಟು ಕ್ರೂರಿಯಾಗುವನೆ? ಅಂದಿನಿಂದ ಕಮಲಾಪ್ರಸಾದನು ಪುನಃ ತಂದೆಯೊಡನೆ ಮಾತನಾಡಲಿಲ್ಲ.

ದಾನನಾಥನು ಇಲ್ಲಿಂದ ಹೊರಟ ಮೇಲೆ, ಈ ಸಮಯದಲ್ಲಿಯೇ ಮನೆ ಮಠಗಳನ್ನು ಬಿಟ್ಟು ಎಲ್ಲಿಯಾದರೂ ಹೋಗಬೇಕೆಂಬ ಚಿಂತೆಯು ಅವನನ್ನು ಕಾಡತೊಡಗಿತು. ಕಮಲಾಪ್ರಸಾದನು ತನ್ನೊಡನೆ ಅವನನ್ನು ಅಧೋಗತಿಗೆಳೆದಿದ್ದನು. ಸಾಮಾನ್ಯ ಜನತೆಯ ದೃಷ್ಟಿಯಲ್ಲಿ ಕಮಲಾಪ್ರಸಾದ ಮತ್ತು ಅವನು ಅಭಿನ್ನರಾಗಿದ್ದರು. ಅವರಲ್ಲಿ ಒಂದು ಕೆಲಸ ಮಾಡಿದರೆ, ಅದರ ಕೀರ್ತಿ ಅಥವಾ ಅಪಕೀರ್ತಿ ಇನ್ನೊಬ್ಬನಿಗೆ ಸಿಕ್ಕಲಿಲ್ಲವೆಂದು ಹೇಳುವುದು ಅಸಾಧ್ಯವಾಗಿತ್ತು. ಅವನು ಈಗ ಸಾರ್ವಜನಿಕರ ಎದುರಿನಲ್ಲಿ ಯಾವ ಮುಖ ಬಿಟ್ಟುಕೊಂಡು

ನಿಲ್ಲಬಲ್ಲನು ? ಇದೇ ಅವನ ಸಾರ್ವಜನಿಕ ಜೀವನದ ಅಂತ್ಯವೇ? ತನ್ನನ್ನು ಈ ಕಳಂಕದಿಂದ ಪಾರು ಮಾಡಿಕೊಳ್ಳುವ ಸಾಮರ್ಥ್ಯವು ಅವನಿಗಿದ್ದಿತೆ ?

ಆದರೆ ಕಮಲಾಪ್ರಸಾದನು ಇಂತಹ ನೀಚ ವ್ಯಕ್ತಿ! ಇಂತಹ ಕುಟಿಲ ಮತ್ತು ನೀತಿಭ್ರಷ್ಟ! ಇಂತಹ ದುರಾಚಾರಿ! ಹೀಗಿರುವಲ್ಲಿ ಯಾರನ್ನು ತಾನೆ ನಂಬುವುದಕ್ಕಾದೀತು ? ಇಂತಹ ಧರ್ಮಾನುರಾಗಿಯಾದ ಮಾನವನೇ ಇಷ್ಟು ಪತಿತನಾಗುತ್ತಾನೆಂದ ಮೇಲೆ, ಅನ್ಯರ ಪಾಡೇನು? ಯಾವ ಪ್ರಾಣಿಯು ಶೀಲ ಮತ್ತು ಪರೋಪಕಾರದ ಅಪರಾವತಾರವಾಗಿದ್ದನೋ ಅವನು ಇಂತಹ ಕಾಮಾಂಧನಾದುದೇಕೆ ? ಪ್ರಪಂಚದಲ್ಲಿ ಸತ್ಯವಾದಿಯೂ, ಆಚಾರಶೀಲನೂ ನಿಷ್ಕಪಟಿಯೂ ಆದ ವ್ಯಕ್ತಿಯು ಯಾವನೂ ಇಲ್ಲವೇ?

ಮನೆಗೆ ಹೋಗಿ ಸೇರುತ್ತಲೇ ಪ್ರೇಮಾ ಕೇಳಿದಳು— "ನೀವೂ ಕೂಡ ಅಣ್ಣನ ವಿಷಯದಲ್ಲಿ ಏನಾದರೂ ಕೇಳಿದಿರಾ ? ಈಗ ತಾನೆ ಮನೆಯ ಕೆಲಸದವಳು ಎಲ್ಲಿಂದಲೋ ಅರ್ಥಾರ್ಥ ಸಂಬಂಧವಿಲ್ಲದ ಸಮಾಚಾರವನ್ನು ಕೇಳಿ ಬಂದಿದ್ದಾಳೆ. ನನಗೇನೋ ನಂಬಿಕೆಯಾಗುತ್ತಿಲ್ಲ."

ದಾನನಾಥನು ಎತ್ತಲೋ ನೋಡುತ್ತಾ ಹೇಳಿದನು— "ನಂಬದಿರಲು ಕಾರಣ ?"

"ಹಾಗಾದರೆ ನೀವೂ ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡಿರುವಿರಾ ?"

"ಹೌದು, ಕೇಳಿದ್ದೇನೆ. ಈಗ ನಿಮ್ಮ ಮನೆಯಿಂದಲೇ ಬರುತ್ತಿದ್ದೇನೆ."

"ಹಾಗಾದರೆ ನಿಜವಾಗಿಯೂ ಅಣ್ಣ ಪೂರ್ಣಾಳನ್ನು ತೋಟಕ್ಕೆ ಕರೆದುಕೊಂಡು ಹೋಗಿದ್ದನೆ ?"

"ಹದಿನಾರಾಣೆ ಸತ್ಯ !"

"ಪೂರ್ಣಾ ಅಣ್ಣನನ್ನು ಹೊಡೆದು ಬೀಳಿಸಿದುದೂ ನಿಜವೆ ?"

"ಹೌದು, ಇದೂ ನಿಜವೇ."

"ನಿಮಗೆ ಹೇಳಿದವರಾರು ?"

"ನಿಮ್ಮ ತಂದೆಯವರು."

"ತಂದೆಯವರ ಮಾತನ್ನು ನಂಬಬೇಡಿ. ಅವರು ಅಣ್ಣನ ಮೇಲೆ ಉರಿದುಬೀಳುತ್ತಾರೆ."

"ಹಾಗಾದರೆ ಅವರು ಕಮಲಾಪ್ರಸಾದನ ಮೇಲೆ ಮಿಥ್ಯಾ ದೋಷಾರೋಪಣೆ ಮಾಡಿದರೆಂದು ತಿಳಿಯಲೇ ?"

"ಇಲ್ಲ, ನಾನು ಹಾಗೆ ಹೇಳಲಾರೆ. ಆದರೆ ಅಣ್ಣನಲ್ಲಿ ಇಂತಹ ಕೆಟ್ಟ ಅಭ್ಯಾಸವು ಎಂದೂ ಇರಲಿಲ್ಲ."

"ನೀನು ಮಾನವ ಹೃದಯವನ್ನು ಅರ್ಥಮಾಡಿಕೊಳ್ಳಲಾರೆ. ಮೊದಲು ನಾನು ಕೂಡ ನಿಮ್ಮಣ್ಣನನ್ನು ಧರ್ಮಾವತಾರನೆಂದು ತಿಳಿದಿದ್ದೆನು. ಆದರೆ ಇಂದು ಆತನು ಲಂಪಟನು ಮಾತ್ರವೇ ಅಲ್ಲ, ಪ್ರಥಮ ದರ್ಜೆಯ ಠಕ್ಕುಗಾರನೆಂದೂ ತಿಳಿಯಿತು. ಪೂರ್ಣಾ ಸ್ತೋತ್ರಾರ್ಹವಾದ ಕೆಲಸವನ್ನೇ ಮಾಡಿದಳು. ಕೊಂದುಹಾಕಿದ್ದರೆ ಇನ್ನೂ ಚೆನ್ನಾಗಿತ್ತು. ಅವಳು ಆವನನ್ನು ಏಕೆ ಜೀವ ಸಹಿತ ಬಿಟ್ಟಳೋ ತಿಳಿಯದು. ನಿನ್ನ ಒಡಹುಟ್ಟಿದವನೆಂದು ತಿಳಿದು ಅವಳಿಗೆ ಕರುಣೆಯುಂಟಾಗಿರಬಹುದು."

ಪ್ರೇಮಾ ಒಂದು ಕ್ಷಣಕಾಲ ಯೋಚಿಸಿ ಅನುಮಾನದಿಂದಲೇ ಹೇಳಿದಳು— "ನನಗೆ ಈಗಲೂ ನಂಬಿಕೆಯಾಗಲೊಲ್ಲದು. ಪೂರ್ಣಾ ಎಡೆಬಿಡದೆ ನಮ್ಮ ಮನೆಗೆ ಬರುತ್ತಿದ್ದಳು. ನಮ್ಮಣ್ಣನು ಅವಳ ಕಡೆಗೆ ಕಣ್ಣೆತ್ತಿಯೂ ನೋಡುತ್ತಿರಲಿಲ್ಲ. ಇದರಲ್ಲಿ ಖಂಡಿತವಾಗಿಯೂ ಏನೋ ಮೋಸವಿರುವಂತೆ ಕಾಣುತ್ತೆ. ಅಣ್ಣನಿಗೆ ತುಂಬಾ ಘಾಯವಾಗಿದೆಯೇ ?"

ದಾನನಾಥನು ವ್ಯಂಗವಾಗಿ ನಕ್ಕು ಹೇಳಿದನು— " ಹೋಗಿ ಸ್ವಲ್ಪ ಮುಲಾಮು ಹಾಕಿ ಬ್ಯಾಂಡೇಜ್ ಕಟ್ಟಿ ಬಾ !"

ಪ್ರೇಮಾ ತಿರಸ್ಕಾರ ದೃಷ್ಟಿಯಿಂದ ನೋಡುತ್ತಾ ಹೇಳಿದಳು—" ಅಯ್ಯೋ ದೇವರೆ, ನೀವೆಂತಹ ನಿರ್ದಯಿಗಳು. ಕಷ್ಟದಲ್ಲಿರುವವರನ್ನು ನೋಡಿಯೂ ನಿಮಗೆ ದಯೆಯುಂಟಾಗುವುದಿಲ್ಲವಲ್ಲಾ !"

"ಇಂತಹ ಪಾಪಿಗಳಿಗೆ ದಯೆದೋರುವುದು ಅದನ್ನು ದುರುಪಯೋಗಪಡಿಸಿದಂತಾಗುವುದು. ಆ ಸಮಯದಲ್ಲಿ ನಾನೇನಾದರೂ ತೋಟದಲ್ಲಿದ್ದು, ಯಾವ ರೀತಿಯಿಂದಲಾದರೂ ಪೂರ್ಣಾಳ ಕಿರುಚಿಕೊಂಡ ಶಬ್ದ ನನ್ನ ಕಿವಿಗೆ ಬಿದ್ದಿದ್ದರೆ, ನನಗೆ ಗಲ್ಲಿನ ಶಿಕ್ಷೆಯಾಗಿದ್ದರೂ ಚಿಂತೆಯಿಲ್ಲ, ಕಮಲಾಪ್ರಸಾದನನ್ನು ಮಾತ್ರ ಜೀವಸಹಿತ ಬಿಡುತ್ತಿರಲಿಲ್ಲ. ಗಲ್ಲಿನ ಶಿಕ್ಷೆ ಏಕೆ ಆಗುತ್ತಿತ್ತು? ಕಾನೂನಿಗೆ ಕಣ್ಣಿಲ್ಲವೆ? ಇಂತಹ ಸಮಯದಲ್ಲಿ ನಾನೇ ಏಕೆ, ಎಲ್ಲರೂ ಹೀಗೇ ಮಾಡು

ತ್ತಿದ್ದರು. ನೀಚ! ಇವನಿಗೆ ಒಬ್ಬ ಅನಾಥಿನಿಯಾದ ಅಬಲೆಯ ಮೇಲೆ ಅತ್ಯಾಚಾರ ಮಾಡಲು ನಾಚಿಕೆಯಾಗಲಿಲ್ಲ. ಅದರಲ್ಲೂ ತನ್ನ ಆಶ್ರಯದಲ್ಲಿದ್ದ ವಳ ಮೇಲೆ ಈ ಅಕೃತ್ಯವೇ? ನಾನು ಇಂತಹ ಮನುಷ್ಯನನ್ನು ಕೊಲೆ ಮಾಡುವುದು ಪಾಪವೆಂದು ತಿಳಿಯುವುದಿಲ್ಲ."

ಪ್ರೇಮಾಗೆ ಈ ನಿಷ್ಠುರ ಮಾತುಗಳು ಅಪ್ರಿಯವೆನಿಸಿದುವು. ಪ್ರಾಯಶಃ ಈ ವಿಷಯವು ಸತ್ಯವೆಂದು ದೃಢಪಟ್ಟಮೇಲೆ ಅವಳ ಮನಸ್ಸಿನಲ್ಲಿಯೂ ಇಂತಹ ಭಾವನೆಗಳುಂಟಾಗುತ್ತಿದ್ದುವೋ ಏನೋ! ಆದರೆ ಈ ಸಮಯದಲ್ಲಿ ಕೇವಲ ತನ್ನನ್ನು ನೋಯಿಸುವುದಕ್ಕಾಗಿಯೇ, ಕೇವಲ ತನ್ನನ್ನು ಅಪಮಾನಪಡಿಸುವುದಕ್ಕಾಗಿಯೇ ಈ ವಾಗ್ಬಾಣವು ಪ್ರಯೋಗಿಸಲ್ಪಟ್ಟಿರುವಂತೆ ಅವಳಿಗೆ ಭಾಸವಾಯಿತು. ಒಂದು ವೇಳೆ ಈ ವಿಷಯವನ್ನು ಸತ್ಯವೆಂದು ಒಪ್ಪಿದರೂ ಕೂಡ ಈ ರೀತಿಯ ಹೊಟ್ಟೆ ಉರಿಸುವ ಮಾತುಗಳನ್ನಾಡುವುದರಿಂದ ಆಗುವ ಪ್ರಯೋಜನ ವೇನು? ಈ ಮಾತುಗಳನ್ನೆಲ್ಲಾ ಅಂತರಂಗದಲ್ಲಿಯೇ ಅಡಗಿಸಿಕೊಂಡಿರಲು ಸಾಧ್ಯವಿರಲಿಲ್ಲವೇ?

ಅವಳ ಮನಸ್ಸಿನಲ್ಲಿ ಕಮಲಾಪ್ರಸಾದನನ್ನು ನೋಡಿಕೊಂಡು ಬರಬೇಕೆಂಬ ಪ್ರಬಲ ಇಚ್ಛೆಯಾಯಿತು. ಆದರೆ ಆಗ ಪತಿದೇವನು ಮತ್ತಷ್ಟು ಕೋಪಿಸಿಕೊಳ್ಳುವನೆಂಬ ಭಯದಿಂದ ಅವಳು ಈ ಇಷ್ಟವನ್ನು ಪ್ರಕಟಪಡಿಸಲಿಲ್ಲ. ಮನಸ್ಸಿನಲ್ಲಿಯೇ ಅಡಗಿಸಿಕೊಂಡು ಇದ್ದುಬಿಟ್ಟಳು.

ಒಂದು ಕ್ಷಣ ಕಾಲದ ನಂತರ ದಾನನಾಥನು ಹೇಳಿದನು— "ಹೋಗಬೇಕೆಂಬ ಇಚ್ಛೆಯಾದರೆ ಹೋಗಿ ನೋಡಿಕೊಂಡು ಬಾ. ದೊಡ್ಡ ಘಾಯಗಳೇನೂ ಆಗಿಲ್ಲ. ಗುಂಡಿನೇಟು ತಿಂದವನಂತೆ ಕಮಲಾಪ್ರಸಾದನು ಸೋಗು ಹಾಕಿಕೊಂಡಿದ್ದಾನೆ."

ಪ್ರೇಮಾ ವಿರಕ್ತಳಂತೆ ನುಡಿದಳು— "ನೀವಾಗಲೇ ನೋಡಿಕೊಂಡೇ ಬಂದಿರುವಿರಿ. ನಾನು ಹೋಗಿ ಮಾಡುವುದೇನು?"

"ಇಲ್ಲ ಪ್ರೇಮಾ, ನಾನು ಯಾರನ್ನೂ ಅಡ್ಡಿ ಪಡಿಸುವುದಿಲ್ಲ. ಹಿಂದಿನಿಂದ ನೀವು ನನ್ನನ್ನು ಹೋಗಗೊಡಲಿಲ್ಲವೆಂದು ನೀನು ಹೇಳುವುದಕ್ಕೆ ಅವಕಾಶವಿರಬಾರದು. ನಾನು ಖಂಡಿತ ನಿನ್ನನ್ನು ನಿರ್ಬಂಧಪಡಿಸುವುದಿಲ್ಲ."

"ನಾನಂತೂ ಎಂದೂ ಯಾವ ವಿಷಯದಲ್ಲಿಯೂ ನಿಮ್ಮನ್ನು ದೂಷಣೆ ಮಾಡಿಲ್ಲ. ವ್ಯರ್ಥವಾಗಿ ನನ್ನ ಮೇಲೆ ದೋಷಾರೋಪಣೆಯನ್ನೇಕೆ ಮಾಡು ತ್ತಿರುವಿರಿ? ನನಗೆ ಖಂಡಿತ ಹೋಗಲು ಇಷ್ಟವಿಲ್ಲ."

"ಹೌದು, ಇಷ್ಟವಿಲ್ಲದಿರಬಹುದು. ನಾನು ಹೇಳಿದೆನಲ್ಲವೆ! ನಾನು ಬೇಡವೆಂದಿದ್ದರೆ ಅವಶ್ಯವಾಗಿಯೂ ಇಷ್ಟವಾಗುತ್ತಿತ್ತು. ನಾನು ಹೇಳಿದ್ದರಿಂದ ವೈಲಿಗೆಯಾಯಿತು."

ಇದು ಅದೇ ಚಂದಾ ವಸೂಲಿಯನ್ನು ತಡೆಗಟ್ಟಲು ಏರ್ಪಡಿಸಿದ ಸಭೆಯ ಕಡೆಗೆ ಸಂಕೇತವೆಂದು ಪ್ರೇಮಾ ತಿಳಿದುಕೊಂಡಳು. ಈಗ ಮತ್ತಾವ ಮಾತನಾಡುವುದಕ್ಕೂ ಸಮಯವಿರಲಿಲ್ಲ. ದಾನನಾಥನು ಆ ಅಪರಾಧವನ್ನು ಇಲ್ಲಿಯ ವರೆಗೂ ಕ್ಷಮಿಸಿರಲಿಲ್ಲ. ಅಲ್ಲಿಂದ ಎದ್ದು ತನ್ನ ಕೊಠಡಿಗೆ ಹೊರಟು ಹೋದಳು.

ದಾನನಾಥನ ಮನೋವ್ಯಾಧಿಯು ಗುಣವಾಗುವ ಅವಕಾಶ ದೊರೆಯ ಲಿಲ್ಲ. ಅವನು ಅನೇಕ ತಿಂಗಳಿಂದಲೂ ಪ್ರೇಮಾಳೊಡನೆ ಹೃದಯ ಬಿಚ್ಚಿ ಮಾತನಾಡಲು ಸಮಯ ಕಾಯುತ್ತಿದ್ದನು; ಆದರೆ ಅಂತಹ ಸುಸಮಯವು ಅವನಿಗೆ ಸಿಕ್ಕುತ್ತಿರಲಿಲ್ಲ. ಇಂದೂ ಸಹ ಅಂತಹ ಅವಕಾಶವು ತಪ್ಪಿಹೋಯಿತು. ಅವನು ಗೊಣಗುಟ್ಟುತ್ತಲೇ ಹೊರಗೆ ಹೋಗುವುದರಲ್ಲಿದ್ದನು. ಅಷ್ಟರಲ್ಲಿಯೇ ಅವನ ತಾಯಿ ಬಂದು ಹೇಳಿದರು— "ಮಗೂ, ಈ ದಿನ ಮಾವನ ಮನೆ ಕಡೆ ಏನಾದರೂ ಹೋಗಿದ್ದೆಯಾ? ಏನೋ ಗಲಾಟೆ ಅಂತ ಕೇಳಿದೆ."

ದಾನನಾಥನು ತಾಯಿಯ ಮುಂದೆ ಮಾವನ ಮನೆಯ ವಿಷಯವಾಗಿ ಯಾವ ಕೆಟ್ಟ ಮಾತನ್ನೂ ಆಡುತ್ತಿರಲಿಲ್ಲ. ಹೆಂಗಸರನ್ನು ರೇಗಿಸುವುದಕ್ಕೆ ಇದಕ್ಕಿಂತಲೂ ಸುಲಭೋಪಾಯ ಬೇರೊಂದಿಲ್ಲ. ಇದೂ ಅಲ್ಲದೆ ಈಗ ತಾನೆ ಅವನು ಪ್ರೇಮಾಗೆ ಕಠೋರ ಮಾತುಗಳನ್ನಾಡಿದ್ದನು. ಅದಕ್ಕಾಗಿ ಅವನಿಗೆ ಸ್ವಲ್ಪ ವ್ಯಥೆಯೂ ಆಗುತ್ತಿತ್ತು. ಅವೇ ಮಾತುಗಳನ್ನು ಸಹಾನುಭೂತಿಯ ರೀತಿಯಲ್ಲಿಯೂ ಹೇಳಬಹುದೆಂದು ಈಗ ಅವನಿಗೆ ಅರಿವಾಗುತ್ತಿತ್ತು. ಮನಸ್ಸು ವಿಷಾದವನ್ನು ವ್ಯಕ್ತಪಡಿಸಲು ಚಡಪಡಿಸುತ್ತಿತ್ತು. "ಎಲ್ಲವೂ ಹರಟೆ, ಅಮ್ಮ!" ಎಂದನು.

"ಹರಟೆ ಹೇಗಾದೀತು? ಪೇಟೆಯಲ್ಲಿ ಜನರಾಡಿಕೊಳ್ಳುತ್ತಿದ್ದುದನ್ನು

ಕೇಳಿಕೊಂಡು ಬಂದಿದ್ದೇನೆ. ಗಂಗಾತಟದಲ್ಲಿಯೂ ಈ ಚರ್ಚೆಯೇ ಆಗು ತ್ತಿತ್ತು. ಆ ಬ್ರಾಹ್ಮಣಿ ವನಿತಾಸದನಕ್ಕೆ ಸೇರಿದಳಂತೆ."

ದಾನನಾಥನು ಕಣ್ಣರಳಿಸಿಕೊಂಡು ಕೇಳಿದನು— "ವನಿತಾ ಸದನವೆ ? ಅಲ್ಲಿ ಹೇಗೆ ಹೋದಳು ?"

"ಈಗ ಇದು ನನಗೆ ಹೇಗೆ ತಿಳಿಯಬೇಕು ? ಆದರೆ ಅಲ್ಲಿಗೆ ಹೋಗಿ ಸೇರಿದಳೆಂಬುದರಲ್ಲಿ ಸಂದೇಹವಿಲ್ಲ. ಅನೇಕರು ಅಲ್ಲಿಗೆ ಹೋಗಿ ತಿಳಿದು ಕೊಂಡು ಬಂದರು. ನಾನು ಕಮಲಾಪ್ರಸಾದನನ್ನು ನೋಡುತ್ತಲೆ ಅವನ ಯೋಗ್ಯತೆಯನ್ನು ತಿಳಿದುಕೊಂಡಿದ್ದೆ; ಆದರೆ ನೀನು ಕೇಳಬೇಕಲ್ಲ ಯಾರ ಮಾತನ್ನಾದರೂ !"

"ಅಮ್ಮ, ಅನ್ಯರ ಮನಸ್ಸಿನ ಸ್ಥಿತಿಯು ಹೇಗೆ ತಾನೆ ಗೊತ್ತಾಗಬೇಕು ? "

"ಕಣ್ಣಿರುವವರು ತಿಳಿದೇ ತಿಳಿಯುತ್ತಾರೆ. ಹೌದು, ನಿನ್ನಂತಹವರು ಮೋಸಕ್ಕೊಳಗಾಗುತ್ತಾರೆ. ಈಗ ನಗರದಲ್ಲಿ ನೀನು ಎತ್ತ ಹೋದರೂ ಜನರು ನಿನ್ನ ಕಡೆ ಬೆರಳು ತೋರಿಸುವರು. ಜನರು ನಿನ್ನನ್ನೂ ಅಪರಾಧಿ ಯೆಂದೇ ಬಗೆಯುವರು ಆ ಹೆಂಗಸು ಅಲ್ಲಿಗೆ ಹೋಗಿ ಯಾವ ಯಾವ ಹೊಸ ವಿಷಯಗಳನ್ನು ಸೃಷ್ಟಿಸುವಳೋ ನಾನರಿಯೆ. ನಡೆದ ವಿಷಯ ಒಂದಾಗಿದ್ದರೆ ಅದಕ್ಕೆ ಬಣ್ಣಕಟ್ಟಿ ನೂರು ರೀತಿಯಲ್ಲಿ ಬಣ್ಣಿಸುವಳು. ಮೊದಲಿನಿಂದಲೂ ಅವರಿಬ್ಬರಿಗೂ ಸ್ವಲ್ಪವೂ ಸಂಬಂಧವಿರಲಿಲ್ಲವೆಂಬ ಮಾತನ್ನು ನಾನು ಖಂಡಿತ ನಂಬುವುದಿಲ್ಲ. ಮೊದಲಿನಿಂದಲೂ ಏನಾದರೂ ಮಾತುಕತೆಯಾಗದಿದ್ದರೆ, ಅವಳು ಒಂಟಿಯಾಗಿ ಕಮಲಾಪ್ರಸಾದನ ಜೊತೆ ತೋಟಕ್ಕೆ ಏಕೆ ಹೋದಳು ? ಆದರೆ ಈಗ ಅವಳು ಎಲ್ಲಾ ಅಪರಾಧವನ್ನೂ ಕಮಲಾಪ್ರಸಾದನ ಮೇಲೆ ಹೊರಿಸಿ, ತಾನು ನುಸುಳಿಕೊಳ್ಳುವಳು. ನಿನ್ನನ್ನು ಎಲ್ಲಿಯಾದರೂ ಎಳೆದು ಬಿಡುತ್ತಾಳೇನೋ ಎಂದು ಭಯವಾಗುತ್ತಿದೆ, ನನಗೆ. ಸ್ವಲ್ಪ ಅವಳು ನನಗೆ ಒಂದು ಸಾರಿ ಸಿಕ್ಕಿದ್ದರೆ ಎಲ್ಲವನ್ನೂ ಕೇಳುತ್ತಿದ್ದೆ."

ದಾನನಾಥನಿಗೆ ಹಸಿವು ಅಧಿಕವಾಯಿತು. ಯಾವ ಮಾತನ್ನಾದರೂ ಗುಟ್ಟಾಗಿಡುವುದೆಂದರೆ ಅವನಿಗೆ ಸಾಧ್ಯವಿರಲಿಲ್ಲ. ಪ್ರೇಮಾಳ ಕೊಠಡಿಯ ಬಳಿಗೆ ಹೋಗಿ ಹೇಳಿದನು— "ಕೇಳಿದೆಯಾ, ಪೂರ್ಣಾ ವನಿತಾ ಸದನಕ್ಕೆ ಹೋಗಿ ಸೇರಿದಳಂತೆ. "

ಪ್ರೇಮಾ ಅವನ ಕಡೆ ನೋಡಿದಳು. ಅವಳ ಕಣ್ಣುಗಳು ಕೆಂಪಾಗಿದ್ದುವು. ಅವಳ ಅಂತರಂಗದ ವ್ಯಥೆಯು ಕಂಬನಿಯಾಗಿ ಹರಿಯುತ್ತಿತ್ತು. ಚಂದಾ ಕೂಡಿಸಲು ಏರ್ಪಡಿಸಿದ್ದ ಸಭೆಗೆ ಅವಳು ಹೋದದ್ದು ಅಕ್ಷಮ್ಯ ಅಪರಾಧವೇನೂ ಆಗಿರಲಿಲ್ಲ. ತಾನು ಎಲ್ಲಿಗೆ ಹೋಗುತ್ತಾನೆ, ಏನು ಮಾಡುತ್ತಾನೆ ಎಂಬುದನ್ನು ಅವಳನ್ನು ಕೇಳಿಯೇ ಮಾಡುತ್ತಾನೆಯೇ ? ವಿದ್ಯಾ, ಬುದ್ಧಿ ಮತ್ತು ವಯಸ್ಸಿನಲ್ಲಿ ಅವಳಿಗಿಂತಲೂ ದೊಡ್ಡವನು. ಆದ್ದರಿಂದ ಹೆಚ್ಚು ಸ್ವತಂತ್ರನು—ಎಂಬುದರಲ್ಲಿ ಸಂಶಯವಿಲ್ಲ. ಅವನಿಗೆ ಅವಳನ್ನು ಸೂಕ್ಷ್ಮದೃಷ್ಟಿಯಿಂದ ಪರೀಕ್ಷಿಸುವ ಅಧಿಕಾರವೂ ಇದೆ. ಅವಳು ಅನುಚಿತ ಕಾರ್ಯಮಾಡುತ್ತಿರುವುದನ್ನು ನೋಡಿದರೆ, ಅವನು ತಡೆಯಬಲ್ಲನು; ಆದರೆ ಆ ಸಭೆಗೆ ಹೋದದ್ದು ಅನುಚಿತ ಕಾರ್ಯವಾಗಿರಲಿಲ್ಲ. ಅಮೃತರಾಯನ ಕೈವಾಡವಿರುವ ಕೆಲಸಗಳೆಲ್ಲಾ ಅನುಚಿತವಾಗುತ್ತವೆಯೆ ?—ಇವರಲ್ಲಿ ಇಷ್ಟು ಸಹಾನುಭೂತಿಯೂ ಇಲ್ಲವಲ್ಲಾ ! ಎಲ್ಲವನ್ನು ತಿಳಿದಿದ್ದರೂ ತಿಳಿಗೇಡಿಗಳಂತಾಗುತ್ತಾರೆ !

ದಾನನಾಥನು ಅವಳ ಕೆಂಪಾದ ಕಣ್ಣುಗಳನ್ನು ನೋಡಿ ಪ್ರೇಮದಿಂದ ಕರಗಿಹೋದನು. ತನ್ನ ಕಠಿಣ ವರ್ತನೆಗಾಗಿ ನಾಚಿಕೆಯಾಯಿತು. ಪ್ರೇಮದ ಗತಿಯು ನೀರಿನ ಪ್ರವಾಹದಂತಿರುತ್ತದೆ. ಕ್ಷಣಕಾಲ ಅದು ತಡೆದಂತೆ ಕಂಡರೂ ತನ್ನ ಗತಿಯನ್ನು ಬದಲಾಯಿಸಲಾರದು; ಈ ವಿಷಯವನ್ನು ಅವನು ಮರೆತುದೇಕೆ ? ಒಂದು ಶಾಶ್ವತ ಸತ್ಯವನ್ನು ವಿರೋಧಿಸಿದ್ದಕ್ಕೆ ಅವನಲ್ಲದೆ ಪ್ರಾಯಶ್ಚಿತ್ತ ಮಾಡಿಕೊಳ್ಳುವವರಾರು ? ಮಧುರ ಕಂಠದಿಂದಲೇ ಹೇಳಿದನು— "ಪೂರ್ಣಾಳಂತೂ ವನಿತಾ ಸದನವನ್ನು ಸೇರಿದಳು."

ಈ ಸಮಾಚಾರವನ್ನು ಕೇಳಿ ಆನಂದಿಸಬೇಕೋ ಅಥವಾ ದುಃಖಿಸಬೇಕೋ ಎಂಬುದನ್ನು ಪ್ರೇಮಾ ನಿಶ್ಚಯಿಸಲಾರದವಳಾದಳು. ದಾನನಾಥನು ಈ ವಿಷಯವನ್ನು ಯಾವ ಅಭಿಪ್ರಾಯದಿಂದ ಅವಳಿಗೆ ಹೇಳಿರಬಹುದು ? ಅವನ ಆಶಯವೇನಿತ್ತೆಂಬುದನ್ನು ಅವಳು ತಿಳಿಯಲಾರದೆ ಹೋದಳು. ದಾನನಾಥನು ಪ್ರಾಯಶಃ ಅವಳ ಮನೋಭಾವನೆಯನ್ನು ಗ್ರಹಿಸಿರಬೇಕು. ಆದ್ದರಿಂದಲೇ ಹೀಗೆಂದನು— "ಈಗ ಅವಳ ವಿಷಯದಲ್ಲಿ ಯಾವ ವಿಧವಾದ

ಚಿಂತೆಯೂ ಇಲ್ಲ. ಅಮೃತರಾಯನು ಅವಳನ್ನು ಕಷ್ಟದಿಂದ ಪಾರು ಮಾಡು ವನು."

ಪ್ರೇಮಾಗೆ ಈ ಮಾತು ಕೂಡ ಮೊದಲಿನ ಮಾತಿನಂತೆಯೇ ಭಾಸವಾಯಿತು. ಇದು ಅಮೃತರಾಯನ ಪ್ರಶಂಸೆಯೋ ಅಥವಾ ನಿಂದೆಯೋ? ಅಮೃತರಾಯನು ಅವಳನ್ನು ಪಾರುಗಾಣಿಸುವುದೆಂತು? ಸಾಮಾನ್ಯ ಅರ್ಥ ದಲ್ಲಿ ಹೇಳುವುದಾದರೆ, ಈಗ ಪೂರ್ಣಾಗೆ ಆಶ್ರಯ ಸಿಕ್ಕಿತೆಂಬುದೇ ಈ ಮಾತಿನ ತಾತ್ಪರ್ಯ; ಆದರೆ ಇದು ವ್ಯಂಗವಲ್ಲದೆ ಮತ್ತೇನು?

ದಾನನಾಥನು ಸ್ವಲ್ಪ ಲಜ್ಜಿತನಾಗಿ ಹೇಳಿದನು— "ಅಮೃತರಾಯನ ಮೇಲೆ ನನ್ನ ಸಂದೇಹವು ಖಂಡಿತ ಸತ್ಯದಿಂದ ದೂರವಾಗಿತ್ತೆಂದು ಈಗ ನನಗೆ ಅನುಭವವಾಗುತ್ತಿದೆ. ನಾನು ಕಣ್ಣುಮುಚ್ಚಿಕೊಂಡು ಕಮಲಾಪ್ರಸಾದನ ಪ್ರತಿಯೊಂದು ಮಾತನ್ನೂ ವೇದವಾಕ್ಯವೆಂದೇ ತಿಳಿದುಕೊಂಡಿದ್ದೆನು. ನಾನು ಅಮೃತರಾಯನಿಗೆ ಎಷ್ಟು ದೊಡ್ಡ ಅನ್ಯಾಯ ಮಾಡಿದ್ದೇನೆಂಬುದನ್ನು ಈಗೀಗ ಸ್ವಲ್ಪ ಸ್ವಲ್ಪವಾಗಿ ಅನುಭವ ಮಾಡಿಕೊಳ್ಳುತ್ತಿದ್ದೇನೆ. ನಾನು ಕಮಲಾಪ್ರಸಾದನ ದೃಷ್ಟಿಯಿಂದಲೇ ನೋಡುತ್ತಿದ್ದೆನು. ಈ ಧೂರ್ತನು ನನ್ನನ್ನು ಬಹಳ ಮೋಸಗೊಳಿಸಿದನು. ನನ್ನ ಅನನ್ಯ ಮಿತ್ರನ ಮೇಲೆ ಇಂತಹ ಸಂಶಯ ಪಡಲು, ನನ್ನ ಬುದ್ಧಿಗೆ ಯಾವ ಮಂಕು ಬಡಿದಿತ್ತೆಂಬುದೇ ನನಗೆ ಅರ್ಥವಾಗ ಲೊಲ್ಲದು."

ಈ ಸಮಯದಲ್ಲಿ ಪ್ರೇಮಾಳ ಮುಖಮಂಡಲದ ಮೇಲೆ ಎಂತಹ ಕಾಂತಿ ಮೂಡಿತೋ, ಅಂತಹ ಕಾಂತಿಯನ್ನು ದಾನನಾಥನು ಮೊದಲೆಂದೂ ನೋಡಿರ ಲಿಲ್ಲ. ಕೋಪಿಸಿಕೊಂಡಿರುವ ಅಣ್ಣತಮ್ಮಂದಿರ ಮನೋಮಾಲಿನ್ಯವು ಕಳೆದು ಹೋದಾಗ ತಾಯಿಗೆ ಆಗುವ ಆನಂದದಂತೆ ಇದೂ ಕೂಡ ಹೆಮ್ಮೆಪಡತಕ್ಕ ಆನಂದವಾಗಿತ್ತು. ಅವಳು ಮಾತಿಗಾರಂಭಿಸಿದಳು—"ನಿಮ್ಮ ಜೊತೆ ಸೇರುವು ದನ್ನೇ ಬಿಟ್ಟಿದ್ದು ಅಮೃತರಾಯನದೂ ತಪ್ಪು ಎನ್ನಬೇಕು. ಆಗಾಗ್ಗೆ ಒಬ್ಬರ ನ್ನೊಬ್ಬರು ಭೇಟಿ ಮಾಡುತ್ತಿದ್ದರೆ ಇಂತಹ ಭ್ರಾಂತಿಯೇಕೆ ಉಂಟಾಗುತ್ತಿತ್ತು? ಹೊಲವನ್ನು ಚೆನ್ನಾಗಿ ಉಳದಿರುವುದರಿಂದಲೇ ಅಲ್ಲವೇ, ಹುಲ್ಲು ಜೊಂಡು ಬೆಳೆಯುವುದು?"

"ಇಲ್ಲ, ಅವನ ಅಪರಾಧವೇನೂ ಇರಲಿಲ್ಲ. ಸಂಪೂರ್ಣ ದೋಷವು

ನನ್ನದು. ನಾನು ಆದಷ್ಟು ಬೇಗ ಇದಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಿ ಕೊಳ್ಳುವೆನು. ನಾನು ಒಂದು ಬಹಿರಂಗ ಸಭೆಯಲ್ಲಿ ಗುಟ್ಟನ್ನೆಲ್ಲಾ ರಟ್ಟು ಮಾಡುವೆನು. ಈ ಪಾಪಿಗಳ ಪಾಪ ಕಾರ್ಯಗಳನ್ನೆಲ್ಲಾ ಬಯಲಿಗೆಳೆಯು ವೆನು. ”

“ರಹಸ್ಯವೇನೋ ಸಾಕಷ್ಟು ಬೆಳಕಿಗೆ ಬಂದಿದೆ. ಈಗ ಅದನ್ನು ಬಹಿ ರಂಗಪಡಿಸುವ ಆವಶ್ಯಕತೆಯೇನು ?”

“ಆವಶ್ಯಕತೆಯಿದೆ. ಏನಿಲ್ಲೆಂದರೂ ನನ್ನ ಗೌರವವನ್ನು ರಕ್ಷಿಸಿಕೊಳ್ಳುವು ದಕ್ಕಾದರೂ ಇದು ಅತ್ಯಾವಶ್ಯಕ. ಈ ನೀಚರೊಡನೆ ನನ್ನ ಸ್ನೇಹ ಸಂಬಂಧ ಯಾವ ರೀತಿಯಲ್ಲಿತ್ತೆಂಬುದನ್ನು ನಾನು ಜನತೆಗೆ ತೋರಿಸಿಕೊಡುವೆನು. ಈ ಸಮಯದಲ್ಲಿ ಮೌನವಾಗಿರುವುದು ಆತ್ಮಘಾತವಾಗುವುದು. ಉಹುಂ, ನಾನು ಎಂತಹ ದೊಡ್ಡ ಮೋಸಕ್ಕೊಳಗಾದೆ. ನನ್ನಲ್ಲಿ ಮನುಷ್ಯರ ಶೀಲಸ್ವಭಾವ ಗಳನ್ನು ಪರೀಕ್ಷಿಸುವ ಶಕ್ತಿಯಿಲ್ಲವೆಂದು ಈಗ ನನಗೆ ಗೊತ್ತಾಯಿತು. ಆದರೆ ನಾನು ಯಾರಿಗಾದರೂ ಎಂತಹ ಪ್ರಾಣಸ್ನೇಹಿತನಾಗುವೆನೋ ಅಂತಹ ಪ್ರಾಣ ಘಾತಕನೂ ಆಗುವೆನೆಂಬುದು ಈಗ ಜನಗಳಿಗೆ ಗೊತ್ತಾಗುವುದು. ಕಮಲಾ ಪ್ರಸಾದನು ಆ ಅಬಲೆಯ ಮೇಲೆ ಕಣ್ಣಿಟ್ಟಾಗ ನಾನಲ್ಲಿದ್ದರೆ, ಖಂಡಿತ ಅವ ನನ್ನು ಗುಂಡಿಕ್ಕಿ ಕೊಲ್ಲುತ್ತಿದ್ದೆ. ಸ್ವಲ್ಪ ಈ ಒಳಸಂಚನ್ನಾದರೂ ನೋಡು, ಹಗಲೂ ಕೂಡ ಅರ್ಧ ರಾತ್ರಿಯಂತಹ ನೀರವತೆಯಿರುವ ಆ ತೋಟಕ್ಕೆ ಆ ಅಸಹಾಯಕ ಸ್ತ್ರೀಯನ್ನು ಕರೆದುಕೊಂಡು ಹೋಗುವುದೆ ? ಆದದ್ದು ಒಳ್ಳೆ ಯದೇ ಆಯಿತು. ಅವಳು ಈ ನೀಚನನ್ನು ಕೊಂದುಹಾಕಿದ್ದರೆ ಇನ್ನೂ ಒಳ್ಳೆಯದೇ ಆಗುತ್ತಿತ್ತು. ಈಗ ನನಗೆ ಅವಳ ವಿಷಯದಲ್ಲಿ ಶ್ರದ್ಧಾ, ಭಕ್ತಿ ಗಳುಂಟಾಗಿವೆ. ಹೋಗಿ ಅವಳ ದರ್ಶನ ಪಡೆಯಬೇಕೆಂದು ಮನಸ್ಸಾಗುತ್ತಿದೆ. ಆದರೆ ಈಗಲೇ ಹೋಗುವುದಿಲ್ಲ. ಮೊಟ್ಟಮೊದಲು ಈ ಗೋಮುಖ ವ್ಯಾಘ್ರ ವನ್ನು ವಿಚಾರಿಸಿಕೊಳ್ಳಬೇಕಾಗಿದೆ.”

ಪ್ರೇಮಾ ತನ್ನ ಪತಿಯನ್ನು ಶ್ರದ್ಧಾಪೂರ್ವಕವಾಗಿ ನೋಡಿದಳು. ಅವನ ಹೃದಯವು ಇಷ್ಟು ಪವಿತ್ರವಾಗಿದೆಯೆಂಬುದನ್ನು ಇಂದಿನವರೆಗೂ ಅವಳು ತಿಳಿ ದಿರಲಿಲ್ಲ. ಇದುವರೆಗೂ ಅವಳು ಅವನನ್ನು ಒಬ್ಬ ಕೃತಘ್ನ, ದ್ವೇಷಿ, ವಿಚಾರ ಹೀನ ಮತ್ತು ಮೋಸಗಾರನ ರೂಪದಲ್ಲಿ ನೋಡಿದ್ದಳು. ಇಂದು ಅವಳು

ಅವನ ಶುದ್ಧವೂ, ನಿರ್ಮಲವೂ ಆದ ಅಂತಃಕರಣದ ಪ್ರತಿಬಿಂಬವನ್ನು ಕಂಡಳು. ಎಂತಹ ನಿಜವಾದ ಪಶ್ಚಾತ್ತಾಪ! ಎಂತಹ ಪವಿತ್ರವಾದ ಕೋಪ! ಒಬ್ಬ ಅಬಲೆಗೆ ಎಷ್ಟೊಂದು ಗೌರವ !!

ಅವಳು ಕೊಠಡಿಯ ಬಾಗಿಲ ಬಳಿ ಬಂದು ಹೇಳಿದಳು— "ಈ ಸಮಯದಲ್ಲಿ ನೀವು ಸುಮ್ಮನಿರುವುದೇ ಲೇಸೆನಿಸುತ್ತದೆ. ಕೆಲವು ದಿನಗಳವರೆಗೆ ಜನರು ನಿಮ್ಮನ್ನು ಅಪಮಾನಪಡಿಸುವರು. ಆದರೆ ಕೊನೆಗೆ ಅವರೇ ನಿಮ್ಮನ್ನು ಗೌರವಿಸುವರು. ನೀವು ಅಣ್ಣನಿಗೆ ವಿರುದ್ಧವಾಗಿ ವರ್ತಿಸಿದರೆ, ತಂದೆಯವರಿಗೆ ತುಂಬಾ ದುಃಖವಾಗುವುದೆಂದು ನನಗೆ ಸಂದೇಹವಾಗುತ್ತದೆ."

ದಾನನಾಥನು ವಿಷಪಾನ ಮಾಡಿದವನಂತೆ ಹೇಳಿದನು— "ಒಳ್ಳೆಯದು, ನಿನ್ನಿಷ್ಟದಂತೆಯೇ ಆಗಲಿ. ಆದರೆ ನಾನು ಹೊರಗೆ ಯಾರಿಗೂ ಮುಖ ತೋರಿಸದಂತಾಗುವುವೆನೆಂಬುದನ್ನು ಜ್ಞಾಪಕದಲ್ಲಿಟ್ಟುಕೋ."

ಪ್ರೇಮಾ ಪ್ರೇಮ ಮತ್ತು ಕೃತಜ್ಞತೆಯ ದೃಷ್ಟಿಯಿಂದ ನೋಡಿದಳು. ಅವಳ ಕಂಠ ಬಿಗಿದುಬಂದಿತು. ಬಾಯಿಂದ ಒಂದು ಶಬ್ದವಾದರೂ ಹೊರಡಲಿಲ್ಲ. ಪತಿಯ ಈ ಮಹತ್ತರವಾದ ತ್ಯಾಗವು ಅವಳನ್ನು ಪುಳಕಿತಳನ್ನಾಗಿ ಮಾಡಿತು. ಅವಳ ಒಂದು ಸಂಕೇತದಿಂದಲೇ ಅಪಮಾನ, ನಿಂದೆ ಮತ್ತು ಅನಾದರಣೆಯನ್ನು ಸಹಿಸುವುದಕ್ಕೆ ಸಿದ್ಧನಾಗಿ ದಾನನಾಥನು ಇಂದು ಅವಳ ಸಂಪೂರ್ಣ ಪ್ರೇಮಕ್ಕೆ ಪಾತ್ರವಾದನು. ಅವಳು ಬಾಯಿಬಿಟ್ಟು ಏನೂ ಹೇಳಲಿಲ್ಲ; ಆದರೆ ಅವಳ ಪ್ರತಿಯೊಂದು ರೋಮವೂ ಗಂಡನಿಗೆ ಶುಭವನ್ನು ಕೋರುತ್ತಿತ್ತು.

ಹೃದಯವನ್ನು ಗೆಲ್ಲುವ ಶಕ್ತಿಯು ತ್ಯಾಗದಲ್ಲಿ ಮಾತ್ರವಿದೆ!!

## ೧೪



ನಗರದ ಪ್ರತಿಯೊಂದು ಮನೆ, ಬೀದಿ—ಎಲ್ಲಿ ಹೋದಲ್ಲೂ ಇದೇ ಚರ್ಚೆಯಾಗುತ್ತಿತ್ತು. ದಾನನಾಥನ ಹೆಸರೂ ಕೂಡ ಪ್ರಾಸಂಗಿಕವಾಗಿ ಜನಗಳ

ಬಾಯಿಂದ ಬರುತ್ತಿತ್ತು. ಯಾವ ವ್ಯಕ್ತಿ ಕಮಲಾಪ್ರಸಾದನೊಡನೆ ಇಪ್ಪತ್ತು ನಾಲ್ಕು ಗಂಟೆಯೂ ಕಾಲ ಕಳೆಯುತ್ತಿದ್ದನೋ, ಅವನು ಈ ದುಷ್ಕೃತ್ಯದಿಂದ ಬೇರೆ ಇರಬಲ್ಲನೇ? ಸರಿ, ಕಮಲಾಪ್ರಸಾದನೇನೋ ಶ್ರೀಮಂತನೊಬ್ಬನ ವಿಲಾಸಿ ಯುವಕನಾಗಿದ್ದನು. ಅವನ ನಡತೆಯನ್ನು ಕಠಿಣವಾಗಿ ಟೀಕಿಸಲಾಗುತ್ತಿರಲಿಲ್ಲ. ಇಂತಹ ವ್ಯಕ್ತಿಗಳು ಸಾಮಾನ್ಯವಾಗಿ ದುರ್ವ್ಯಸನಿಗಳಾಗುವರು. ಇದೇನೂ ಹೊಸ ವಿಷಯವಾಗಿರಲಿಲ್ಲ. ಇನ್ನೂ ಕೆಲವು ದಿನಗಳ ಮೊದಲೇ ಕಮಲಾಪ್ರಸಾದನ ಮೇಲೆ ಇಂತಹ ಅಪವಾದ ಬಂದಿದ್ದರೆ, ಯಾರೂ ಅದಕ್ಕೆ ಗಮನ ಕೊಡುತ್ತಿರಲಿಲ್ಲ. ಇಂತಹ ನೂರಾರು ಘಟನೆಗಳು ನಿತ್ಯವೂ ನಡೆಯುತ್ತಿರುತ್ತವೆ. ಯಾರೂ ಅತ್ತ ಮನಸ್ಸು ಕೊಡುವುದೇ ಇಲ್ಲ. ನಾಯಕರ ಮಂಡಲಿಗೆ ಸೇರಿದ ಮೇಲೆ ನಮ್ಮ ರೂಪರೇಷೆಗಳ ಪರೀಕ್ಷೆಯಾಗುತ್ತದೆ. ನಾಯಕರ ನಡೆವಳಿಕೆ, ಆಹಾರ–ವ್ಯವಹಾರ ಎಲ್ಲವೂ ಅನ್ಯರ ಚರ್ಚೆಯ ವಿಷಯಗಳಾಗುತ್ತವೆ. ಅವರ ನಡವಳಿಕೆಯ ಪರೀಕ್ಷೆಯು ಆದರ್ಶ ನಿಯಮಗಳಿಗನುಸಾರವಾಗಿ ನಡೆಯುತ್ತವೆ. ಕಮಲಾಪ್ರಸಾದನು ಇಲ್ಲಿಯ ವರೆಗೂ ನಾಯಕರ ಶ್ರೇಣಿಗೆ ಸೇರಿರಲಿಲ್ಲ. ಅವನ ಗೌರವ ಪ್ರಭಾವಗಳೆಲ್ಲವೂ ದಾನನಾಥನಂತಹ ವಿದ್ವಾಂಸರೂ, ಪ್ರತಿಭಾವಂತರೂ, ಸಚ್ಚರಿತ್ರರೂ ಆದವರ ಸತ್ಸಹವಾಸದ ಫಲದಿಂದಾಗಿದ್ದುವು. ಅವನು ಭೂಮಿಯಿಂದ ಸ್ವಯಂಚೇತನ ಮತ್ತು ಶಕ್ತಿಗಳನ್ನು ಪಡೆಯುವಂತಹ ಗಿಡದಂತಿರಲಿಲ್ಲ. ಮರವನ್ನು ಆಶ್ರಯಿಸುವ ಬಳ್ಳಿಯಂತಿದ್ದನು. ಅವನಲ್ಲಿದ್ದ ಜ್ಞಾನವೆಲ್ಲವೂ ಅನ್ಯರ ಜ್ಞಾನದ ಪ್ರತಿಬಿಂಬ ಮಾತ್ರವಾಗಿತ್ತು. ಹೀಗಿದ್ದುದರಿಂದ ಅವನ ಕೃತ್ಯಗಳ ಜವಾಬ್ದಾರಿಯೆಲ್ಲವೂ ಅನೇಕ ಅಂಶಗಳಲ್ಲಿ ಅವನ ಸ್ನೇಹಿತರದೆ ಆಗುತ್ತಿತ್ತು. ಹತ್ತಿರದ ಸಂಬಂಧಿಕನಾದ್ದರಿಂದ ದಾನನಾಥನ ಮೇಲೆ ಈ ಜವಾಬ್ದಾರಿಕೆಯ ಹೆಚ್ಚು ಭಾರವು ಹೊರಿಸಲ್ಪಟ್ಟಿತ್ತು. "ಅಲ್ರೀ, ಇಬ್ಬರೂ ಒಂದೇ ಅಚ್ಚಿನಲ್ಲಿ ಎರಕಹೊಯ್ದವರು."— ಈ ಮಾತು ಯಾರ ಬಾಯಿಂದಲೂ ಹೊರಗೆ ಬಾರದಿದ್ದರೂ, ಎಲ್ಲರ ಮನಸ್ಸಿನಲ್ಲೂ ಇದ್ದೇ ಇತ್ತು.

ನಾಲ್ಕಾರು ದಿನಗಳಲ್ಲಿ ಜನತೆಯ ದೃಷ್ಟಿಕೋನದಲ್ಲಿ ಒಂದು ವಿಚಿತ್ರ ಪರಿವರ್ತನೆಯಾಯಿತು. ಈ ವಿಧವಾದ ತರ್ಕ-ವಿತರ್ಕಗಳಾಗತೊಡಗಿದುವು— "ಕಮಲಾಪ್ರಸಾದನ ದೋಷವೇನೂ ಇಲ್ಲ, ಅವನು ಸರಳ ಸ್ವಭಾವದವನು.

ಸೂತ್ರವನ್ನು ಅನ್ಯರ ಕೈಗಿತ್ತು ಕೀಲುಕುದುರೆಯು ದೇಹದಲ್ಲಡಗಿಕೊಂಡು ಬೇಟೆ ಯಾಡುವವರಂತೆ ಈ ಬಡವನನ್ನು ಪೆದ್ದನನ್ನಾಗಿ ಮಾಡಿ ತಾವು ಮಾತ್ರ ಆನಂದಪಡುತ್ತಾರೆ. ದಡ್ಡರು ಮಾತ್ರ ಸಿಕ್ಕಿಬೀಳುತ್ತಾರೆ, ಕಿಲಾಡಿಗಳು ಪಾರಾ ಗುತ್ತಾರೆ. ದಾನನಾಥನ ಮೇಲೆಯೇ ಕಳಂಕವನ್ನೆಲ್ಲಾ ಹೊರಿಸಿದರು.

ದಾನನಾಥನಿಗೆ ನಿಜವಾಗಿಯೂ ಮನೆಯಿಂದ ಹೊರಡುವುದು ಕಷ್ಟವಾ ಯಿತು. ಅವನೆದುರಿಗೆ ಗೌರವದಿಂದ ತಲೆ ಬಾಗಿಸುತ್ತಿದ್ದ ಜನರೇ ಅವನನ್ನು ನೋಡಿ ಬೇರೆ ಕಡೆಗೆ ಸರಿದು ಹೋಗುತ್ತಿದ್ದರು. ಅವನು ಭಾಷಣ ಮಾಡಲು ವೇದಿಕೆಯನ್ನೇರುತ್ತಲೇ ಜಯಧ್ವನಿಗಳಿಂದ ಆಕಾಶವನ್ನು ಭೇದಿಸುತ್ತಿದ್ದ ಜನರೇ ಇಂದು ಅವನನ್ನು ಹೀಯಾಳಿಸುತ್ತಿದ್ದರು. ವ್ಯಂಗೋಕ್ತಿಗಳಿಂದ ಅವ ನನ್ನು ತಲೆ ತಗ್ಗಿಸುವಂತೆ ಮಾಡುತ್ತಿದ್ದರು. ಕಾಲೇಜಿನ ವಿದ್ಯಾರ್ಥಿ ಸಮೂಹ ದಲ್ಲಿಯೂ ಈಗ ಇದರ ವಿಷಯವಾಗಿ ಟೀಕೆ–ಟಿಪ್ಪಣಿಗಳಾಗಲಾರಂಭಿಸಿದುವು. ಅವನನ್ನು ನೋಡಿ ಜನರು ತಮ್ಮ ತಮ್ಮಲ್ಲಿಯೇ ಕಣ್ಣು ಮಿಟುಕಿಸಲಾರಂಭಿಸಿ ದರು. ತರಗತಿಗಳಲ್ಲಿ ಅವರನ್ನು ಹಾಸ್ಯಾಸ್ಪದವಾದ ಪ್ರಶ್ನೆಗಳನ್ನು ಕೇಳಲಾ ರಂಭಿಸಿದರು. ಒಂದು ದಿನ ಕಾಲೇಜಿನ ಅಂಗಳದಲ್ಲಿ ಹುಡುಗರ ಮುಂದೆ ಹೋಗುತ್ತಿದ್ದಾಗ ಆಕಸ್ಮಾತ್ ದಾನನಾಥನು ಹಿಂತಿರುಗಿ ನೋಡಿದನು. ಒಬ್ಬ ಹುಡುಗನು ತನ್ನ ಕೈಯನ್ನು ಕೊಕ್ಕಿನಂತೆ ಬಾಗಿಸಿಕೊಂಡು ಅವನನ್ನು ಅಣಕಿಸಿ ಕೊಳ್ಳುತ್ತಿದ್ದನು. ದಾನನಾಥನನ್ನು ನೋಡುತ್ತಲೇ ಹುಡುಗನು ಕೈಯ್ಯನ್ನು ತಕ್ಷಣವೇ ತಗ್ಗಿಸಿದನು ಮತ್ತು ಅವನಿಗೆ ಸ್ವಲ್ಪ ನಾಚಿಕೆಯೂ ಆಯಿತು. ಆದರ ದಾನನಾಥನಿಗೆ ತನ್ನ ಕೊಠಡಿಯ ವರೆಗೂ ಹೋಗುವುದು ಕಷ್ಟವಾಯಿತು. ಅವನ ಮನಸ್ಸಿಗೆ ಬಲವಾದ ಪೆಟ್ಟು ಬಿದ್ದಿತು. ಕೊಠಡಿಗೆ ಬಂದು ಅವನು ಅರ್ಧ ಮೂರ್ಛಾವಸ್ಥೆಯಲ್ಲಿ ಕುರ್ಚಿಯ ಮೇಲೆ ಕುಸಿದುಬಿದ್ದನು. ಒಂದು ಕ್ಷಣಕಾಲ ಅಲ್ಲಿ ಇರುವುದೂ ಅವನಿಗೆ ಇಷ್ಟವಾಗಲಿಲ್ಲ. ಆ ಕ್ಷಣವೇ ರಜಾ ರಿಪೋರ್ಟನ್ನು ಬರೆದುಕೊಟ್ಟು ಮನೆಗೆ ಬಂದುಬಿಟ್ಟನು. ಪ್ರೇಮಾ ಅವನ ತೇಜೋಹೀನವಾದ ಮುಖವನ್ನು ನೋಡಿ ಕೇಳಿದಳು—"ದೇಹಸ್ಥಿತಿ ಹೇಗಿದೆ ? ಇಂದು ಬೆಳಿಗ್ಗೆ ರಜಾ ದೊರೆಯುಲು ಕಾರಣವೇನು ?"

ದಾನನಾಥನು ಬೇಸರದಿಂದಲೇ ಹೇಳಿದ— "ರಜಾ ಇರಲಿಲ್ಲ; ತಲೆ ನೋಯುತ್ತಿತ್ತು, ಹೊರಟು ಬಂದೆ." ಒಂದು ಕ್ಷಣದ ನಂತರ ಪುನಃ ಹೇಳಿದ:

"ಇಂದು ನಾನು ಮೂರು ತಿಂಗಳು ರಜಾ ತೆಗೆದುಕೊಂಡಿದ್ದೇನೆ. ಕೆಲವು ದಿನಗಳು ವಿಶ್ರಮಿಸಿಕೊಳ್ಳುವೆನು."

ಪ್ರೇಮಾ ಕೈಕಾಲು ತೊಳೆಯಲು ನೀರು ತಂದಿಡುತ್ತಾ ಹೇಳಿದಳು—ಕೆಲವು ದಿನಗಳ ಮಟ್ಟಿಗಾದರೂ ರಜಾ ತೆಗೆದುಕೊಂಡು ಬೆಟ್ಟದ ನಿವಾಸಕ್ಕೆ ಹೋಗಿ ಬನ್ನಿರೆಂದು ನಾನು ಎಷ್ಟು ದಿನಗಳಿಂದ ಸಾರಿ ಸಾರಿ ಹೇಳುತ್ತಿಲ್ಲ? ದಿನೇ ದಿನೇ ಕೃಶವಾಗುತ್ತಿದ್ದೀರಿ. ಹವಾ ಬದಲಾವಣೆಯಿಂದ ಖಂಡಿತ ಪ್ರಯೋಜನವಾಗುವುದು."

ದಾನನಾಥ :— "ನೀನಂತೂ ಬರುವುದಿಲ್ಲ. ನನ್ನನ್ನೇ ಒಂಟಿಯಾಗಿ ಹೋಗಲು ಹೇಳುತ್ತೀಯೆ. "

ಪ್ರೇಮಾ :— "ನಾನು ಬರುವುದು ಕಷ್ಟ. ಖರ್ಚು ಅಧಿಕವಾಗುವುದು. ಇದೂ ಅಲ್ಲದೆ ನಾನು ಆರೋಗ್ಯವಾಗಿದ್ದೇನೆ. ಯಾರಿಗೆ ಮನೆಯೇ ಬೆಟ್ಟದ ನಿವಾಸವಾಗಿದೆಯೋ ಅಂತಹವರು ಬೆಟ್ಟದ ನಿವಾಸಕ್ಕೆ ಏಕೆ ಹೋಗಬೇಕು ?"

ದಾನ:— "ಹಾಗಾದರೆ ನನಗೇನಾಗಿದೆ? ಒಳ್ಳೆಯ ಕೊಬ್ಬಿದ ಗೂಳಿಯಂತಿದ್ದೇನೆ. ಹಿಂದೆಂದೂ ನಾನು ಇಷ್ಟು ದಪ್ಪನಾಗಿರಲಿಲ್ಲ."

ಪ್ರೇಮಾ:— "ಹಾಗೆಯೇ ಕನ್ನಡಿಯಲ್ಲಿ ನಿಮ್ಮ ಸ್ವರೂಪ ನೋಡಿಕೊಳ್ಳಿರಿ."

ದಾನ:— "ಕನಿಷ್ಠ ಪಕ್ಷ ದಿನಕ್ಕೆ ನೂರು ಸಲ ನನ್ನ ಮುಖ ನೋಡಿಕೊಳ್ಳುತ್ತೇನೆ. ನನಗೇನೂ ವ್ಯತ್ಯಾಸ ಕಾಣಿಸುವುದಿಲ್ಲ."

ಪ್ರೇಮಾ:— "ಇಲ್ಲ, ಇದೇನು ತಮಾಷೆಯಲ್ಲ. ನೀವು ಈಗೀಗ ಬಹಳ ಬಡವಾಗುತ್ತಿದ್ದೀರಿ. ನಿಮಗೇ ಬಲಹೀನತೆಯ ಅನುಭವವಾಗುತ್ತಿರಬಹುದು. ಇಲ್ಲದಿದ್ದರೆ ನೀವೇಕೆ ರಜಾ ತೆಗೆದುಕೊಳ್ಳುತ್ತಿದ್ದಿರಿ? ಮೂರು ತಿಂಗಳು ನೀವೇನೂ ಕೆಲಸ ಮಾಡಬೇಡಿ, ಓದಲೂ ಬೇಡಿ, ಬರೆಯಲೂ ಬೇಡಿ. ಚೆನ್ನಾಗಿ ಸುತ್ತಾಡಿ ವಿಶ್ರಮಿಸಿಕೊಳ್ಳಿರಿ. ಈ ಮೂರು ತಿಂಗಳ ವರೆಗೆ ನನ್ನನ್ನೇ ನಿಮ್ಮ ವೈದ್ಯನನ್ನಾಗಿ ಮಾಡಿಕೊಳ್ಳಿರಿ. ನಾನು ಹೇಳಿದಂತೆ ನೀವು ಕೇಳಿಕೊಂಡಿರಿ."

ದಾನ:— "ಹಾಗೆಂದಿಗೂ ಆಗದು. ತಿನ್ನಿಸಿ-ತಿನ್ನಿಸಿ ನೀನು ನನ್ನನ್ನು ಗೂಳಿಯ ಹಾಗೆ ಬೆಳೆಯಿಸಿ ಬಿಡುವೆ."

ದಾನನಾಥನು ಇಂದಿನವರೆಗೂ ಪ್ರೇಮಾಗೆ ಒಂದು ಸಲವಾದರೂ ತನ್ನ ಅಪಕೀರ್ತಿಯ ಕಥೆಯನ್ನು ಹೇಳಿರಲಿಲ್ಲ. ತನ್ನ ಖ್ಯಾತಿ ಮತ್ತು ಗೌರವಗಳನ್ನು ಅವಳ ಇಷ್ಟಕ್ಕೆ ಬಲಿಗೊಡಲು ನಿಶ್ಚಯಿಸಿದ ಮೇಲೆ, ತನ್ನ ಮರ್ಮವೇದನೆಯನ್ನು ಏನೆಂದು ಹೇಳಿಕೊಂಡಾನು ? ಒಳಗೊಳಗೇ ಕೊರಗುತ್ತಿದ್ದನು. ಜನಸ್ತುತಿಯು ಎಲ್ಲರಿಗೂ ಪ್ರಿಯವಾಗುತ್ತದೆ. ದಾನನಾಥನಿಗೆ ಇದು ಜೀವನಾಧಾರವಾಗಿತ್ತು. ಅಪಮಾನಕ್ಕೆ ಗುರಿಯಾಗಿ ಬದುಕಿರುವುದಕ್ಕಿಂತಲೂ ಸಾಯುವುದೇ ಅವನಿಗೆ ಲೇಸೆನಿಸುತ್ತಿತ್ತು. ಅನೇಕ ವರ್ಷಗಳಿಂದ ಅವನು ನಿರ್ಮಿಸಿದ್ದ ಗೌರವರೂಪಿ ಸೌಧವು ಪರರ ಪಾಪರೂಪಿ ಬೆಂಕಿಯಲ್ಲಿ ಬಿದ್ದು ಉರಿದು ಹೋಗಿತ್ತು. ಈ ಸೌಧವನ್ನು ಅವನು ನಾಲ್ಕಾರು ಮಾತುಗಳಿಂದ ನಿರ್ಮಿಸಬಹುದಾಗಿತ್ತು. ಕೇವಲ ಒಂದು ಭಾಷಣ ಯಾವನೋ ಮಂತ್ರವಾದಿಯ ಮಂತ್ರದಂತೆ ಈ ಬೂದಿಯ ರಾಶಿಯನ್ನು ಪುನರ್ಜೀವನಗೊಳಿಸುತ್ತಿತ್ತು; ಆದರೆ ಅವನು ಬಾಯಿಬಿಡಲು ಅಂಜುತ್ತಿದ್ದನು. ಜನರೊಡನೆ ಮಿಳಿತವಾಗುವುದಂತೂ ಮೊದಲೇ ತಪ್ಪಿಹೋಗಿತ್ತು. ಈಗ ಅವನು ಹೊರಗೆ ಹೊರಡುವುದನ್ನೂ ಬಿಟ್ಟು ಬಿಟ್ಟನು. ದಿನವೆಲ್ಲಾ ಒಂದೆಡೆ ಬಿದ್ದುಕೊಂಡು ಏನಾದರೂ ಓದುತ್ತಲೋ ಯೋಚಿಸುತ್ತಲೋ ಇದ್ದನು. ಮನಸ್ಸಿನ ಚಿಂತೆಯು ಅವನನ್ನು ಒಳಗೊಳಗೇ ಕೊರೆಯುತ್ತಿತ್ತು. ಪ್ರೇಮಾ ಬಹಳ ಒತ್ತಾಯ ಮಾಡಿದಮೇಲೆ, ಕತ್ತಲೆಯಾದ ಮೇಲೆ ಎಲ್ಲೋ ಹೊರಗೆ ಹೊರಡುತ್ತಿದ್ದನು. ಯಾರಾದರೂ ಪರಿಚಿತರನ್ನು ನೋಡಿದರೆ, ಅವನಿಗೆ ಪ್ರಾಣ ಹೋದಂತಾಗುತ್ತಿತ್ತು.

ಒಂದು ದಿನ ಸುಮಿತ್ರಾ ಬಂದಳು. ಬಹಳ ಸಂತೋಷದಿಂದಿದ್ದಳು. ಪ್ರೇಮಾ ಕೇಳಿದಳು— "ಈಗ ಅಣ್ಣನೊಡನೆ ಜಗಳವಾಡುತ್ತಿಲ್ಲವೆ ?"

ಸುಮಿತ್ರಾ ನಕ್ಕು ಹೇಳಿದಳು— "ಈಗ ದಾರಿಗೆ ಬಂದರು. ಕೆಟ್ಟ ಹೆಸರು ಬಂದರೂ ಚಿಂತೆಯಿಲ್ಲ, ಒಳ್ಳೆಯ ದಾರಿಗೆ ಬಂದರು. ಈಗ ವಿಹಾರ-ವಿಶ್ರಾಂತಿಗಳೆಲ್ಲಾ ನಿಂತುಹೋಗಿವೆ. ಮನೆ ಬಿಟ್ಟು ಹೊರಡುವುದೇ ಇಲ್ಲ. ಮಾವಂದಿರೊಡನೆ ಮಾತೇ ಇಲ್ಲ. ಅಮ್ಮ ಮಾತನಾಡುವುದೂ ಬಹಳ ಕಡಿಮೆ. ಸರಿ, ತಮ್ಮ ಕೋಣೆಯಲ್ಲಿ ಬಿದ್ದುಕೊಂಡಿರುತ್ತಾರೆ. ಈಗ ನಾನು ಏನು ಹೇಳಿದರೂ

ಅದೇ ವೇದವಾಕ್ಯ. ನಾನೇ ಪ್ರಾಣೇಶ್ವರಿ, ನಾನೇ ಜೀವನಸುಧಾ, ನಾನೇ ಹೃದಯೇಶ್ವರಿ, ನಾನೇ ಸರ್ವಸ್ವವಾಗಿದ್ದೇನೆ. ನಿತ್ಯವೂ ನನಗೆ ಹೊಸ ಹೊಸ ಬಿರುದುಗಳು ಸಿಕ್ಕುತ್ತವೆ, ಹೊಸ ಹೊಸ ಹೆಸರುಗಳು ದೊರಕುತ್ತವೆ. ನನಗಂತೂ ಈಗ ಸಾಕಾಗಿ ಹೋಗುತ್ತದೆ. ಇವರು ನನ್ನ ಬಳಿ ಕುಳಿತಿರಲೆಂದು ನನಗೆ ಮೊದಲು ಆಶೆಯಾಗುತ್ತಿತ್ತು. ಈಗ ಅವರು ಕ್ಷಣಕಾಲ ಎಲ್ಲಿಯಾದರೂ ಹೊರಗೆ ಹೋಗಿ ಬರಲೆಂದು ಆಶೆಯಾಗುತ್ತದೆ. ಅವರು ನನ್ನನ್ನು ಪ್ರೇಮಿಸುವಾಗ ನಾನೇ ರೇಗಿ ಹೋಗುತ್ತೇನೆ. ಇಷ್ಟಾದರೂ ಮೊದಲಿಗಿಂತ ಎಷ್ಟೋ ಚೆನ್ನಾಗಿದ್ದೇನೆ. ನನ್ನ ವಸ್ತು ಅನ್ಯರ ಪಾಲಾಗುತ್ತದಲ್ಲಾ ಎಂಬ ಭಯವಂತೂ ಈಗ ಇಲ್ಲವೇ ಇಲ್ಲ. ಇನ್ನು ಮುಂದೆಯೂ ಈ ಭಯ ಇರಲಾರದು. ಹಳ್ಳಿಗೆ ಹೋಗಬೇಕೆಂದು ಅಪ್ಪಣೆಯಾಗಿದೆ."

ಪ್ರೇಮಾ ಕೇಳಿದಳು— "ಯಾರು ಯಾರು ಹೋಗುವಿರಿ ?"

ಸುಮಿತ್ರಾ:— "ನಾವಿಬ್ಬರೇ. ಮಾವಂದಿರು ಅವರನ್ನು ಇಲ್ಲಿಂದ ಹೊರಡಿಸಬೇಕೆಂದಿದ್ದಾರೆ; ಆದರೆ ಅವರು ಒಬ್ಬರೇ ಹಳ್ಳಿಯಲ್ಲಿ ಹೋಗಿರುವುದು ಚೆನ್ನಾಗಿ ಕಾಣುವುದಿಲ್ಲ. ನಾನೂ ಅವರೊಡನೆಯೇ ಹೋಗಬೇಕೆಂದು ನಿಶ್ಚಯಿಸಿದ್ದೇನೆ. ಇನ್ನು ಎರಡು ಮೂರು ದಿನಗಳಲ್ಲಿಯೇ ಹೊರಡಬಹುದು. ಅವರಿಗೆ ನಿನ್ನನ್ನು ನೋಡುವ ಆಶೆಯೇನೋ ಇದೆ; ಆದರೆ ಸಂಕೋಚದಿಂದ ಅವರೂ ಬರುವುದಿಲ್ಲ, ನಿನ್ನನ್ನೂ ಕರೆಯುತ್ತಿಲ್ಲ. ನಿಮ್ಮಗಳಿಗೆ ಹೇಗೆ ಮುಖ ತೋರಿಸುವುದೆನ್ನುತ್ತಾರೆ."

ಪ್ರೇಮಾ:— "ಈ ಸಂಕೋಚದಿಂದಲೇ ನಾನೂ ಹೋಗಲಿಲ್ಲ. ಅಣ್ಣ, ಈಗ ಪಶ್ಚಾತ್ತಾಪ ಪಡುತ್ತಿರುವನಲ್ಲವೆ ?"

ಸುಮಿತ್ರಾ:— "ಪಶ್ಚಾತ್ತಾಪಪಡುವುದಷ್ಟೇ ಅಲ್ಲ, ಅಳುತ್ತಿರುತ್ತಾರೆ. ತೌರುಮನೆಯನ್ನು ಬಿಟ್ಟು ಗಂಡನ ಮನೆಗೆ ಹೊರಡುವ ಸಮಯದಲ್ಲಿ ಹೆಣ್ಣುಮಕ್ಕಳು ಅಳುವಂತೆ ಅಳುತ್ತಾರೆ. ಅವರಿಗೆ ಶಾಶ್ವತವಾದ ನೀತಿಬೋಧೆಯಾಗಿದೆ. ಪೂರ್ಣಾ ನನಗೆ ಸಿಕ್ಕಿದ್ದೇ ಆದರೆ, ಅವಳ ಚರಣಧೂಳಿಯನ್ನು ತೊಳೆದ ಜಲಪಾನ ಮಾಡುವೆನು. ಬಹಳ ಸಾಹಸಿ ಅವಳು. ಯಾವಾಗಲಾದರೂ ಒಂದು ಸಲ ಹೋಗಿ ಅವಳನ್ನೇಕೆ ನೀನು ನೋಡಿಕೊಂಡು ಬರಬಾರದು ?"

ಇಷ್ಟರಲ್ಲಿಯೇ ದಾನನಾಥನು ಕೈಯಲ್ಲಿ ಒಂದು ಪತ್ರವನ್ನು ಹಿಡಿದು ಕೊಂಡು ಆತುರದಿಂದ ಬಂದನು. ಏನೋ ಹೇಳಬೇಕೆಂದಿದ್ದನು, ಅಷ್ಟರಲ್ಲಿಯೇ ಸುಮಿತ್ರಾಳನ್ನು ನೋಡಿ ಹಾಗೆಯೇ ನಿಲ್ಲಿಸಿಬಿಟ್ಟನು. ಪುನಃ ಸಂಕೋಚ ದಿಂದಲೇ ಹೇಳಿದನು— "ಸುಮಿತ್ರಾದೇವಿಯವರೇ, ಯಾವಾಗ ಬರೋಣ ವಾಯಿತು ? ನನಗಂತೂ ಸಮಾಚಾರವೇ ತಿಳಿಯದು."

ಸುಮಿತ್ರಾ ಮಂದಹಾಸದಿಂದ ನುಡಿದಳು—"ತಾವಂತೂ ಹೋಗೋದು ಬರೋದು ಎಲ್ಲಾ ನಿಲ್ಲಿಸಿಬಿಟ್ಟರಿ ಎಂದರೆ ನಾವು ಬಿಡುವುದಕ್ಕೆ ಸಾಧ್ಯವೆ?"

ದಾನನಾಥನು ಏನೋ ಉತ್ತರ ಕೊಡಬೇಕೆಂದಿದ್ದನು. ಅಷ್ಟರಲ್ಲಿಯೇ ಪ್ರೇಮಾ ಅವನ ಮುಖಾಭಾಸವನ್ನು ನೋಡಿ, ಅವನ ಮನೋಭಾವವನ್ನರಿತು ಹೇಳಿದಳು— "ಹೋಗಿ ಬರುವುದು ಎಲ್ಲಿಯಾದರೂ ನಿಂತು ಹೋಗುತ್ತದೆಯೇ ಅಕ್ಕಾ ! ಇವರ ಮನಸ್ಸೇ ಸರಿಯಾಗಿರಲಿಲ್ಲ."

ಸುಮಿತ್ರಾ:— "ಹೌದು ನನಗೂ ಹಾಗೆಯೇ ಕಾಣಿಸುತ್ತೆ. ಮೊದಲಿನ ಅರ್ಧದಷ್ಟು ಇಳಿದುಹೋಗಿದ್ದಾರೆ."

ದಾನನಾಥನು ಪ್ರೇಮಾಗೆ ಒಂದು ವರ್ತಮಾನಪತ್ರವನ್ನು ತೋರಿಸುತ್ತ ಹೇಳಿದನು— " ಇಲ್ಲಿ ನೋಡು, ಇದರಲ್ಲಿ ಅಮೃತರಾಯನ ಒಂದು ಲೇಖನ ಇದೆ. "

ಪ್ರೇಮಾ ಹಾರಿ ಪತ್ರವನ್ನು ತೆಗೆದುಕೊಂಡಳು. ನಂತರ ಸ್ವಲ್ಪ ಸಂಯಮ ದಿಂದ ಹೇಳಿದಳು— 'ಯಾವ ವಿಷಯದ ಮೇಲೆ ? ಅವರು ಲೇಖನ-ಗೀಖನ ವೇನೂ ಬರೆಯುತ್ತಿರಲಿಲ್ಲ."

ದಾನ:— "ಓದಿದ ಮೇಲೆ ನಿನಗೆ ಗೊತ್ತಾಗುವುದಲ್ಲವೆ ?"

ಪ್ರೇಮಾ:— "ಓದುವೆನು, ಆದರೆ ಅದರಲ್ಲಿ ಇರುವ ವಿಷಯವೇನು ? ಅದೇ ವನಿತಾ ಸದನದ ಸಂಬಂಧವಾಗಿ ಏನೋ ಬರೆದಿರಬಹುದು."

ದಾನ:— "ನನ್ನನ್ನು ಚೆನ್ನಾಗಿ ಛೀಮಾರಿ ಮಾಡಿದ್ದಾನೆ."

ಪ್ರೇಮಾಗೆ ಚೇಳು ಕುಟುಕಿದಂತಾಯಿತು. ಅವಿಶ್ವಾಸಭಾವದಿಂದ ಹೇಳಿದಳು:— "ನಿಮ್ಮನ್ನು ಬೈದು ಬರೆದಿದ್ದಾರೆಯೇ ! ನಿಮ್ಮನ್ನು !! ನಾನು ಅವರನ್ನು ಇದಕ್ಕಿಂತಲೂ ಉನ್ನತ ಸ್ಥಾನದಲ್ಲಿ ನೋಡುತ್ತಿದ್ದೆನು."

ದಾನ:— "ನಾನು ಬೈದಿರುವಾಗ ಅವನೇಕೆ ಸುಮ್ಮನಿರಬೇಕು ?"

ಪ್ರೇಮಾ:— "ನೀವೂ ಕೂಡ ಬೈದಿಲ್ಲ, ಮತಭೇದವು ಬಯ್ಗುಳವೆನಿಸಿ ಕೊಳ್ಳಲಾರದು."

ದಾನ:— "ಯಾರಿಗಾದರೂ ಬೈಗುಳಗಳಿಂದಲೇ ಆನಂದವಾಗುವು ದಾದರೆ ?"

ಪ್ರೇಮಾ:— "ಹಾಗಾದರೆ, ನಾನು ಒಂದು ಬೈಗುಳಕ್ಕೆ ಪ್ರತಿಯಾಗಿ ನೂರು ಬೈಗುಳ ಬೈಯಲು ಸಿದ್ಧ ! ನಾನು ಅವರನ್ನು ಇಷ್ಟು ಕೀಳು ಎಂದು ಭಾವಿಸಿರಲಿಲ್ಲ. ಅವರೂ ಕೂಡ ನಮ್ಮಂತಹ ದ್ವೇಷಾಸೂಯೆಯಿಂದ ಕೂಡಿ ರುವ ಮನುಷ್ಯರೆಂದು ಈಗ ನನಗೆ ಗೊತ್ತಾಯಿತು."

ದಾನ:— "ಇಂತಹ ಆರಿಸಿದ ಬೈಗುಳಗಳನ್ನು ನೋಡಿ ನಾನು ಅವಾ ಕ್ಕಾದೆನು."

ಪ್ರೇಮಾ:— "ಈಗ ಈ ವಿಷಯವನ್ನು ಚರ್ಚಿಸಲೇ ಬೇಡಿರಿ. ನನಗೆ ತುಂಬಾ ದುಃಖವಾಗುತ್ತದೆ."

ದಾನನಾಥನು ಮಂದಹಾಸದಿಂದ ಹೇಳಿದನು— "ಸ್ವಲ್ಪ ಓದಿ ನೋಡು, ಅನಂತರ ಇದಕ್ಕೆ ಏನು ಪ್ರತಿಕ್ರಿಯೆ ಎಂಬುದನ್ನು ತಿಳಿಸು."

ಪ್ರೇಮಾ:— "ನಿಮಗೆ ತಮಾಷೆಯಾಗಿದೆ, ನನಗೆ ಕೋಪ ಬರುತ್ತಿದೆ, ಈಕ್ಷಣವೇ ಹೋಗಿ, ನೀವು ನನ್ನ ದೃಷ್ಟಿಯಲ್ಲಿ ಅಧಃಪಾತಾಳಕ್ಕಿಳಿದಿರೆಂದು ಹೇಳ ಬೇಕೆನಿಸುತ್ತದೆ. ಇತರ ಜನರೇನೋ ನಿಮ್ಮ ವ್ಯವಹಾರದಿಂದ ಸಂತುಷ್ಟರಾಗಿರ ಬಹುದು; ಈ ತಂತ್ರದಿಂದ ನಿಮಗೆ ಅಧಿಕ ಪ್ರಮಾಣದಲ್ಲಿ ಚಂದಾ ಹಣ ದೊರೆಯಬಹುದು; ಆದರೆ ನನ್ನ ದೃಷ್ಟಿಯಲ್ಲಿ ನೀವು ನಿಮ್ಮ ಗೌರವವನ್ನು ಕಳೆದುಕೊಂಡಿರಿ."

ದಾನ:— "ಹಾಗಾದರೆ ಹೊರಡು, ನಾವಿಬ್ಬರೂ ಹೋಗೋಣ. ನೀನು ವಾಗ್ಬಾಣಗಳನ್ನು ಪ್ರಯೋಗಿಸು, ನಾನು ನನ್ನ ಬಾಹುಬಲವನ್ನು ತೋರಿಸು ವೆನು."

ಸುಮಿತ್ರಾ:— "ಮೊದಲು ಲೇಖನವನ್ನೊಮ್ಮೆ ಓದಿ ನೋಡು. ನಿಂದೆ ಮಾಡಿದ್ದರೆ ನಿನ್ನ ಯಜಮಾನರು ಈ ರೀತಿ ಮಾತನಾಡುತ್ತಿರಲಿಲ್ಲ. ಅಮೃತ ರಾಯ ಇಂತಹ ಮನುಷ್ಯನೇ ಅಲ್ಲ."

ಪ್ರೇಮಾ ಅಂಜಿಕೆಯಿಂದಲೇ ಲೇಖನದ ಶೀರ್ಷಿಕೆಯನ್ನು ಓದಿದಳು. ಮೊದಲನೆಯ ವಾಕ್ಯವನ್ನು ಓದುತ್ತಲೇ ಅವಳ ಕೋಪವು ಶಾಂತವಾಯಿತು. ಎರಡನೆಯ ವಾಕ್ಯವನ್ನು ಓದುತ್ತಲೇ ಅವಳು ಪತ್ರವನ್ನೋದಲು ಉತ್ಸುಕಳಾದಳು. ಮೂರನೆಯ ವಾಕ್ಯವನ್ನು ಓದುತ್ತಿದ್ದಂತೆಯೇ ಅವಳ ಕಠೋರ ಮುಖಮುದ್ರೆಯು ಸರಳವಾಯಿತು. ನಾಲ್ಕನೆಯ ವಾಕ್ಯವನ್ನು ಆರಂಭಿಸುತ್ತಲೇ ಅವಳ ತುಟಿಗಳ ಮೇಲೆ ಹಾಸ್ಯದ ರೇಷೆಯು ಕಾಣಿಸಿಕೊಂಡಿತು; ಮತ್ತು ಆ ಪ್ಯಾರಾ ಮುಗಿಸುತ್ತಿದ್ದಂತೆಯೇ ಅವಳ ಮುಖಾರವಿಂದವು ಅರಳಿತು. ನಂತರ ಅವಳಿಗೆ ತಾನು ವಿಮಾನಯಾನ ಮಾಡುತ್ತಿರುವಂತೆ ಭಾಸವಾಯಿತು. ಅವಳ ಜ್ಞಾನೇಂದ್ರಿಯಗಳೆಲ್ಲವೂ ಸ್ಫೂರ್ತಿಯಿಂದ ತುಂಬಿ ತುಳುಕುತ್ತಿದ್ದುವು. ಲೇಖನದ ಮೂರು ಪ್ಯಾರಾಗಳನ್ನು ಮುಗಿಸಿ ಅವಳು ಯಾವುದೋ ಕಠಿಣ ಪರೀಕ್ಷೆಯಿಂದ ಪಾಸಾದವಳಂತೆ ಶಾಂತಿಯ ಉಸಿರ್ಗರೆದಳು.

ದಾನನಾಥನು ಕೇಳಿದನು— "ಓದಿದೆಯಾ ? ಪೆಟ್ಟು ತಿನ್ನುವಂತಹ ಕೆಲಸ ಮಾಡಿದ್ದಾನಲ್ಲವೆ ? ಇಷ್ಟವಿದ್ದರೆ ಹೊರಡು, ನಾನೇನೋ ಹೋಗುತ್ತಿದ್ದೇನೆ."

ಪ್ರೇಮಾ ಪತ್ರವನ್ನು ಮಡಿಸುತ್ತಾ ಹೇಳಿದಳು— "ನೀವು ಹೋಗಿರಿ, ನಾನು ಬರುವುದಿಲ್ಲ."

"ಪ್ರಪಂಚದಲ್ಲಿ ನನಗೆ ನಿಜವಾದ ಮಿತ್ರನು ಯಾರಾದರೂ ಇದ್ದರೆ, ಅವನೇ ಅಮೃತರಾಯನೆಂದು ನನಗೆ ಇಂದು ಗೊತ್ತಾಗಿದೆ. ನಾನು ಅವನಿಗೆ ಬಹಳ ಅನ್ಯಾಯ ಮಾಡಿದ್ದೇನೆ. ಇಂದು ಕ್ಷಮೆ ಬೇಡುವೆನು, ನಿಷ್ಕಲ್ಮಷವಾದ ಮನಸ್ಸಿನಿಂದ ಕ್ಷಮೆ ಬೇಡುವೆನು."

"ಇಂದು ಹೋಗದಿರುವುದೇ ಮೇಲು. ಪುಸಲಾಯಿಸಲು ಬಂದಿರುವನೆಂದು ಅವರು ತಿಳಿಯಬಹುದು."

"ಇಲ್ಲಾ ಪ್ರಿಯೆ, ಈಗ ನನ್ನ ಮನಸ್ಸು ಸುಮ್ಮನಿರಲಾರದು. ಅವನನ್ನು ಅಪ್ಪಿಕೊಂಡು ಒಮ್ಮೆ ಅಳಬೇಕೆನಿಸುತ್ತದೆ."

ಹೀಗೆ ಹೇಳುತ್ತಾ ದಾನನಾಥನು ಹೊರಗೆ ಹೊರಟು ಹೋದನು. ಸುಮಿತ್ರೆಯೂ ಕೂಡ ವೃದ್ಧ ಮಾತೆಯ ಬಳಿಗೆ ಹೋಗಿ ಕುಳಿತಳು. ಪ್ರೇಮಾಳ ಸತ್ಕೀರ್ತಿಯ ವರ್ಣನೆಯನ್ನು ಕೇಳಿದ ಹೊರತು ಅವಳಿಗೆ ಸಮಾಧಾನವಾಗು

ತ್ತಿರಲಿಲ್ಲ. ಪ್ರೇಮಾ ಆ ಲೇಖನವನ್ನು ಪುನಃ ಓದಿದಳು. ಅನಂತರ ಹೋಗಿ ಮಂಚದ ಮೇಲೆ ಮಲಗಿದಳು. ಆ ಲೇಖನದ ಪ್ರತಿಯೊಂದು ಶಬ್ದವೂ ಅವಳ ದೃಷ್ಟಿಪಟಲದ ಮೇಲೆ ಅಂಕಿತವಾಗಿತ್ತು. ಅವಳು ಬಯಸದಂತಹ ಕಲ್ಪನೆಗಳು ಅವಳ ಮನಸ್ಸಿನಲ್ಲಿ ಮೂಡುತ್ತಿದ್ದುವು.

ಅನಂತರ ಅವಳ ಭಾವನೆಗಳು ಒಂದು ವಿಚಿತ್ರ ರೂಪವನ್ನು ತಾಳಿದುವು. "ಅಮೃತರಾಯನು ಈ ಪತ್ರವನ್ನೇಕೆ ಬರೆದ ? ಅವನು ದಾನನಾಥನನ್ನು ನಿಜವಾಗಿಯೂ ಬೈದಿದ್ದರೆ ಆವಳಿಗೆ ಅವನ ಮೇಲೆ ಕ್ಷಣಕಾಲ ಸಿಟ್ಟುಬರುತ್ತಿತ್ತು; ಆದರೆ ಮನಸ್ಸು ಇಷ್ಟು ಚಂಚಲವಾಗುತ್ತಿರಲಿಲ್ಲ."

ತಕ್ಷಣವೇ ಅವಳು ಪತ್ರವನ್ನು ಹರಿದು ಚೂರು ಚೂರು ಮಾಡಿ ಕಿಟಕಿಯಿಂದ ಹೊರಕ್ಕೆ ಎಸೆದುಬಿಟ್ಟಳು. ಯಾವ ರೆಕ್ಕೆಯು ಪಕ್ಷಿಯನ್ನು ಬಲೆಯ ಕೆಳಗೆ ಚೆಲ್ಲಿರುವ ಕಾಳುಗಳ ಕೆಳಗೆ ಕರೆದುಕೊಂದು ಹೋಗುತ್ತದೆಯೋ, ಅದನ್ನು ಕಿತ್ತು ಹಾಕುವುದೇ ಒಳ್ಳೆಯದು !!

## ೧೫

ದಾನನಾಥನು ಅಮೃತರಾಯನ ಬಂಗಲೆಯನ್ನು ಸಮೀಪಿಸುತ್ತಲೇ, ಮುಂದೆ ಹೆಜ್ಜೆ ಹಾಕುವುದೇ ದುಸ್ತರವಾಯಿತು. ಜಗಲಿಯಿಂದ ಒಳಗೆ ಹೋಗಲು ಅವನಿಗೆ ಸಂಕೋಚವಾಯಿತು. ಅಮೃತರಾಯನು ತನ್ನ ಮನಸ್ಸಿನಲ್ಲಿ ಏನು ತಿಳಿದುಕೊಳ್ಳುವನೋ? ನಾಲ್ಕು ಕಡೆಯಿಂದಲೂ ಅಪಮಾನಕರವಾದ ಮಾತುಗಳನ್ನು ಕೇಳಿ, ಯಾರೂ ಸಹಾಯ ಮಾಡದಿದ್ದುದರಿಂದ ಇಲ್ಲಿಗೆ ಓಡಿ ಬಂದಿದ್ದಾನೆಂದೇ ಅವನು ತಿಳಿದುಕೊಳ್ಳುವನು. ಅವನು ಈ ಸಂಕೋಚದಿಂದಲೇ ಹೆಬ್ಬಾಗಿಲಿನಲ್ಲಿ ನಿಂತಿದ್ದನು. ಅಷ್ಟರಲ್ಲಿಯೇ ಅಮೃತರಾಯನ ವೃದ್ಧ ಸೇವಕನು ಒಳಗಿನಿಂದ ಬರುತ್ತಿರುವುದು ಕಾಣಿಸಿತು. ದಾನನಾಥನಿಗೆ ಈಗ ಅಲ್ಲಿ ನಿಂತುಕೊಂಡಿರುವುದೂ ದುಸ್ತರವಾಯಿತು. ಹೆಬ್ಬಾಗಿಲನ್ನು ಪ್ರವೇಶಿಸಿದನು. ಮುದುಕನು ಇವನನ್ನು ನೋಡುತ್ತಲೇ ಬಗ್ಗಿ ನಮಸ್ಕರಿಸುತ್ತಾ ಹೇಳಿ

ದನು— "ಬಾ ಅಣ್ಣ, ಬಹಳ ದಿನಗಳಾದ ಮೇಲೆ ನಮ್ಮನ್ನು ಜ್ಞಾಪಿಸಿ ಕೊಂಡೆಯಲ್ಲ. ಯಜಮಾನರು ನಿತ್ಯವೂ ನಿನ್ನನ್ನು ಜ್ಞಾಪಿಸಿಕೊಂಡು ಪೇಚಾಡುತ್ತಿದ್ದರು. ನಿನ್ನನ್ನು ನೋಡಿದರೆ ಅವರ ಸಂತೋಷಕ್ಕೆ ಪಾರವೇ ಇರಲಾರದು. ಸುಖವಾಗಿರುವೆ ತಾನೆ? ನೀನು ಬಂದಿರುವ ಸಮಾಚಾರ ಯಜಮಾನರಿಗೆ ತಿಳಿಸಿಬರುತ್ತೇನೆ."

ಹೀಗೆ ಹೇಳುತ್ತಾ ಅವನು ಹಿಂತಿರುಗಿ ಬಂಗಲೆಯ ಕಡೆ ನಡೆದನು. ದಾನನಾಥನೂ ಸಂಕೋಚದಿಂದ ಅವನ ಹಿಂದೆ ಹಿಂದೆ ಹೋದನು. ಇನ್ನೂ ಅವನು ಪಡಸಾಲೆಗೂ ಕಾಲಿಟ್ಟಿರಲಿಲ್ಲ. ಅಷ್ಟರಲ್ಲಿಯೇ ಅಮೃತರಾಯನು ಒಳಗಿನಿಂದ ಹೊರಟು ಬಂದು, ಚಂಗನೆ ಹಾರಿ ಅವನನ್ನು ಆಲಿಂಗಿಸಿಕೊಂಡನು.

ದಾನನಾಥನು ಹೇಳಿದನು— "ನೀನು ನನ್ನ ಮೇಲೆ ಕೋಪಿಸಿಕೊಂಡಿರಬಹುದು."

ಅಮೃತರಾಯನು ಎತ್ತಲೋ ನೋಡುತ್ತಾ ಉತ್ತರಿಸಿದನು—"ಇದನ್ನು ಮಾತ್ರ ನೀನು ಕೇಳಬೇಡ, ದಾನೂ. ಕೆಲವು ವೇಳೆ ನಿನ್ನ ಮೇಲೆ ಕೋಪ ಬಂದಿದೆ, ಮತ್ತೆ ಕೆಲವು ವೇಳೆ ಕನಿಕರವುಂಟಾಗಿದೆ; ಕೆಲವು ವೇಳೆ ದುಃಖವುಂಟಾಗಿದೆ. ಮಾನವ ಹೃದಯವು ಎಷ್ಟು ಜಟಿಲವಾದುದು—ಎಂಬುದರ ಅನುಭವ ನನಗಾಯಿತು. ಈಗ ನಿನ್ನನ್ನು ಇಲ್ಲಿ ನೋಡಿದಾಗ ನನಗೆ ಎಷ್ಟು ಆನಂದವಾಗಬೇಕಾಗಿತ್ತೋ ಅಷ್ಟು ಆನಂದ ಆಗುತ್ತಿಲ್ಲ. ಪ್ರಾಯಶಃ ಇದೂ ಕೂಡ ನಿನ್ನ ಕ್ಷಣಿಕವಾದ ಉದ್ಗಾರವಾಗಿರಬಹುದು. ಆದರೆ ನಿನ್ನ ನಡತೆಯ ವಿಷಯದಲ್ಲಿ ನನಗೆ ಎಂದೂ ಸಂಶಯವಾಗಲಿಲ್ಲ. ಪ್ರತಿದಿನವೂ ವಿಧವಿಧವಾದ ಮಾತುಗಳು ನನ್ನ ಕಿವಿಯ ಮೇಲೆ ಬೀಳುತ್ತಿದ್ದುವು; ಆದರೆ ಒಂದು ಕ್ಷಣಕಾಲವೂ ನನ್ನ ಮನಸ್ಸು ಚಂಚಲವಾಗಲಿಲ್ಲ. ಕಾಲೇಜಿನಿಂದ ರಜಾ ತೆಗೆದುಕೊಳ್ಳಲು ಬಹಳ ಸಾಹಸ ಮಾಡಿದೆಯಲ್ಲವೆ? ರಜಾ ರದ್ದುಗೊಳಿಸಿ ನಾಳೆಯಿಂದ ಕಾಲೇಜಿಗೆ ಹೋಗಲು ಪ್ರಾರಂಭಿಸು."

ದಾನನಾಥನು ಈ ಮಾತಿಗೆ ಯಾವ ಉತ್ತರವನ್ನೂ ಕೊಡದೆ ನುಡಿದನು—"ನೀನು ನನ್ನನ್ನು ಕ್ಷಮಿಸಿದೆಯೋ ಅಥವಾ ಇಲ್ಲವೋ ಎಂಬುದನ್ನು ಮೊದಲು ತಿಳಿಸು. ನಾನು ನಿನ್ನ ವಿಷಯದಲ್ಲಿ ಅತ್ಯಂತ ನೀಚ ಕಾರ್ಯವನ್ನೆಸಗಿದ್ದೇನೆ."

ಅಮೃತರಾಯನು ಮುಗುಳುನಗೆಯನ್ನು ಸೂಸುತ್ತಾ ಹೇಳಿದನು— "ಸಂಪತ್ತನ್ನು ಗಳಿಸಿ ನೀಚನಾಗುವುದು ಸ್ವಾಭಾವಿಕವೇ. ನೀನೇನೂ ಮಾಡ ಬಾರದ ಕೆಲಸ ಮಾಡಲಿಲ್ಲ. ಅಲ್ಪ ಧನವನ್ನು ಪಡೆದವರೇ ತಮ್ಮನ್ನು ತಾವು ಮರೆತುಬಿಡುವಾಗ ಪ್ರೇಮಾಳಂತಹ ಸಾಕ್ಷಾತ್ ಲಕ್ಷ್ಮಿಯನ್ನೇ ಪಡೆದಿರುವ ನೀನೇಕೆ ಉಬ್ಬಿ ಹೋಗಕೂಡದು ?"

ದಾನನಾಥನು ಗಾಂಭೀರ್ಯದಿಂದ ಹೇಳಿದನು— "ನಾನು ಮಾಡಿರುವ ದೊಡ್ಡ ಅಪರಾಧವೇ ಇದು. ನಾನು ಪ್ರೇಮಾಗೆ ಯೋಗ್ಯನಾದವನಲ್ಲ."

ಅಮೃತ:— "ನನಗೆ ತಿಳಿದ ಮಟ್ಟಿಗೆ ಪ್ರೇಮಾ ನಿನ್ನ ಮನಸ್ಸಿಗೆ ಎಂದೂ ನೋವನ್ನುಂಟು ಮಾಡಿರಲಾರಳು "

ದಾನ:— "ಎಂದೂ ಇಲ್ಲ, ಆದರೆ ಮದುವೆಯಾಗುತ್ತಲೇ ನಾನೇಕೆ ಸಂಶಯಪಿಶಾಚಿಯಾದೆನೋ ನಾನರಿಯೆ. ಪ್ರೇಮಾ ಮನಸ್ಸಿನಲ್ಲಿ ನನ್ನನ್ನು ಉಪೇಕ್ಷಿಸುತ್ತಿರುವಳೆಂದು ಮಾತುಮಾತಿಗೂ ನನಗೆ ಸಂದೇಹವಾಗುತ್ತಿತ್ತು. ವಾಸ್ತವಾಂಶವನ್ನು ತಿಳಿಸುವುದಾದರೆ, ನಾನು ಅವಳನ್ನು ರೇಗಿಸಿ ಅಳಿಸುವು ದಕ್ಕೋಸ್ಕರ ನಿನ್ನನ್ನು ನಿಂದಿಸಲು ಪ್ರಾರಂಭಿಸಿದೆನು. ನನ್ನ ಮನಸ್ಸು ನಿನ್ನ ವಿಷಯವಾಗಿ ಯಾವಾಗಲೂ ಶುದ್ಧವಾಗಿತ್ತು."

ಅಮೃತ:—"ಆದರೆ ನಿನ್ನ ಈ ತಂತ್ರವು ವಿರೋಧ ಪರಿಣಾಮವನ್ನುಂಟು ಮಾಡಲು ಕಾರಣವೇನು ? ಯಾವನಾದರೂ ಚಾಣಾಕ್ಷನ ಸಲಹೆಯನ್ನೇಕೆ ಪಡೆಯಲಿಲ್ಲ ? ನೀನು ನನ್ನ ಮನೆಯಲ್ಲಿ ಒಂದೇಸಮನೆ ಒಂದು ವಾರ ೧೦-೧೧ ಘಂಟೆವರೆಗೆ ಕುಳಿತುಕೊಂಡು ನನ್ನನ್ನು ಶ್ಲಾಘಿಸುತ್ತಿದ್ದರೆ, ನನ್ನ ಹೆಸರು ಕೇಳು ತ್ತಲೇ ಪ್ರೇಮಾ ರೇಗುತ್ತಿದ್ದಳೆಂದು ನನ್ನ ದೃಢವಿಶ್ವಾಸ."

ದಾನ:— "ನಾನು ನಿನ್ನ ಮೇಲೆ ಚಂದಾ ಹಣವನ್ನು ದುರುಪಯೋಗ ಪಡಿಸುವೆಯೆಂಬ ಆಪಾದನೆ ಹೊರಿಸಿದೆನು. ಈಗ ಇದು ಸರ್ವಥಾ ಮಿಥ್ಯೆ ಯೆಂದು ಪ್ರಮಾಣ ಮಾಡುವುದಕ್ಕೂ ಸಿದ್ಧನಿದ್ದೇನೆ."

ಅಮೃತ:— "ನನಗೆ ಇದು ಗೊತ್ತಿತ್ತು."

ದಾನ:— "ನನಗೆ ನಿನ್ನ ಮೇಲೆ ಇಲ್ಲಿಯವರೆಗೂ ಆಕ್ಷೇಪಿಸಲು ಸಂಕೋಚವಾಗಲಿಲ್ಲ, ಏನೆಂದರೆ.................. "

ಅಮೃತ:— “ಸರಿ, ಸುಮ್ಮನಿರಬಾರದೇನೋ. ನೀನು ಮಾಡಿದ್ದೆಲ್ಲವೂ ಒಳ್ಳೆಯದೇ ಆಯಿತು. ಇಷ್ಟು ಮಾತ್ರ ನನಗೆ ಆಗಲೂ ಗೊತ್ತಿತ್ತು, ಏನೆಂದರೆ, ಯಾರಾದರೂ ನನ್ನ ಮೇಲೆ ಪೆಟ್ಟು ಕೊಡಲು ಬಂದರೆ, ಮೊದಲು ನೀನು ಎದೆ ಚಾಚಿ ನಿಂತುಕೊಳ್ಳುತ್ತಿದ್ದೆ. ನಡೆ, ನಿನ್ನನ್ನು ಆಶ್ರಮದಲ್ಲಿ ಸುತ್ತಾಡಿಸಿಕೊಂಡು ಬರುವೆನು.”

ದಾನ:— “ಅದಕ್ಕೇನು ಬರುವೆ; ಆದರೆ ನನ್ನದೊಂದು ಬಯಕೆ ಇದೆ. ಮೊದಲು ನೀನು ನನ್ನ ಎರಡು ಕಿವಿಗಳನ್ನೂ ಜೋರಾಗಿ ಹಿಂಡು ಮತ್ತು ನಾಲ್ಕಾರು ಹೊಡೆತಗಳನ್ನು ಬಲವಾಗಿ ಕೊಡು.”

ಅಮೃತ:— “ಈಗ ಬೇಡ; ಆದರೆ ಮೊದಲು ನೀನು ಅನೇಕ ವೇಳೆ ಪಟಿಂಗತನ ಮಾಡಿದಾಗ ನಿನ್ನನ್ನು ಗುಂಡಿಟ್ಟು ಕೊಲ್ಲುವಷ್ಟು ಕೋಪಬಂದಿತ್ತು. ಆದಾಗ್ಯೂ ಕೂಡ, ಇಷ್ಟು ಕೆಡುಕು ಮಾಡಿದರೂ ನೀನು ಅನ್ಯರಿಗಿಂತ ಮೇಲು ಎಂಬ ನಿರ್ಧಾರಕ್ಕೆ ಬರುತ್ತಿದ್ದೆ. ಬಾ ಹೋಗೋಣ. ನಿನ್ನನ್ನು ಆಶ್ರಮದಲ್ಲಿ ಸುತ್ತಾಡಿಸಿಕೊಂಡು ಬರುವೆ. ನೀನು ಆಶ್ರಮವನ್ನು ವಿಮರ್ಶಾತ್ಮಕ ದೃಷ್ಟಿ ಯಿಂದ ನೋಡಬೇಕು. ಯಾವ ವಿಷಯ ನಿನಗೆ ಕೆಡುಕೆನಿಸುವುದೋ, ಎಲ್ಲಿ ಸುಧಾರಣೆಯು ಆವಶ್ಯಕವೋ, ತಕ್ಷಣವೇ ತಿಳಿಸಬೇಕು.”

ದಾನ:— “ಪೂರ್ಣಾ ಕೂಡ ಇಲ್ಲಿಗೇ ಬಂದಿರುವಳಲ್ಲವೇ? ಅವಳು ಆ ವಿಷಯದಲ್ಲಿ ಏನಾದರೂ ಹೆಚ್ಚಿನ ಸಂಗತಿ ತಿಳಿಸಿದಳೆ?”

ಅಮೃತ:— “ಅಯ್ಯೋ, ಅವಳ ವಿಷಯವನ್ನು ಮಾತ್ರ ಕೇಳಬೇಡ. ಅವ ಳೊಬ್ಬ ವಿಚಿತ್ರ ಹೆಂಗಸು. ಇಲ್ಲಿಗೆ ಬಂದು ಇಷ್ಟು ದಿನಗಳಾದರೂ ಅವಳ ಅಳು ಮಾತ್ರ ನಿಂತಿಲ್ಲ. ತನ್ನ ಕೋಣೆಯಿಂದ ಹೊರಕ್ಕೆ ಹೊರಡುವುದೇ ಇಲ್ಲ. ನಾನೇ ಅನೇಕ ವೇಳೆ ಹೋಗಿ ಹೇಳಿದೆ— “ಯಾವ ಕೆಲಸ ನಿನಗೆ ಎಲ್ಲಕ್ಕಿಂ ತಲೂ ಪ್ರಿಯವಾಗಿ ತೋರುವುದೋ ಅದನ್ನು ನೀನು ಆರಿಸಿಕೊ. ಆದರೆ ಹೌದು ಅಥವಾ ಇಲ್ಲ ಎಂಬ ಶಬ್ದವೇ ಅವಳ ಬಾಯಿಂದ ಹೊರಡಲಿಲ್ಲ. ಹೆಂಗಸ ರೊಡನೆಯೂ ಹೆಚ್ಚು ಮಾತನಾಡುವುದಿಲ್ಲ. ಬಹಳ ಒತ್ತಾಯ ಮಾಡಿದರೆ ಸ್ವಲ್ಪ ಊಟ ಮಾಡುತ್ತಾಳೆ. ಸರಿ, ಮುಖ ಮುಚ್ಚಿಕೊಂಡು ಯಾವಾಗಲೂ ಬಿದ್ದುಕೊಂಡಿರುತ್ತಾಳೆ. ನನ್ನ ಇಷ್ಟವೇನೆಂದರೆ, ಇತರ ಸ್ತ್ರೀಯರು ಅವಳನ್ನು ಗೌರವಿಸಬೇಕು, ಅವಳಿಗೆ ಯಾವುದಾದರೊಂದು ಅಧಿಕಾರವನ್ನು ಕೊಡಬೇಕು;

ಒಂದು ಪೋಲಿಯ ನೀಚತನವು ಅವಳನ್ನು ಒಂದು ಕೂದಲೆಳೆಯಷ್ಟೂ ಕಳಂಕಿತಳನ್ನಾಗಿ ಮಾಡಲಾರದೆ ಹೋಯಿತು, ಅವಳ ಗೌರವವು ಮೊದಲಿನಂತೆಯೇ ಇದೆಯೆಂಬುದು ಅವಳಿಗೆ ಯಾವ ರೀತಿಯಿಂದಲಾದರೂ ಗೊತ್ತಾಗಬೇಕು; ಆದರೆ ಅವಳು ಯಾವುದಕ್ಕೂ ಅವಕಾಶವನ್ನೇ ಕೊಡುವುದಿಲ್ಲ. ನಿನಗೆ ಅವಳ ಪರಿಚಯವಿದೆಯಲ್ಲವೆ ?"

ದಾನ:— "ಸರಿ, ಸರಿ. ಎಲ್ಲೋ ಒಂದೆರಡು ಸಾರಿ ಪ್ರೇಮಾ ಜತೆ ಕುಳಿತುಕೊಂಡಿದ್ದುದನ್ನು ನೋಡಿದ್ದೇನೆ. ಇದಕ್ಕಿಂತ ಹೆಚ್ಚಿನ ಪರಿಚಯವಿಲ್ಲ. "

ಅಮೃತ:— "ಪ್ರೇಮಾ ಮಾತ್ರ ಅವಳನ್ನು ದಾರಿಗೆ ತರಬಲ್ಲಳು. ಇಬ್ಬರೂ ಪರಸ್ಪರ ಆಲಿಂಗಿಸಿಕೊಂಡು, ಪೂರ್ಣಾ ತನ್ನ ವೃತ್ತಾಂತವನ್ನೆಲ್ಲಾ ಅವಳಿಗೆ ಹೇಳಿದ ಮೇಲೆಯೇ ಅವಳ ಮನಸ್ಸು ಶಾಂತವಾಗುವುದು. ಅವಳಿಗೆ ವಿವಾಹ ಮಾಡಿಕೊಳ್ಳಬೇಕೆಂಬ ಇಚ್ಛೆಯಿದ್ದರೆ, ನಾನು ಮುಂದು, ತಾನು ಮುಂದು ಎಂದು ಒಬ್ಬರಿಗಿಂತ ಶ್ರೇಷ್ಠರಾದ ಮತ್ತೊಬ್ಬರು ಶ್ರೀಮಂತರೂ, ಗೌರವಶಾಲಿಗಳೂ ಆದ ವರಗಳು ಸಿಕ್ಕುವರು. ನಾಲ್ಕಾರು ಜನರಾದರೋ ನನ್ನೊಡನೆ ಈ ಪ್ರಸ್ತಾಪ ಮಾಡಿಯೇ ಬಿಟ್ಟಿದ್ದಾರೆ. ಆದರೆ ಪೂರ್ಣಾ ಎಲ್ಲಿ ತಪ್ಪು ಅಭಿಪ್ರಾಯ ಮಾಡಿಕೊಳ್ಳುವಳೋ ಎಂದು ಯೋಚಿಸಿ, ಅವಳಿಗೆ ಹೇಳಲು ಅಂಜುತ್ತೇನೆ. ಪ್ರೇಮಾ ಅವಳನ್ನು ಸರಿಪಡಿಸಬಲ್ಲಳು. ನಾನು ಏಕಾಂಗಿಯಾಗಿರುವೆನೆಂದು ಸಂಕಲ್ಪ ಮಾಡದಿದ್ದರೆ ಮತ್ತು ಅವಳು ಮೇಲು ಕೀಳೆಂದು ಜಾತೀಯತೆಯ ಬಂಧನವನ್ನು ಮುರಿಯಲು ಸಿದ್ಧಳಿದ್ದರೆ, ಉಮ್ಮೇದವಾರರಲ್ಲಿ ನಾನೂ ಒಬ್ಬನಾಗಿರುತ್ತಿದ್ದೆ."

ದಾನ:— "ಅವಳು ರೂಪವತಿ ಎನ್ನುವುದರಲ್ಲಿ ಸಂಶಯವೇ ಇಲ್ಲ."

ಅಮೃತ:— "ನನಗಾದರೋ ಕುಲೀನರ ಮನೆಯಲ್ಲಿಯೂ ಇಂತಹ ಸುಂದರಿಯರು ದೃಷ್ಟಿಗೆ ಬಿದ್ದಿಲ್ಲ."

ದಾನ:— "ಮಿತ್ರ, ನೀನು ಅವಳ ಗುಣಗಳಿಂದ ಸುಪ್ರೀತನಾಗಿದ್ದೀಯೆ. ಹೀಗಿರುವಲ್ಲಿ, ನೀನೇಕೆ ಅವಳನ್ನು ಮದುವೆ ಮಾಡಿಕೊಳ್ಳಕೂಡದು ? ಒಂಟಿಯಾಗಿರಬೇಕೆಂಬ ನಿನ್ನ ಸಂಕಲ್ಪವನ್ನು ಬದಲಾಯಿಸು. ವೃದ್ಧಾಪ್ಯದಲ್ಲಿ ಪರಲೋಕದ ಚಿಂತನೆಯನ್ನು ಮಾಡಬಹುದು. ನಾನಾದರೋ ಇದೇ ನಕ್ಷೆಯನ್ನು

ಚಿತ್ರಿಸಿಕೊಂಡಿದ್ದೇನೆ. ಜನರು ವಿವಾಹವನ್ನು ಏಕೆ ಸಾರ್ವಜನಿಕ ಜೀವನಕ್ಕೆ ಬಾಧಕವೆಂದು ತಿಳಿಯುತ್ತಾರೆಂಬುದೇ ಅರ್ಥವಾಗಲೊಲ್ಲದು. ಏಸುಕ್ರಿಸ್ತ, ಶಂಕರಾಚಾರ್ಯರು ಮತ್ತು ದಯಾನಂದರು ಅವಿವಾಹಿತರಾಗಿದ್ದುದೇನೋ ನಿಜ. ಆದರೆ ಕೃಷ್ಣ, ಶಿವ ಮತ್ತು ವಿಷ್ಣು ಗೃಹಸ್ಥ ಜೀವನದ ಬಂಧನಕ್ಕೆ ಸಿಕ್ಕಿದ್ದರು."

ಅಮೃತರಾಯನು ನಕ್ಕು ಹೇಳಿದನು— "ಭಾಷಣ ಮುಗಿಸಿದೆ ತಾನೆ ? ಕೆಲವೇ ದಿನಗಳ ಹಿಂದೆ ನೀನು ಆಜನ್ಮ ಬ್ರಹ್ಮಚಾರಿಯಾಗಿರುವೆನೆಂದು ಪಣ ತೊಟ್ಟಿರಲಿಲ್ಲವೇ ? ಇದನ್ನೇ ಮನುಷ್ಯ ಜೀವನದ ಪೂರ್ಣ ವಿಕಾಸವೆಂದು ಕರೆಯುತ್ತಿದ್ದ ನೀನೇ ಇಂದು ಅವಿವಾಹಿತರನ್ನು ವಿವಾಹಿತರನ್ನಾಗಿ ಮಾಡಲು ವಕಾಲತ್ತು ವಹಿಸಿರುವೆ. ಒಟ್ಟಿನಲ್ಲಿ ನಿನ್ನ ಅದೃಷ್ಟ ಚೆನ್ನಾಗಿತ್ತು."

ದಾನನಾಥನು ಹುಬ್ಬುಗಂಟಿಕ್ಕಿಕೊಂಡು ಹೇಳಿದನು— " ಅವಿವಾಹಿತ ಜೀವನವನ್ನು ನಾನೆಂದೂ ಆದರ್ಶವೆಂದು ತಿಳಿದಿಲ್ಲ. ಅದು ಆದರ್ಶವಾದ ಜೀವನ ಆಗಲು ಸಾಧ್ಯವೇ ಇಲ್ಲ. ಅಸ್ವಾಭಾವಿಕ ವಸ್ತುವು ಎಂದೆಂದಿಗೂ ಆದರ್ಶವಾಗಲಾರದು."

ಅಮೃತ:— "ನೀನು ಹೇಳುವುದೇ ಸರಿ. ನಾನು ತಪ್ಪು ಮಾಡುತ್ತಿದ್ದೇನೆ. ಎಲ್ಲಿಯಾದರೂ ಹೋಗಬೇಕೇನು ? ಈ ದಿನ ಸಂಜೆಯವರೆಗೂ ಇಲ್ಲಿಯೇ ಇರಬೇಕು. ಊಟ ಸಿದ್ಧವಾಗುತ್ತಿದೆ. ಊಟ ಮಾಡಿ ಸ್ವಲ್ಪ ಹೊತ್ತು ಮಲಗೋಣ, ತುಂಬಾ ಹರಟೆ ಹೊಡೆಯೋಣ; ನಂತರ ಸಾಯಂಕಾಲ ನದಿಯಲ್ಲಿ ದೋಣಿಯಲ್ಲಿ ಕುಳಿತು ಆನಂದದಿಂದ ವಿಹರಿಸೋಣ. ಅಲ್ಲಿಂದ ಹಿಂತಿರುಗಿ ಬಂದು ಪುನಃ ಭೋಜನ ಮಾಡೋಣ. ಆಗ ನಿನಗೆ ಬಿಡುವು ಸಿಕ್ಕುವುದು. ದೇವರ ಇಚ್ಛೆಯಿದ್ದರೆ ಇಂದೂ ಪ್ರೇಮಾದೇವಿ ನನ್ನನ್ನು ಶಪಿಸಲಿ. "

ಇಬ್ಬರು ಗೆಳೆಯರೂ ಆಶ್ರಮವನ್ನು ನೋಡಿಕೊಂಡು ಬರಲು ಹೊರಟರು. ಅಮೃತರಾಯನು ನದಿಯ ದಡದಲ್ಲಿ ಸಂಗಮಕ್ಕೆ ಸಮೀಪದಲ್ಲಿಯೇ ಐವತ್ತು ಎಕರೆ ಭೂಮಿಯನ್ನು ಕೊಂಡುಕೊಂಡಿದ್ದನು. ಅವನು ವಾಸಿಸುತ್ತಿದ್ದುದೂ ಅಲ್ಲಿಯೇ. ಕಂಟೋನ್ಮೆಂಟಿನಲ್ಲಿದ್ದ ತನ್ನ ಮನೆಯನ್ನು ಮಾರಿ ಬಿಟ್ಟಿದ್ದನು. ಆಶ್ರಮದ ಅಂಗಳದಲ್ಲಿಯೇ ತನಗಾಗಿ ಒಂದು ಮನೆಯನ್ನು ಕಟ್ಟಿಸಿಕೊಂಡಿ

ದ್ದನು. ಆಶ್ರಮದ ಬಾಗಿಲಿನ ಎರಡು ಪಕ್ಕಗಳಲ್ಲಿಯೂ ಎರಡು ದೊಡ್ಡ ದೊಡ್ಡ ಕೊಠಡಿಗಳಿದ್ದುವು. ಒಂದು ಆಶ್ರಮದ ಕಛೇರಿಯಾಗಿತ್ತು, ಮತ್ತೊಂದು ಆಶ್ರಮದಲ್ಲಿ ಶೇಖರಿಸಿಟ್ಟಿದ್ದ ವಸ್ತುಗಳ ಪ್ರದರ್ಶನಾಲಯವಾಗಿತ್ತು. ಕಛೇರಿಯಲ್ಲಿ ಮಧ್ಯ ವಯಸ್ಸಿನ ಮಹಿಳೆಯೋರ್ವಳು ಕುಳಿತುಕೊಂಡು ಬರೆಯುತ್ತಿದ್ದಳು. ರಿಜಿಸ್ಟರ್ ಮೊದಲಾದವುಗಳು ನಿಯಮಾನುಸಾರವಾಗಿ ಬೀರುಗಳಲ್ಲಿ ಆರಿಸಿ ಇಡಲ್ಪಟ್ಟಿದ್ದುವು. ಈಗ ಎಂಬತ್ತು ಸ್ತ್ರೀಯರೂ, ಇಪ್ಪತ್ತು ಬಾಲಕರೂ ಇದ್ದರು. ಅವರ ಹಾಜರಿಯನ್ನು ತೆಗೆದುಕೊಳ್ಳಲಾಗಿತ್ತು. ಪ್ರದರ್ಶನಾಲಯದಲ್ಲಿ ಹತ್ತಿ, ಉಣ್ಣೆ, ರೇಷ್ಮೆ, ಕೈ ಕೆಲಸಗಳೇ ಮೊದಲಾದವುಗಳ ಸುಂದರ ನಕಾಶೆ ಕೆಲಸದ ವಸ್ತುಗಳು ಗಾಜಿನ ಬೀರುಗಳಲ್ಲಿ ಇಡಲ್ಪಟ್ಟಿದ್ದುವು. ಹೊಲಿದು ಮುಗಿಸಿರುವ ಬಟ್ಟೆಗಳೂ ಕೂಡ ಹಗ್ಗಗಳ ಮೇಲೆ ತೂಗಾಡುತ್ತಿದ್ದುವು. ಮಣ್ಣಿನ ಮತ್ತು ಮರದ ಆಟದ ಸಾಮಾನುಗಳು, ಮೋಜಗಳು, ಕಾಲುಚೀಲಗಳು, ಬನಿಯನ್‌ಗಳು ಮತ್ತು ಸ್ತ್ರೀಯರಿಂದಲೇ ತಯಾರಿಸಲ್ಪಟ್ಟ ಚಿತ್ರಗಳು ಪ್ರತ್ಯೇಕ ಪ್ರತ್ಯೇಕವಾಗಿ ಇಡಲ್ಪಟ್ಟಿದ್ದುವು. ಒಂದು ಬೀರುವಿನಲ್ಲಿ ಆಶ್ರಮದಲ್ಲೇ ತಯಾರಿಸಿದ ವಿಧವಿಧವಾದ ಸಿಹಿ ತಿಂಡಿಗಳು ಆರಿಸಿ ಇಡಲ್ಪಟ್ಟಿದ್ದುವು. ಆಶ್ರಮದಲ್ಲಿ ಬೆಳೆದ ಸಸ್ಯಗಳು ಕುಂಡಗಳಲ್ಲಿ ಇಡಲ್ಪಟ್ಟಿದ್ದುವು. ಅನೇಕ ನೋಟಕರು ಈಗಲೂ ಸಹ ಅವುಗಳ ನಿಗಾ ನೋಡಿಕೊಳ್ಳುತ್ತಿದ್ದರು. ಇಬ್ಬರು ಮಹಿಳೆಯರು ಗಿರಾಕಿಗಳಿಗೆ ವಸ್ತುಗಳನ್ನು ತೋರಿಸುತ್ತಿದ್ದರು. ಇಲ್ಲಿನ ನಿತ್ಯದ ಮಾರಾಟವು ಸುಮಾರು ಒಂದು ನೂರು ರೂಪಾಯಿಗಳಷ್ಟಾಗುತ್ತಿತ್ತು. ಸಂಜೆಯ ವೇಳೆಯಲ್ಲಿ ಗಿರಾಕಿಗಳು ಅಧಿಕ ಸಂಖ್ಯೆಯಲ್ಲಿ ಬರುತ್ತಾರೆಂದು ಗೊತ್ತಾಯಿತು.

ಈಗ ಇಬ್ಬರೂ ಒಳಗೆ ಪ್ರವೇಶಿಸಿದರು. ಒಂದು ಚಚ್ಚೌಕವಾದ ವಿಶಾಲ ಅಂಗಳವಿತ್ತು. ಅದರ ಸುತ್ತಲೂ ಜಗಲಿಯಿತ್ತು. ಪಡಸಾಲೆಯಲ್ಲಿಯೇ ಕೊಠಡಿಗಳ ಬಾಗಿಲುಗಳಿದ್ದುವು. ಎರಡನೆಯ ಅಂತಸ್ತು ಕೂಡ ಇದೇ ರೀತಿಯಲ್ಲಿತ್ತು. ಕೆಳಗಿನ ಭಾಗದಲ್ಲಿ ಕಾರ್ಯಾಲಯವಿತ್ತು. ಮೇಲಿನ ಭಾಗದಲ್ಲಿ ಸ್ತ್ರೀಯರು ಇರುತ್ತಿದ್ದರು. ಹತ್ತು ಗಂಟೆಯ ಸಮಯವಾಗಿತ್ತು. ಕೆಲಸ ಪ್ರಾರಂಭವಾಗಿತ್ತು. ಮಹಿಳೆಯರು ತಮ್ಮ ತಮ್ಮ ಕೆಲಸದ ಮೇಲೆ ಹೊರಟು ಹೋಗಿದ್ದರು. ಕೆಲವು ಕಡೆ ಹೊಲಿಗೆಯ ಕೆಲಸವಾಗುತ್ತಿತ್ತು; ಮತ್ತೆ ಕೆಲವೆಡೆ

ಕಾಲುಚೀಲಗಳು, ಬನೀನುಗಳು ಮತ್ತು ಎಳೆಯ ಮಕ್ಕಳ ಉಡುಪುಗಳು ಸಿದ್ಧವಾಗುತ್ತಿದ್ದುವು. ಇನ್ನೂ ಕೆಲವೆಡೆ ಮುರಬ್ಬಾ ಮತ್ತು ಉಪ್ಪಿನಕಾಯಿ ತಯಾರಾಗುತ್ತಿದ್ದುವು. ಪ್ರತಿಯೊಂದು ಶಾಖೆಯೂ ಓರ್ವ ನುರಿತ ಮಹಿಳೆಯ ಮೇಲ್ವಿಚಾರಣೆಗೆ ಒಳಪಟ್ಟಿತ್ತು. ಅಗತ್ಯವೆನಿಸಿದರೆ ಇಬ್ಬರು–ಮೂವರು ಅಥವಾ ನಾಲ್ಕು–ಐದು ಸ್ತ್ರೀಯರು ಅವಳಿಗೆ ನೆರವಾಗುತ್ತಿದ್ದರು. ಇದೇ ರೀತಿಯಲ್ಲಿ ಅವರಿಗೆ ಶಿಕ್ಷಣವೂ ಕೊಡಲ್ಪಡುತ್ತಿತ್ತು. ಕೆಲವು ಸ್ತ್ರೀಯರು ನೆಲವನ್ನು ಅಗೆಯುತ್ತಿದ್ದರು; ಮತ್ತೆ ಕೆಲವರು ನೀರು ಹಾಕುತ್ತಿದ್ದರು. ಸುತ್ತಲೂ ಜೀವಕಳೆಯಿಂದ ತುಂಬಿ ಮೆರೆಯುತ್ತಿತ್ತು ಆಶ್ರಮ. ಎಲ್ಲಿಯೂ ಶಿಥಿಲತೆ, ನಿರುತ್ಸಾಹ ಮತ್ತು ಕಲಹದ ಹೆಸರೂ ಇರಲಿಲ್ಲ.

ದಾನನಾಥ ಕೇಳಿದ:— "ಇಷ್ಟು ದಕ್ಷರಾದ ಸ್ತ್ರೀಯರು ನಿನಗೆಲ್ಲಿ ಸಿಕ್ಕಿದರು ?"

ಅಮೃತ:— "ಕೆಲವರನ್ನು ಪರಪ್ರಾಂತಗಳಿಂದ ಕರೆಸಿದ್ದೇನೆ. ಕೆಲವರನ್ನು ಶಿಕ್ಷಣದ ಮೂಲಕ ಕಾರ್ಯದಕ್ಷರನ್ನಾಗಿ ಮಾಡಿದ್ದೇನೆ. ಮತ್ತೆ ಕೆಲವರು ನಿತ್ಯವೂ ನಿಯಮಾನುಸಾರವಾಗಿ ಇಲ್ಲಿಗೆ ಬಂದು ಬೋಧನೆಯ ಕೆಲಸವನ್ನು ಮಾಡಿ ನಾಲ್ಕು ಗಂಟೆಗೆ ಹೊರಟುಹೋಗುತ್ತಾರೆ. ನ್ಯಾಯಾಧೀಶರ ಪತ್ನಿಯವರು ಚಿತ್ರಕಲೆಯಲ್ಲಿ ನಿಪುಣೆಯಾಗಿದ್ದಾರೆ. ಅವರು ಎಂಟು ಸ್ತ್ರೀಯರನ್ನೊಳಗೊಂಡ ಒಂದು ತರಗತಿಗೆ ದಿನವೂ ಎರಡು ಗಂಟೆ ಪಾಠ ಹೇಳಿಕೊಡಲು ಬರುತ್ತಿದ್ದಾರೆ. ಶ್ರೀಮತಿ ಸಕ್ಸೇನಾರವರು ಹೊಲಿಗೆಯ ಕೆಲಸದಲ್ಲಿ ಜಾಣೆ. ಅವರು ಆಗಾಗ್ಗೆ ಇಲ್ಲಿಯೇ ಇರುತ್ತಾರೆ. ಮೂವರು ಮಹಿಳೆಯರು ಪಾಠಶಾಲೆಯಲ್ಲಿ ಕೆಲಸ ಮಾಡುತ್ತಾರೆ. ಕುಲೀನ ಮನೆತನದ ಸ್ತ್ರೀಯರು ಇಲ್ಲಿ ತಮ್ಮ ಸಮಯವನ್ನು ಹೇಗೆ ಕಳೆಯುವರೋ ಎಂದು ಮೊದಲು ನನಗೆ ಅನುಮಾನವಾಗುತ್ತಿತ್ತು; ಆದರೆ ಈಗ ಅವರಲ್ಲಿ ಸೇವಾಭಾವನೆಯು ಪುರುಷರಿಗಿಂತ ಎಷ್ಟೋ ಪಾಲು ಹೆಚ್ಚಾಗಿದೆಯೆಂದು ಅನುಭವವಾಗುತ್ತಿದೆ. ಘೋಷಾ ಪದ್ಧತಿಯು ಇಲ್ಲಿ ಸಂಪೂರ್ಣವಾಗಿ ಬಹಿಷ್ಕರಿಸಲ್ಪಟ್ಟಿದೆ. ನಡೆ, ತೋಟದಕಡೆ ಹೋಗೋಣ. ಈ ವಿಭಾಗವು ಪೂರ್ಣಾಳ ಮೇಲ್ವಿಚಾರಣೆಯಲ್ಲಿದೆ. ಇಲ್ಲಿ ಅವಳ ಮನೋರಂಜನೆಯ ಸಾಮಗ್ರಿಯೆಲ್ಲವೂ ಸಾಕಷ್ಟು ದೊರೆಯುವುದೆಂದು ನಾನು ತಿಳಿದಿದ್ದೆನು. ಬಯಲು ಪ್ರದೇಶದಲ್ಲಿ ವಿಹರಿಸುವುದರಿಂದ ಅವಳ ದೇಹಸ್ಥಿತಿಯು ಸರಿ

ಹೋಗುವುದೆಂದು ನಂಬಿದ್ದೆ."

ಕೈತೋಟವೇನೋ ದೊಡ್ಡದಾಗಿರಲಿಲ್ಲ. ಮಾವು, ಸೇಬು, ಸೀತಾಫಲಗಳ ಸಸಿಗಳನ್ನು ನೆಡುತ್ತಿದ್ದರು. ಹೂಗಿಡಗಳು ಚೆನ್ನಾಗಿ ಬೆಳೆದು ನಿಂತಿದ್ದುವು. ಮಧ್ಯದಲ್ಲಿ ಒಂದು ಕೊಳವಿತ್ತು. ಮೂರು–ನಾಲ್ಕು ಚಿಕ್ಕ ಚಿಕ್ಕ ಹುಡುಗಿಯರು ಕೊಳದಿಂದ ನೀರು ತಂದು ಪಾತಿಗಳಿಗೆ ಹಾಕುತ್ತಿದ್ದರು. ಕೊಳದವರೆಗೆ ಬರಲು ನಾಲ್ಕು ಕಡೆಯಿಂದಲೂ ನಾಲ್ಕು ರಸ್ತೆಗಳು ಮಾಡಲ್ಪಟ್ಟಿದ್ದುವು. ಪ್ರತಿಯೊಂದು ರಸ್ತೆಯ ಬಳಿಯೂ ಬಳ್ಳಿಗಳಿಂದಾವೃತವಾದ ಬಿದಿರಿನಿಂದ ಮಾಡಿದ ಚಿಕ್ಕ ಚಿಕ್ಕ ಹೆಬ್ಬಾಗಿಲುಗಳಿದ್ದುವು. ಮಂಟಪದ ನೆರಳಿನಲ್ಲಿ ಕಲ್ಲಿನ ಬೆಂಚುಗಳು ಮಾಡಲ್ಪಟ್ಟಿದ್ದುವು. ಪೂರ್ಣಾ ಈ ಕಲ್ಲು ಬೆಂಚುಗಳೊಂದರಲ್ಲಿ ಕತ್ತು ಬಗ್ಗಿಸಿ ಕುಳಿತುಕೊಂಡು ಒಂದು ಹೂಮಾಲೆಯನ್ನು ಕಟ್ಟುತ್ತಿದ್ದಳು. ಅದು ಯಾರಿಗಾಗಿ? ಇದನ್ನು ಬಲ್ಲವರಾರು ?

ಗೆಳೆಯರೀರ್ವರ ಕಾಲ ಸಪ್ಪಳವನ್ನು ಕೇಳಿ ಪೂರ್ಣಾ ಬೇಗ ಎದ್ದು ನಿಂತಳು ಮತ್ತು ಹೂಮಾಲೆಯನ್ನು ಅಲ್ಲೇ ಕಲ್ಲು ಬೆಂಚಿನ ಮೇಲೆ ಇಟ್ಟು ಬಿಟ್ಟಳು.

ಅಮೃತರಾಯನು ಕೇಳಿದ— "ದೇಹಸ್ಥಿತಿ ಹೇಗಿದೆ, ಪೂರ್ಣಾ? ಇದೋ ನೋಡು, ದಾನನಾಥನು ನಿನ್ನ ಭೇಟಿ ಮಾಡಲು ಬಂದಿದ್ದಾನೆ. ನಿನ್ನನ್ನು ನೋಡಿ ಮಾತಾಡಲು ಬಹಳ ಉತ್ಸಾಹದಿಂದಿದ್ದಾನೆ."

ಪೂರ್ಣಾ ಕತ್ತು ಬಗ್ಗಿಸಿಕೊಂಡೇ ಕೇಳಿದಳು— "ಸೋದರಿ ಪ್ರೇಮಾ ಚೆನ್ನಾಗಿರುವಳೇ? ಅವಳೇನು ನನ್ನನ್ನು ಮರೆತು ಬಿಟ್ಟಳೋ ಅಥವಾ ಎದುರಿಗಿದ್ದಾಗ ಮಾತ್ರ ಪ್ರೇಮವೋ—ಎಂದು ಅವಳಿಗೆ ದಯವಿಟ್ಟು ಹೇಳಿರಿ. ಸತ್ತಿರುವೆನೋ, ಬದುಕಿರುವೆನೋ ಎಂದು ವಿಚಾರಿಸಿಕೊಳ್ಳಬಾರದೆ ?"

ದಾನ:— "ಅವಳೇನೋ ನಿನ್ನನ್ನು ನೋಡಬೇಕೆಂದು ಅನೇಕ ಸಲ ಹೇಳುತ್ತಿದ್ದಳು; ಆದರೆ ಸಂಕೋಚದಿಂದ ಬರಲಿಲ್ಲ. ಹೂವಿನ ಹಾರವನ್ನು ನೀನು ತುಂಬಾ ಚೆನ್ನಾಗಿ ಮಾಡಿದ್ದೀಯೆ."

ಮೂವರು ಹುಡುಗಿಯರೂ ಬಕೆಟ್ಟುಗಳನ್ನು ಬಿಟ್ಟು ಬಂದು ನಿಂತು ಕೊಂಡಿದ್ದರು. ಇಲ್ಲಿ ದೊರಕುತ್ತಿದ್ದ ಶ್ಲಾಘನೆಯಿಂದ ಅವರೇಕೆ ವಂಚಿತರಾದಾರು? ಒಬ್ಬಳು ಹೇಳಿದಳು— "ದೇವಿಯವರು ಆ ಅರಳೀಮರದ ಕೆಳಗೆ

ಒಂದು ದೇವಾಲಯವನ್ನು ಮಾಡಿದ್ದಾರೆ. ನಡೆಯಿರಿ, ನಿಮಗೆ ತೋರಿಸುವೆನು."

ಪೂರ್ಣಾ:— "ಇವಳು ಸುಳ್ಳು ಹೇಳುತ್ತಾಳೆ. ಇಲ್ಲಿ ದೇವಾಲಯ ವೆಲ್ಲಿಂದ ಬರಬೇಕು ?"

ಬಾಲಿಕೆ:— "ಮಾಡಿದ್ದಾರೆ; ತೋರಿಸುತ್ತೇನೆ, ನಡೆಯಿರಿ. ಅಲ್ಲಿಯೇ ನಿತ್ಯವೂ ಹೂಮಾಲೆಗಳನ್ನು ಮಾಡಿ ಮಾಡಿ ಶ್ರೀಕೃಷ್ಣಮೂರ್ತಿಯ ವಿಗ್ರಹಕ್ಕೆ ಹಾಕುತ್ತಾರೆ. ನಿತ್ಯವೂ ಗಂಗಾಜಲವನ್ನು ತರುತ್ತಾರೆ ಮತ್ತು ಅದರಿಂದ ಗೋಪಾಲಕೃಷ್ಣನಿಗೆ ಅಭಿಷೇಕ ಮಾಡುತ್ತಾರೆ."

ಅಮೃತರಾಯನು ಬಾಲಿಕೆಯ ಕೈ ಹಿಡಿದುಕೊಂಡು ಹೇಳಿದನು—"ಎಲ್ಲಿ ದೇವಾಲಯವನ್ನು ಮಾಡಿದ್ದಾರೆ, ನಡೆ ನೋಡೋಣ."

ಮೂವರು ಬಾಲಿಕೆಯರೂ ಮುಂದೆ ಮುಂದೆ ಹೋದರು. ಅವರ ಹಿಂದೆ ಇಬ್ಬರು ಮಿತ್ರರು ಮತ್ತು ಎಲ್ಲರಿಗಿಂತ ಹಿಂದೆ ಪೂರ್ಣಾ ಮೆಲ್ಲಮೆಲ್ಲಗೆ ನಡೆದು ಹೋಗುತ್ತಿದ್ದರು.

ದಾಸನಾಥನು ಇಂಗ್ಲಿಷಿನಲ್ಲಿ ಹೇಳಿದ—"ಭಕ್ತಿಯು ಮಾನವರ ಅಂತಿಮ ಆಶ್ರಯ."

ಅಮೃತರಾಯ ಹೇಳಿದ— "ಈಗ ಇಲ್ಲಿ ಒಂದು ದೇವಸ್ಥಾನವನ್ನು ಕಟ್ಟಿ ಸುವುದು ಅಗತ್ಯವೆನಿಸುತ್ತದೆ."

ತೋಟದ ಇನ್ನೊಂದು ಕೊನೆಯಲ್ಲಿ ಒಂದು ಪುರಾತನ ವೃಕ್ಷವಿತ್ತು. ಅದರ ಕೆಳಗೆ ಸ್ವಲ್ಪ ನೆಲವನ್ನು ಚೆನ್ನಾಗಿ ಗುಡಿಸಿ, ಸಾರಿಸಿ ಒಂದು ಚಿಕ್ಕ ಕುಟೀರ ವನ್ನು ಮಾಡಿದ್ದಳು. ಅದನ್ನು ಹಸುರೆಲೆಗಳಿಂದಲೂ, ಹೂಗಳಿಂದಲೂ ಚೆನ್ನಾಗಿ ಸಿಂಗರಿಸಿದ್ದಳು. ಅದೇ ಪರ್ಣಶಾಲೆಯಲ್ಲಿ ಬಾಳೆಪಟ್ಟೆಗಳಿಂದ ಮಾಡಿದ ಒಂದು ಆಸನದ ಮೇಲೆ ಒಂದು ಕೃಷ್ಣ ವಿಗ್ರಹವು ಇಡಲ್ಪಟ್ಟಿತ್ತು. ಪೇಟೆಯಲ್ಲಿ ಮೂರು ಕಾಸಿಗೊಂದರಂತೆ ಮಾರುವ ಬೊಂಬೆಯೇ ಆ ವಿಗ್ರಹವಾಗಿತ್ತು; ಆದರೆ ಅನ್ಯರ ದೃಷ್ಟಿಯಲ್ಲಿ ಅದು ಮಣ್ಣಿನ ಮೂರ್ತಿಯಾಗಿರಬಹುದು. ಪೂರ್ಣಾಳಿಗೆ ಅದು ಅನಂತ ಜೀವನದ ಬುಗ್ಗೆ, ಅಖಂಡ ಪ್ರೇಮದ ಆಗರ ಮತ್ತು ಅಪಾರ ಭಕ್ತಿಯ ಭಂಡಾರವಾಗಿತ್ತು. ಆಸನದ ಎದುರಿಗೆ ಚೀಣಾ ತಟ್ಟೆಯೊಂದರಲ್ಲಿ ಸುಂದರವಾದ ಹೂಮಾಲೆಯು ಇತ್ತು. ಆ ಅನಾಥಿನಿಯ ಹೃದಯದಿಂದ ಉಕ್ಕಿಬಂದ ಶ್ರದ್ಧೆಯ ಪ್ರಕಾಶದಂತೆ ಅದು ಕಂಗೊಳಿಸುತ್ತಿತ್ತು. ಅದು ಈರ್ವರು

ಸಂಶಯವಾದಿಗಳ ಶಿರವನ್ನೂ ಕ್ಷಣಕಾಲ ಬಗ್ಗಿಸಿತು.

ಅಮೃತರಾಯನು ಸ್ವಲ್ಪ ಕಾಲ ಯಾವುದೋ ಆಲೋಚನೆಯಲ್ಲಿ ಮಗ್ನನಾಗಿ ನಿಂತಿದ್ದನು. ತಕ್ಷಣವೇ ಅವನ ಕಂಗಳು ಒದ್ದೆಯಾದುವು. ಪುಲಕಿತ ಕಂಠದಿಂದ ಹೇಳಿದನು— "ಪೂರ್ಣಾ, ನಿನ್ನ ಮೂಲಕ ಇಂದು ನಮ್ಮಗಳಿಗೂ ಭಕ್ತಿಯ ಪ್ರಕಾಶವು ದೊರೆಯಿತು. ಈಗ ನಾವು ನಿತ್ಯವೂ ಕೃಷ್ಣಪರಮಾತ್ಮನ ದರ್ಶನಕ್ಕಾಗಿ ಬರುತ್ತಿರುವೆವು. ಪೂಜಾ ಸಮಯವಾವುದು?"

ಪೂರ್ಣಾಳ ಮುಖಾಕೃತಿಯು ಈ ಸಮಯದಲ್ಲಿ ಅವರ್ಣನೀಯ ಕಾಂತಿಯಿಂದ ಕಂಗೊಳಿಸುತ್ತಿತ್ತು; ಮತ್ತು ಅವಳ ಕಣ್ಣುಗಳು ಗೂಢವಾದ, ಶಾಂತವಾದ ಉದ್ವಿಗ್ನತೆಯಿಂದ ತುಂಬಿ ತುಳುಕುತ್ತಿದ್ದುವು. ಹೇಳಿದಳು—"ಬಾಬೂಜಿ, ನನ್ನ ಪೂಜೆಗೂ ಒಂದು ಸಮಯವೆ! ಯಾವಾಗ ಹೃದಯದಲ್ಲಿ ಅಸಹನೀಯ ವೇದನೆಯಾಗುತ್ತದೆಯೋ, ಆಗ ಇಲ್ಲಿಗೆ ಹೊರಟು ಬರುತ್ತೇನೆ ಮತ್ತು ಗೋವಿಂದನ ಪಾದದೆಡೆಗೆ ಕುಳಿತು ಅತ್ತುಬಿಡುತ್ತೇನೆ. ಇಲ್ಲಿ ಅಳುವುದರಿಂದ ನನಗೆ ಎಷ್ಟು ಶಾಂತಿ ಸಿಕ್ಕುತ್ತದೆಂಬುದನ್ನು ಹೇಳಲಾರೆ, ಬಾಬೂಜಿ. ಪರಮಾತ್ಮ, ತಾನೇ ನನ್ನ ಕಂಬನಿಗಳನ್ನು ಒರಸುತ್ತಾನೇನೋ ಅನ್ನಿಸುತ್ತದೆ ನನಗೆ. ನನಗೆ ನನ್ನ ಸುತ್ತಲೂ ಅಲೌಕಿಕ ಪರಿಮಳ ಮತ್ತು ಪ್ರಕಾಶವಿರುವಂತೆ ಅನುಭವವಾಗುತ್ತದೆ. ಪರಮಾತ್ಮನ ಮಂದಹಾಸ, ಅರಳಿದ ಮುಖವನ್ನು ನೋಡುತ್ತಲೇ ನನ್ನ ಮನಸ್ಸಿನಲ್ಲಿ ಆಶೆ ಮತ್ತು ಆನಂದದ ತರಂಗಗಳು ಏಳಲಾರಂಭಿಸುತ್ತವೆ. ಅಕ್ಕ ಪ್ರೇಮಾ ಎಂದಾದರೂ ಬರುವಳೇ ಬಾಬೂಜಿ? ಅವಳನ್ನು ನೋಡಲು ನಾನು ಕಾತರಳಾಗಿರುವೆನೆಂದು ಅವಳಿಗೆ ಹೇಳಿರಿ."

ಪ್ರೇಮಾ ಮರು ದಿನ ಖಂಡಿತ ಬರುವಳೆಂದು ದಾನನಾಥನು ಆಶ್ವಾಸನವಿತ್ತನು. ಇಬ್ಬರು ಗೆಳೆಯರೂ ಇಲ್ಲಿಂದ ಹೊರಟಾಗ ಮೂರು ಗಂಟೆ ಹೊಡೆಯಿತು. ದಾನನಾಥನು ಬೆಚ್ಚಿ ಬಿದ್ದು ಹೇಳಿದ— "ಅಯ್ಯೋ, ಇಷ್ಟು ಬೇಗ ಮೂರು ಘಂಟೆಯಾಯಿತೆ?"

ಅಮೃತ:— "ಮತ್ತು ನೀನು ಇಷ್ಟು ಹೊತ್ತಾದರೂ ಊಟಮಾಡಲಿಲ್ಲ. ನನಗೂ ಜ್ಞಾಪಕವಾಗಲಿಲ್ಲ."

ದಾನ:— "ಒಳ್ಳೆಯದೇ ಆಯಿತು, ನಡೆ. ನಿನ್ನ ಒಪ್ಪೊತ್ತಿನ ಊಟ ಉಳಿಯಿತು."

ಅಮೃತ:— "ಅಯ್ಯಾ, ನಾನು ನಿನ್ನ ಔತಣಕ್ಕಾಗಿ ದೊಡ್ಡ ದೊಡ್ಡ ಏರ್ಪಾಡುಗಳನ್ನು ಮಾಡಿದ್ದೆನು. ಧಾರಾಳವಾಗಿ ಖರ್ಚೂ ಮಾಡಿದ್ದೇನೆ. ಅಡಿಗೆಯವನಾದರೂ ಜ್ಞಾಪಿಸಬಾರದೆ ?"

ದಾನ:— "ಐವತ್ತು ರೂಪಾಯಿಗಳಿಗಿಂತ ಕಡಿಮೆ ಖರ್ಚು ಆಗಿರಲಾರದು. ನಾನು ಊಟ ಮಾಡದಿದ್ದರೂ ಇದನ್ನು ಒಪ್ಪಿಕೊಳ್ಳಲು ಸಿದ್ಧನಿದ್ದೇನೆ. ಅಡಿಗೆಯವನೂ ಚತುರನೇ. ಅವನಿಗೆ ಚೆನ್ನಾಗಿ ಪಾಠ ಕಲಿಸಿದ್ದೀಯೆ. "

ಅಮೃತ:— "ಚತುರನಲ್ಲ, ಕಲ್ಲು. ಹತ್ತು ಗಂಟೆಯಲ್ಲಿ ನಿನಗೆ ತಿನ್ನಿಸುವುದಾಗಿದ್ದರೆ, ಎರಡು ಚಪಾತಿ ತಿಂದು ಎದ್ದುಬಿಡುತ್ತಿದ್ದೆ. ನನಗೆ ಔತಣ ಮಾಡಿಸಿದ ಅಗ್ಗವಾದ ಕೀರ್ತಿ ದೊರೆಯುತ್ತಿತ್ತು. ಈಗಂತೂ ಹಸಿವು ಬೃಹದಾಕಾರ ತಾಳಿದೆ. ತಟ್ಟೆ ಇಡುವುದೇ ತಡ, ಬಡಿಸಿದ್ದನ್ನೆಲ್ಲಾ ಖಾಲಿಮಾಡುವೆ. ಹೊತ್ತು ಮಾಡಿದೆಯೆಂಬ ಆಕ್ಷೇಪಣೆ ಒಂದು ನೆಪ. ಒಂದಕ್ಕೆರಡರಷ್ಟು ಗಿಟ್ಟಿಸಿಬಿಡುವೆ."

ಮನೆಗೆ ಹೋಗಿ ಅಮೃತರಾಯನು ಅಡಿಗೆಯವನನ್ನು ಚೆನ್ನಾಗಿ ಹೆದರಿಸಿದನು— " ಊಟ ಸಿದ್ಧವಾಗಿದೆಯೆಂದು ನೀನೇಕೆ ಸೂಚನೆ ಕೊಡಲಿಲ್ಲ ?"

ಅಡಿಗೆಯವನು ಹೇಳಿದ— "ಧಣಿಯವರು ಮಹಾಸ್ವಾಮಿಯವರ ಜೊತೆ ಆಶ್ರಮದಲ್ಲಿದ್ದಿರಿ. ತಾವೆಲ್ಲಿಯಾದರೂ ಕೋಪಿಸಿಕೊಂಡೀರೆಂದು ಹೆದರಿ ಹೇಳಲಿಲ್ಲ. "

ಅವನಾಡಿದ ಮಾತು ಸತ್ಯವಾಗಿತ್ತು. ಯಾವಾಗಲಾದರೂ, ಯಾರೊಡನೆಯಾದರೂ ಮಾತನಾಡುತ್ತಿರುವಾಗ ತನ್ನನ್ನು ಊಟಕ್ಕೆ ಒತ್ತಾಯಪಡಿಸಕೂಡದೆಂದು ಅಮೃತರಾಯನು ಎಷ್ಟೋ ಸಲ ಅಡಿಗೆಯವನಿಗೆ ಎಚ್ಚರಿಸಿದ್ದನು. ಅಡಿಗೆಯವನ ಅಪರಾಧವೇನೂ ಇರಲಿಲ್ಲ. ಆದ್ದರಿಂದ ಅಮೃತರಾಯನಿಗೆ ತುಂಬಾ ಲಜ್ಜೆಯಾಯಿತು. ಊಟಕ್ಕೆ ಬಡಿಸಿಯಾಯಿತು. ಇಬ್ಬರು ಗೆಳೆಯರೂ ಊಟ ಮಾಡಲಾರಂಭಿಸಿದರು. ಮಾಂಸರಹಿತವಾದ ಊಟ; ಆದರೆ ಬಹಳ ರುಚಿಕರವಾಗಿತ್ತು.

ದಾನನಾಥನು ಚುಟಿಕೆ ಹಾಕುತ್ತಾ ಹೇಳಿದನು— " ಈ ಊಟವು ನಿನ್ನಂತಹ ಬ್ರಹ್ಮಚಾರಿಗಳಿಗಲ್ಲ. ನಿನಗೆ ಒಂದು ಲೋಟ ಹಾಲು ಮತ್ತು ಎರಡು ಚಪಾತಿ ಸಾಕು."

ಅಮೃತ:— "ಏತಕ್ಕೆ ಹಾಗೆ ಹೇಳುವೆ ?"

ದಾನ:— "ರುಚಿಯಿಂದ ನಿನಗೇನು ಲಾಭ ?"

ಅಮೃತ:— "ಹಾಗಲ್ಲ, ನಾನು ಅಂತಹ ಬ್ರಹ್ಮಚಾರಿಗಳ ಗುಂಪಿಗೆ ಸೇರಿದವನಲ್ಲ. ಪುಷ್ಟಿಕಾರಕ ಹಾಗೂ ರುಚಿಕರವಾದ ಆಹಾರವು ಮನಸ್ಸು ಮತ್ತು ಬುದ್ಧಿಯ ಬೆಳವಣಿಗೆಗೆ ಅವಶ್ಯಕವೆಂದು ನನ್ನ ಮತ. ದುರ್ಬಲ ದೇಹದಲ್ಲಿ ದೃಢವಾದ ಮನಸ್ಸು ಇರಲಾರದು. ಜೀವದಿಂದಿರುವ ಕುದುರೆಯ ಮೇಲೆ ಸವಾರಿ ಮಾಡುವುದರಲ್ಲೇ ಘನತೆ ಇದೆ. ಅದನ್ನು ನಿನ್ನ ಇಚ್ಛಾನುಸಾರವಾಗಿ ಓಡಿಸಬಲ್ಲೆ. ಸತ್ತ ಕುದುರೆಯ ಮೇಲೆ ಕುಳಿತುಕೊಂಡು ಬೀಳುವುದನ್ನು ತಪ್ಪಿಸಿಕೊಂಡರೂ ಕೂಡ ನೀನೇನು ದೊಡ್ಡ ಕೆಲಸ ಮಾಡಿದ ಹಾಗಾಯಿತು ?"

ಊಟ ಮಾಡಿದ ನಂತರ ಇಬ್ಬರು ಮಿತ್ರರಿಗೂ ಆಶ್ರಮದ ಸಂಬಂಧವಾಗಿ ಬಹಳ ಹೊತ್ತಿನವರೆಗೂ ಮಾತುಕತೆಗಳಾಗುತ್ತಿದ್ದುವು. ಕೊನೆಗೆ ಸಾಯಂ ಕಾಲವಾಗುತ್ತಲೇ ಇಬ್ಬರೂ ಗಂಗಾನದಿಯ ಕಡೆಗೆ ಸುತ್ತಾಡಿಕೊಂಡು ಬರಲು ಹೊರಟರು.

ಸಂಧ್ಯಾ ಸಮೀರಣನು ಮಂದಗತಿಯಿಂದ ಚಲಿಸುತ್ತಿದ್ದನು. ಹರಿಗೋಲು ಚಿಕ್ಕ ಚಿಕ್ಕ ಅಲೆಗಳ ಮೇಲೆ ಉರುಳಾಡುತ್ತಾ ಮುಂದೆ ಸಾಗುತ್ತಿತ್ತು. ಅಮೃತ ರಾಯನು ಹುಟ್ಟುಗೋಲನ್ನು ಹಿಡಿದು ಹರಿಗೋಲನ್ನು ನಡೆಸುತ್ತಿದ್ದನು. ದಾನ ನಾಥನು ಕಾಲು ಚಾಚಿಕೊಂಡು ಆಸನದ ಮೇಲೆ ಒರಗಿ ಕುಳಿತಿದ್ದನು. ಗಂಗಾ ದೇವಿಯೂ ಕೂಡ ಹೊಂಬಣ್ಣದ ಆಭೂಷಣಗಳನ್ನು ಧರಿಸಿ ಮಧುರ ಸ್ವರದಲ್ಲಿ ಹಾಡುತ್ತಿದ್ದಳು. ಆಶ್ರಮದ ವಿಶಾಲ ಭವನವು ಸೂರ್ಯದೇವನ ಕೃಪಾಕಟಾಕ್ಷಕ್ಕೆ ಪಾತ್ರವಾಗಿ ಕಂಗೊಳಿಸುತ್ತಿತ್ತು.

ದಾನನಾಥನು ಸ್ವಲ್ಪ ಹೊತ್ತು ಅಲೆಗಳೊಡನೆ ಆಟವಾಡುತ್ತಿದ್ದು, ಅನಂತರ ಹೇಳಿದನು— "ಕೊನೆಗೂ ನೀನೇನು ನಿಶ್ಚಯಿಸಿರುವೆ ?"

ಅಮೃತರಾಯ ಕೇಳಿದ— "ಯಾವ ವಿಷಯದಲ್ಲಿ ?"

ದಾನ:— "ಇದೇ ನಿನ್ನ ಮದುವೆಯ ವಿಷಯದಲ್ಲಿ !"

ಅಮೃತ:— "ನನ್ನ ಮದುವೆ ಚಿಂತೆ ನಿನಗೇಕೆ ?"

ದಾನ:— "ಅಲ್ಲವಯ್ಯಾ ನೀನು ಪ್ರತಿಜ್ಞೆ ಮಾಡಿದ್ದುದು ಜ್ಞಾಪಕವಿದೆಯೇ ? ಅದನ್ನಾದರೂ ಪೂರ್ಣಗೊಳಿಸುವೆಯೋ ?"

ಅಮೃತ:— "ನಾನು ನನ್ನ ಪ್ರತಿಜ್ಞೆಯನ್ನು ನೆರವೇರಿಸಿದೆ."

ದಾನ:— "ಸುಳ್ಳು ಹೇಳುತ್ತಿರುವೆ. "

ಅಮೃತ:— "ಇಲ್ಲ ಸತ್ಯವೆಂದು ತಿಳಿ."

ದಾನ:— "ಖಂಡಿತ ಸುಳ್ಳು. ನೀನು ಯಾವಾಗ ಲಗ್ನಮಾಡಿಕೊಂಡೆ?"

ಅಮೃತ:–"ಆಗಲೇ ಮಾಡಿಕೊಂಡೆ, ಸತ್ಯವನ್ನೇ ನುಡಿಯುತ್ತಿರುವೆನು?"

ದಾನನಾಥನು ಕುತೂಹಲದಿಂದ ಅವನ ಕಡೆ ನೋಡುತ್ತಾ ಕೇಳಿದನು– "ಯಾರನ್ನಾದರೂ ಸದ್ದಿಲ್ಲದಂತೆ ಮನೆಗೆ ಕರೆತಂದು ಇಟ್ಟುಕೊಂಡೆಯೋ?"

ಅಮೃತ:— "ಇಲ್ಲಯ್ಯಾ, ವಾದ್ಯ ಘೋಷಣೆಗಳೊಡನೆಯೇ ಮಾಡಿಕೊಂಡೆ. ದೇಶವೇ ಮೋಹಿಸುವಂತಹ ಸ್ತ್ರೀ ಸಿಕ್ಕಿದ್ದಾಳೆ."

ದಾನ:— "ಸರಿ, ಅವಳೇನು ಅಪ್ಸರೆಯೇನು?"

ಅಮೃತ:— "ಹೌದಯ್ಯ, ಅಪ್ಸರೆಯರಿಗಿಂತಲೂ ಸುಂದರಿ!"

ದಾನ:— "ಈಗ ನನ್ನ ಕೈಯಿಂದ ಏಟು ತಿನ್ನುವೆ. ಯಾವಾಗ ಮದುವೆ ಮಾಡಿಕೊಳ್ಳಬೇಕೆಂದಿರುವೆಯೆಂಬುನ್ನು ಸ್ಪಷ್ಟವಾಗಿ ತಿಳಿಸು."

ಅಮೃತ:— "ನೀನು ಒಪ್ಪದೇ ಇದ್ದರೆ ನಾನೇನು ಮಾಡಲಿ?. ನನ್ನ ವಿವಾಹ ಆಗಲೇ ಆಗಿದೆ."

ದಾನ:— "ಎಲ್ಲಿ ಆಯ್ತು?"

ಅಮೃತ:— "ಇಲ್ಲಿಯೇ ಕಾಶಿಯಲ್ಲಿ."

ದಾನ:— "ಹಾಗಾದರೆ ನಿನ್ನ ಹೆಂಡತಿ ಆಕಾಶದಲ್ಲಿರುವಳೋ ಅಥವಾ ನಿನ್ನ ಹೃದಯದಲ್ಲೋ!"

ಅಮೃತ:— "ಇಲ್ಲವಯ್ಯಾ, ನನ್ನ, ನಿನ್ನ ಮತ್ತು ಪ್ರಪಂಚದವರ ಎದುರಿಗೆ ಇದ್ದಾಳೆ."

ದಾನ:— "ನಾನಂತೂ ನೋಡಲೇ ಇಲ್ಲ."

ಅಮೃತ:— "ಈಗ ತಾನೆ ನೋಡಿಕೊಂಡು ಬರುತ್ತಿದ್ದೀಯೆ ಮತ್ತು ಈಗಲೂ ನೋಡುತ್ತಿದ್ದೀಯೆ."

ದಾನನಾಥನು ಯೋಚಿಸಿ ಹೇಳಿದನು— "ಯಾರು? ಪೂರ್ಣಾ ಅಲ್ಲ ತಾನೆ?"

ಅಮೃತ:— "ಪೂರ್ಣಾಳನ್ನು ನಾನು ನನ್ನ ಸಹೋದರಿಯೆಂದು ತಿಳಿಯುತ್ತೇನೆ."

ದಾನ:— "ಹಾಗಾದರೆ ಮತ್ತಿನ್ನಾರು ? ನೀನು ನನಗೆ ತೋರಿಸಲಿಲ್ಲ?"

ಅಮೃತ:— "ಘಂಟೆಗಟ್ಟಲೆ ತೋರಿಸುತ್ತಿದ್ದೆ, ಈಗ ಮತ್ತೆ ಹೇಗೆ ತೋರಿಸಲಿ ? ಈಗಲೂ ತೋರಿಸುತ್ತಲೇ ಇದ್ದೇನೆ. ಅದೋ ನೋಡು. ಇಂತಹ ಸುಂದರಿಯನ್ನು ನೀನು ಬೇರೆಲ್ಲಿಯಾದರೂ ನೋಡಿದ್ದೀಯೋ? ನಾನು ಇಂತಿಂತಹ ಇನ್ನೂ ಅನೇಕ ಜೀವಗಳನ್ನು ಅದಕ್ಕೆ ಕಾಣಿಕೆಯಾಗಿ ಒಪ್ಪಿಸುತ್ತೇನೆ"

ದಾನನಾಥನು ಅಮೃತರಾಯನ ಆಶಯವನ್ನು ತಿಳಿದುಕೊಂಡು ಹೇಳಿದನು—"ಸರಿ, ಸರಿ ಈಗ ಅರ್ಥವಾಯಿತು."

ಅಮೃತ:— "ಇದರ ಸಂಗಡ ನನ್ನ ಜೀವನವು ಬಹಳ ಆನಂದದಿಂದ ಕಳೆದು ಹೋಗುವುದು. ಇದು ಏಕಪತ್ನೀವ್ರತದ ಸಮಯ. ಬಹು ವಿವಾಹಗಳನ್ನು ಮಾಡಿಕೊಳ್ಳುವ ಕಾಲ ಕಳೆದುಹೋಯಿತು."

ದಾನನಾಥನು ಗಂಭೀರ ಭಾವದಿಂದ ಹೇಳಿದನು— "ನೀನು ಈ ರೀತಿ ನಿನ್ನ ಪ್ರತಿಜ್ಞೆಯನ್ನು ಪಾಲಿಸುವೆಯೆಂದು ತಿಳಿದಿದ್ದರೆ, ನಾನು ಪ್ರೇಮಾಳನ್ನು ಖಂಡಿತ ಮದುವೆಯಾಗುತ್ತಿರಲಿಲ್ಲ. ಆಗ ನೋಡುತ್ತಿದ್ದೆ, ನೀನು ವಿವಾಹ ಬಂಧನದಿಂದ ಹೇಗೆ ತಪ್ಪಿಸಿಕೊಳ್ಳುತ್ತಿದ್ದೆಯೆಂದು."

ಅಮೃತರಾಯನ ಕೈಗಳು ನಿಂತು ಹೋದುವು. ಹುಟ್ಟು ಹಾಕಬೇಕೆಂಬ ಪ್ರಜ್ಞೆಯೂ ಅವನಲ್ಲಿರಲಿಲ್ಲ. ಹೇಳಿದ—"ನಾನು ಪ್ರೇಮಾಳ ಮೇಲಿನ ಮೋಹವನ್ನು ತೊರೆದಾಗಲೇ ನೀನು ಇದನ್ನು ತಿಳಿದುಕೊಳ್ಳಬೇಕಾಗಿತ್ತು. ಪ್ರೇಮಾ ಈ ವಿಷಯವನ್ನು ಚೆನ್ನಾಗಿ ತಿಳಿದಿದ್ದಳು. ಬೇಕಾದರೆ ಅವಳನ್ನು ಕೇಳಿ ನೋಡು."

ಪೃಥ್ವಿಯು ಶ್ಯಾಮವರ್ಣವನ್ನು ತಳೆದಿತ್ತು. ಹರಿಗೋಲು ಅಲೆಗಳ ಮೇಲೆ ನರ್ತಿಸುತ್ತಾ ಹೋಗುತ್ತಿತ್ತು. ಅದೇ ಹರಿಗೋಲಿನಂತೆ ಅಮೃತರಾಯನ ಹೃದಯವೂ ಅಲ್ಲೋಲಕಲ್ಲೋಲವಾಗುತ್ತಿತ್ತು. ಆದರೆ ದಾನನಾಥನು ನಿಸ್ಪಂದನಾಗಿ ಕುಳಿತಿದ್ದನು. ಸಿಡಿಲು ಬಡಿದವನಂತಾಗಿದ್ದನು. ತಕ್ಷಣವೇ ಅವನ ಬಾಯಿಂದ ಹೊರಟ ಮಾತುಗಳಿವು— "ಅಣ್ಣಾ, ನೀನು ನನ್ನನ್ನು ಮೋಸಗೊಳಿಸಿದೆ !!"

